ಮಿಂಚಿನ ಬಳ್ಳಿಯ ೫ನೆಯ ವರುಷದ ಒಂದನೆಯ ಕುಡಿ

# ಸತ್ವಶಾಲಿ ರಶಿಯಾ



ಬರೆದವರು:

ಶ್ರೀ. ನಿತ್ಯನಾರಾಯಣ ಬ್ಯಾನರ್ಜಿ.

ಅನುವಾದಕರು:

ಡಿ. ಎಸ್. ಶರ್ಮರು



ಚಾಲುಕ್ಯ ವಿಕ್ರಮ ವರುಷ ೮೬೭

ಚೈತ್ರಶುದ್ಧ ಪ್ರತಿಪದೆ



೧೯೪೨

ಬೆಲೆ: ೧-೪-೦

ಮುದ್ರಕರು :
ಕೆ. ಜಿ. ರಾಯದುರ್ಗ,
ಮೋಹನ ಮುದ್ರಣಾಲಯ,
ಧಾರವಾಡ.

ಪ್ರಕಾಶಕರು :
ಶ್ರೀ. ಬಿ. ಜಿ. ಅವಧಾನಿ,
ಮಿಂಚಿನ ಬಳ್ಳಿಯ ಚಾವಡಿ,
ದೇಸಾಯಿ ಬೀದಿ, ಧಾರವಾಡ,

# ಮೂಲ ಲೇಖಕರ ಮುನ್ನುಡಿ



ನಾಗರಿಕತೆಯು ಅಭಿವೃದ್ಧಿಯಾದಂತೆ ಮಾನವಜಾತಿಯು ಪ್ರಪಂಚದಲ್ಲಿ ಸುಖ-ಸಂಪತ್ತು ಪಡೆಯಲು ನಿರಂತರವೂ ಹೊಸ ಹೊಸ ಆಲೋಚನೆಗಳೂ, ಸಿದ್ಧಾಂತಗಳೂ ಸೃಷ್ಟಿಯಾಗುತ್ತಿವೆ. ಅವುಗಳಲ್ಲಿ 'ಕಮ್ಯೂನಿಸಿಜಂ' ತತ್ವವು ವಿಶೇಷ ನೂತನವಾದುದು. ಇಲ್ಲಿಯ ವರೆಗೂ ಪ್ರಪಂಚವು ಯಾವ ಸಿದ್ಧಾಂತಗಳನ್ನನುಸರಿಸಿ ನಡೆಯುತ್ತಿರುವುದೋ ಅವೆಲ್ಲ ಸಾಮಾನ್ಯ ಪ್ರಜೆಗಳಿಗೆ ಅಪಕಾರ ಮಾಡುತ್ತಿರುವುವೆಂದು ಕಮ್ಯೂನಿಸ್ಟರ ವಾದ. ಸಾಮ್ರಾಜ್ಯವಾದ, ಪ್ರಜಾತಂತ್ರವಾದ ಫ್ಯಾಸಿಜಂ ಮುಂತಾದುವೆಲ್ಲ ಸಮಾಜದಲ್ಲಿರುವ ಒಂದೇ ಒಂದು ಪ್ರತ್ಯೇಕ ವರ್ಗದವರ ಲಾಭಕ್ಕಾಗಿ. ಆ ವರ್ಗವಾದರೂ 'ಅಲ್ಪಸಂಖ್ಯಾಕರದೆಂದು ಕಮ್ಯೂನಿಸ್ಟರ ವಾದ. ಆದುದರಿಂದ ಜನಸಾಮಾನ್ಯರನ್ನು ಅಭಿವೃದ್ಧಿಯಲ್ಲಿ ತಂದು, ಜಗತ್ತನ್ನು ಸುಖಸಮೃದ್ಧಿಯಿಂದ ತುಂಬಿ ತುಳುಕಿಸಲು 'ಕಮ್ಯೂನಿಸಿಜಂ' ಮಾತ್ರ ಉಪಯೋಗವೆನ್ನುವರು. ಕಾರ್ಲ್ ಮಾರ್ಕ್ಸನು ಬೋಧಿಸಿದ ಈ ಆರ್ಥಿಕ ಸಿದ್ಧಾಂತಗಳನ್ನು 'ನಿಕೊಲಾಯ್ ಲೆನಿನ್' ರಷ್ಯಾದಲ್ಲಿ ಕಾರ್ಯರೂಪಕ್ಕೆ ತಂದನು. ಈ ನೂತನ ಸಿದ್ಧಾಂತಗಳ ಪ್ರಕಾರ ರಷ್ಯಾ ಹೇಗೆ ಸುಧಾರಿಸಹತ್ತಿದೆ ಎಂಬುದನ್ನು ಜಗತ್ತೆಲ್ಲ ನೋಡುತ್ತಿದೆ.

ರಷ್ಯನರು ಈವರೆಗೆ ಕಮ್ಯೂನಿಸ್ಟರಲ್ಲ. ಸೋಷಿಯಾಲಿಸ್ಟ್ ಪದ್ಧತಿಗಳಂತೆ ಈವರೆಗೂ ನಡೆದುಕೊಳ್ಳುತ್ತಿರುವರು. ಈ ಮಾರ್ಗವೇ ಸಮಸ್ತ ಆದರ್ಶವಾದ ಕಮ್ಯೂನಿಜಂಗೆ ಹಾದಿಯೆಂದು ಅವರ ನಂಬುಗೆ.

ಇಂದು ಪ್ರಪಂಚದಲ್ಲಿ ವಿವೇಕಶಾಲಿ (Intellectuals) ಗಳಾದವರು ಅಂತರಂಗ ಬಹಿರಂಗವಾಗಿ ಕಮ್ಯೂನಿಸ್ಟ್ ಸಿದ್ಧಾಂತಗಳನ್ನು ಆರಾಧಿಸುತ್ತಿರುವರು. ಎಲ್ಲ ಕಡೆಗಳಲ್ಲೂ ಕಾರ್ಮಿಕ ಮುಷ್ಕರಗಳು, ಹರತಾಳಗಳು, ರೈತರ ಕ್ರಾಂತಿಗಳು, ಕಮ್ಯೂನಿಸ್ಟರ ಕಾದಾಟ ಮೊದಲಾದುವು ಆಗಾಗ್ಗೆ ನಡೆಯುತ್ತಿವೆ. ಆದರೆ ಇವುಗಳಲ್ಲಿ ಭಾಗವಹಿಸಿದವರಿಗೆ, 'ಮಾರ್ಕ್ಸ್—ಲೆನಿನ್' ಸಿದ್ಧಾಂತಗಳನ್ನು ಕಾರ್ಯರೂಪದಲ್ಲಿ ತರಲು ಎಂತಹ ತೊಂದರೆಗಳುಂಟಾಗುತ್ತಿವೆಯೋ ತಿಳಿಯದ ಮಾತು.

ಕ್ರಾಂತಿಕಾರರ ಭಯಂಕರ ಸುದ್ದಿಗಳಿಂದ ವಿದೇಶೀಯ ವೃತ್ತಪತ್ರಿಕೆಗಳು ತಮ್ಮ ಹಾಳೆಗಳನ್ನು ಕಪ್ಪುಮಾಡುವುದನ್ನು ನೋಡಿ, ಆಕರ್ಷಿತನಾಗಿ, ಆ ರಹಸ್ಯಮಯ ದೇಶವನ್ನು ಕಣ್ಣಾರೆ ನೋಡಬೇಕೆಂದು ೧೯೩೩ರಲ್ಲಿ ಹೊರಟು ಅವಕಾಶವಿದ್ದ ಸ್ವಲ್ಪಕಾಲದಲ್ಲಿ ನೋಡಬೇಕಾದುದನ್ನೆಲ್ಲ ನೋಡಿದೆನು. ಮರಳಿದ ಮೇಲೆ 'Modern Review' 'ವಿಶಾಲ ಭಾರತಿ'ಗಳಲ್ಲಿ ಲೇಖನಗಳನ್ನು ಬರೆದೆನು. ಅವು ಓದುಗರ ಮನಸ್ಸನ್ನು ಹೆಚ್ಚಾಗಿ ಸೆಳೆದುದರಿಂದ ನನ್ನ ಯಾತ್ರೆಯ ವೃತಾಂತ್ತವೆಲ್ಲವನ್ನು ಪುಸ್ತಕರೂಪದಲ್ಲಿ ಪ್ರಕಟಿಸಿದ್ದೇನೆ. ರಷ್ಯಾ ವಿಚಾರವಾಗಿ ಪುಸ್ತಕಗಳನ್ನು ಬರೆಯುವವರು ರಷ್ಯನ್ ಶಬ್ದಗಳನ್ನು ಅನೇಕ ವಿಧವಾಗಿ ಉಚ್ಚರಿಸುತ್ತಾರೆ. ಆದುದರಿಂದ ಉಚ್ಚಾರಣೆಯಲ್ಲಿ ಪಾಠಕರಿಗೆ ಬಹಳ ವ್ಯತ್ಯಾಸ ಕಂಡುಬರುವುದು ಸಹಜವಿದೆ.

ವಿಷಯದ ಮೇರೆಗೆ ಅಧ್ಯಾಯಗಳನ್ನು ಮಾಡದೆ, ಸಂಚಾರದಲ್ಲಿ ನೋಡಿದುವನ್ನು ಅಲ್ಲಲ್ಲಿಯೇ ಬರೆದಿರುವುದರಿಂದ ಒಂದೇ ವಿಚಾರವನ್ನು ತಿಳಿಯಲು ಎರಡು ಮೂರು ಅಧ್ಯಾಯಗಳನ್ನು ನೋಡಬೇಕಾಗಿ ಬರುವುದು. ಇದಕ್ಕಾಗಿ ಪಾಠಕರು ನನ್ನನ್ನು ಮನ್ನಿಸಬೇಕಾಗಿದೆ.

ಮೇ, ೧೯೩೪<br>
ಲವಪುರ ವೀರಭೂಮಿ

ನಿತ್ಯನಾರಾಯಣ ಬೆನರ್ಜಿ

# ಅನುವಾದಕರ ನುಡಿ

ಶ್ರೀ. ನಿತ್ಯನಾರಾಯಣ ಬ್ಯಾನರ್ಜಿ ಅವರು Rusia Today ಎಂಬ ಗ್ರಂಥವನ್ನು ಇಂಗ್ಲಿಷಿನಲ್ಲಿ ಬರೆದಿದ್ದಾರೆ. ಅವರು ಸ್ವತಃ ರಶಿಯಾ ದೇಶಕ್ಕೆ ಹೋಗಿ ತಮಗೆ ಪ್ರತ್ಯಕ್ಷವಾಗಿ ಕಂಡು ಬಂದ ಸಂಗತಿಗಳ ವಿವರಗಳನ್ನೇ ಇಲ್ಲಿ ಕೊಟ್ಟಿದ್ದಾರೆ. ಕನ್ನಡ ಬಲ್ಲ ವಾಚಕರಿಗೆ ಉಪಯೋಗ ಬೀಳಲೆಂದು ಬಗೆದು ನಾನು ಈ ಗ್ರಂಥವನ್ನು ಅನುವಾದಿಸಿಟ್ಟಿದ್ದೆ. ಮಿಂಚಿನ ಬಳ್ಳಿಯ ಸಂಪಾದಕರು ಇದನ್ನು ಪ್ರಕಟಿಸುವ ಹೊಣೆ ಹೊತ್ತುದ್ದರಿಂದ ಈಗ ಅದು ಗ್ರಂಥರೂಪವಾಗಿ ಬೆಳಕು ಕಾಣುತ್ತಿದೆ. ಅದಕ್ಕಾಗಿ ಅವರಿಗೆ ನಾನು ಕೃತಜ್ಞನು. ಅದರಂತೆ ಕನ್ನಡ ಸಾಹಿತ್ಯಾಭಿಮಾನಿಗಳು ನಾನು ಅನುವಾದಿಸಿರುವ ಈ ಗ್ರಂಥವನ್ನು ಆದರದಿಂದ ಬರಮಾಡಿಕೊಳ್ಳುವರೆಂದು ನಂಬಿರುವೆ.

**ದೊಡ್ಡಸಿದ್ದವ್ವನಹಳ್ಳಿ** **ಡಿ. ಎಸ್. ಶರ್ಮ**

# ಸಂಪಾದಕರ ಅರಿಕೆ

ಶ್ರೀ. ನಿತ್ಯನಾರಾಯಣ ಬ್ಯಾನರ್ಜಿಯವರು ೧೯೩೩ ರಲ್ಲಿ Russia Today ಎಂಬ ಗ್ರಂಥವನ್ನು ಬರೆದಿದ್ದಾರೆ. ಅದರ ಕನ್ನಡದ ರೂಪವಾದ ಈ '**ಸತ್ವಶಾಲಿ ರಶಿಯಾ**' ಪುಸ್ತಕವು ಹೊಸೆಯ ವರುಷದ ಮೊದಲ ಕುಡಿಯು. ಇದನ್ನು ಅನುವಾದಿಸಿ ನಮ್ಮ ಒಳ್ಳಿಯಲ್ಲಿ ಪ್ರಕಟಿಸಲು ಅನುಮತಿಯನ್ನಿತ್ತ ಶ್ರೀಮಾನ್ ಡಿ. ಎಸ್. ಶರ್ಮರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ. ಈ ಪುಸ್ತಕದ ಹಸ್ತಪ್ರತಿಯನ್ನು ನೋಡಿ, ಅಲ್ಲಲ್ಲಿ ತಿದ್ದಿ ನೆರವಾದ 'ದೀಪಮಾಲೆ'ಯ ಕರ್ತರಾದ ಶ್ರೀ. ಸಿದ್ದವ್ವನಹಳ್ಳಿ ಕೃಷ್ಣಶರ್ಮರಿಗೆ ನಾವು ಉಪಕೃತರಾಗಿರುವೆವು. ಅದರಂತೆ

ಈ ಪುಸ್ತಕಕ್ಕೆ ಪೂರಕವಾಗುವಂಥ ಹಿನ್ನುಡಿ ನಾವು ಕೊಟ್ಟ ತೊಂದರೆ ಯನ್ನು ಸಹಿಸಿಯೂ ಬರೆದುಕೊಟ್ಟ 'ಮದುವೆ'ಯ ಕರ್ತರಾದ ಶ್ರೀಮಾನ್ ಸೆಗಳೂರು ರಂಗನಾಥರಿಗೆ ನಾವು ಎಂದಿಗೂ ಕೃತಜ್ಞ ರಾಗಿರುವೆವು.

ಮಿಂಚಿನ ಬಳ್ಳಿಯು ಈ ನಾಲ್ಕು ವರುಷ ತನ್ನ ಶಕ್ತಿ ಮೀರಿ ಸೇವೆ ಯನ್ನು ಸಲ್ಲಿಸಿದೆ ಎಂದರೆ ತಪ್ಪಾಗದು. ಇನ್ನೂ ಹೆಚ್ಚಾಗಿ ಸೇವೆ ಸಲ್ಲಿ ಸುವ ಸಂಕಲ್ಪವಿದೆ. ಅದು ಸಾಧಿಸಿ, ಸಿದ್ಧಿಯಾಗಲು ಮಾತ್ರ ಅಷ್ಟೊಂದು ಅನುಕೂಲ ಕಾಲ ಮಾತ್ರ ಬರಬೇಕು. ಓದುಗರ ಸಂಖ್ಯೆ ಬೆಳೆಯು ತ್ತಿದೆ ಎಂದರೂ ಚಂದಾದಾರರ ಸಂಖ್ಯೆ ತೀರ ಕಡಿಮೆ. ಕೊಳ್ಳುವವರು ಅದಕ್ಕೂ ಕಡಿಮೆ. ಈಗಂತೂ ಕಾಗದದ ಬೆಲೆ ಮಿತಿಮೀರಿ ಏರಿದೆ. ಏರುತ್ತಲೂ ಇರುವುದರಿಂದ, ಕಾಗದ ದೊರೆಯುವುದು ದುರ್ಲಭವಾಗಿದೆ. ಇಂಥಿನೆಲ್ಲ ತೊಂದರೆಗಳನ್ನು ಸಹಿಸಿ ಮಿಂಚಿನ ಬಳ್ಳಿಯು ತಲೆಯೆತ್ತಿ ಬಾಳಬೇಕಾಗಿದೆ. ವಾತಾವರಣವು ಸಾನುಕೂಲವಿದ್ದು ಧೈರ್ಯವನ್ನು ಕೊಡುತ್ತಿದೆ. ಚಂದಾಹಣವು ಮುಂಗಡವಾಗಿ ಬರಬೇಕು. ಅದು ಬಿಟ್ಟು ಅನೇಕ ಚಂದಾದಾರರಿಂದ ವರುಷ ಮುಗಿದರೂ ಚಂದಾಹಣವು ಕೈ ಸೇರಿರುವದಿಲ್ಲ. ಅಂಥವರು ಚಂದಾಹಣವು ಮುಂಗಡ ಸಲ್ಲುವಂತೆ ಮಾಡಿ ಈ ಬಳ್ಳಿಯ ಉತ್ತರೋತ್ತರ ಅಭಿವೃದ್ಧಿಗೆ ನೆರವಾಗಬೇಕೆಂದು ಬಿನ್ನವಿಸದಿರೆವು. ಮಿಂಚಿನ ಬಳ್ಳಿಯು ತಾನು ಸಂಕಲ್ಪಿಸಿದ ಸಿದ್ಧಿಯನ್ನು ಪಡೆಯಲು ಹೆಣಗಾಡುವದು. ಅದಕ್ಕೆ ಕನ್ನಡ ಸಾಹಿತ್ಯಾಭಿಮಾನಿ ಗಳ, ಅಭಿರುಚಿಯುಳ್ಳವರ ನೆರವು ಮಾತ್ರ ದೊರೆಯುತ್ತಿರಬೇಕು— ದೊರೆಯುವಂತೆ ಕನ್ನಡರೆಲ್ಲರೂ ಸಹಾಯ ಸಹಾನುಭೂತಿಗಳಿಂದ ಮಿಂಚಿನ ಬಳ್ಳಿಯನ್ನು ಬರಮಾಡಿಕೊಳ್ಳುವರೆಂದು ನಂಬಿರುವ,

ಸಂಪಾದಕರು

**ಮಿಂಚಿನ ಬಳ್ಳಿ, ಧಾರವಾಡ.**

---

ಮಿಂಚಿನ ಬಳ್ಳಿಯ ಮುಂದಿನ ಕುಡಿ

# 'ಪ್ರಸುಪ್ತ ಕರ್ನಾಟಕ'



ಬರೆದವರು :

ಶ್ರೀಮಾನ್ ದ. ರಾ. ಬೇಂದ್ರೆ, ಎಂ. ಎ.

# ಪರಿವಿಡಿ

ವಾರ್ಷಿಕ ಚಂದಾ ೩—೮—೦ (ಅ. ವೆ. ಸೇರಿ)

ಮೂರು ತಿಂಗಳಿಗೊಂದು.

# ಮಿಂಚಿನಬಳ್ಳಿ, ಧಾರವಾಡ

**ಪ್ರಾರಂಭ : ಚಾಲುಕ್ಯ ವಿಕ್ರಮ ವರುಷ ೮೬೨ (೧೯೩೭)**

**ವರುಷಕ್ಕೆ ೧೫೦ ಪುಟಗಳುಳ್ಳ ನಾಲ್ಕು ಗ್ರಂಥಗಳು**

## ೧ನೆಯ ವರುಷ

| | | | | |
|---|---|---|---|---|
| ೧. | ಕರ್ನಾಟಕ ದರ್ಶನ (೨ನೆಯ ಆವೃತ್ತಿ ಹೊರಡಲಿದೆ.) | ೧ | ೦ | ೦ |
| ೨. | ತರುಣ ತುರ್ಕಸ್ಥಾನ (ಕಮಾಲಪಾಶಾ) ತೀರಿವೆ . | ೧ | ೦ | ೦ |
| ೩. | ಮಿಂಚಿನ ಮಹಿಳೆಯರು . . . . ತೀರಿವೆ . | ೧ | ೦ | ೦ |
| ೪. | ಸಾಮ್ಯವಾದ . . . . . . . . . . . . . | ೧ | ೦ | ೦ |

## ೨ನೆಯ ವರುಷ

| | | | | |
|---|---|---|---|---|
| ೫. | ಭಾರತೀಯ ಸ್ವಾತಂತ್ರ್ಯದ ಹೆಜ್ಜೆಗಳು . . . . | ೧ | ೪ | ೦ |
| ೬. | ಮುಂದುವರಿದ ಜಪಾನ (೧ನೆಯ ಭಾಗ) . . . . | ೧ | ೦ | ೦ |
| ೭. | ,, (೨ನೆಯ ಭಾಗ) . . . . | ೧ | ೦ | ೦ |
| ೮. | ಕನ್ನಡ ಸಾಹಿತ್ಯವಾಹಿನಿ . . . . . . . . | ೧ | ೦ | ೦ |

## ೩ನೆಯ ವರುಷ

| | | | | |
|---|---|---|---|---|
| ೯. | ಭಾರತದ ರಾಜಕೀಯ ಸಮಸ್ಯೆ . . ತೀರಿವೆ . | ೧ | ೦ | ೦ |
| ೧೦. | ಮದುವೆ . . . . . . . . . . . . . . | ೧ | ೦ | ೦ |
| ೧೧. | ದೀಪಮಾಲೆ . . . . . . . . . . . . . | ೧ | ೦ | ೦ |
| ೧೨. | ನಾಡಪಾಡುಗಳು . . . . . . . . . . . | ೧ | ೦ | ೦ |

## ೪ನೆಯ ವರುಷ

| | | | | |
|---|---|---|---|---|
| ೧೩. ೧೪. | ಬ್ರಹ್ಮೋಪಾಸನೆ . . . . . . . . . . . | ೧ | ೮ | ೦ |
| ೧೫. | ತಕ್ಕಡಿ . . . . . . . . . . . . . . | ೧ | ೪ | ೦ |
| ೧೬. | ಕುಮಾರ ರಾಮ . . . . . . . . . . . . | ೧ | ೦ | ೦ |

## ೫ನೆಯ ವರುಷ

| | | | | |
|---|---|---|---|---|
| ೧೭. | ಸತ್ವಶಾಲಿ ರಶಿಯಾ . . . . . . . . . . | ೧ | ೪ | ೦ |
| ೧೮. | ಪ್ರಸುಪ್ತ ಕರ್ನಾಟಕ . . . . . . . . . | (ಅಚ್ಚಿನಲ್ಲಿ) | | |

ವ್ಯವಸ್ಥಾಪಕ, **ಮಿಂಚಿನಬಳ್ಳಿ, ಧಾರವಾಡ.**

# ಸತ್ತ್ವಶಾಲಿ ರಶಿಯಾ

## ಪ್ರಥಮ ದರ್ಶನ

'ಫಿನ್‌ಲೆಂಡ'ನ ರಾಜಧಾನಿಯಾದ 'ಹೆಲ್ಸಿಂಗ್ ಫೋರ್ಸ್'ನ್ನು ಬಿಟ್ಟು, ಹದಿನಾಲ್ಕು ಗಂಟೆ ಪ್ರಯಾಣಮಾಡಿ, ರೈಲು 'ಲೆನಿನ್‌ಗ್ರಾಡು' ಸ್ಟೇಶನ್ನಿನಲ್ಲಿ ನಿಂತಿತು. ನಾನೂ ರೈಲಿಳಿದೆ.

ಜನವರಿ ತಿಂಗಳು. ಚೆನ್ನಗೆ ಮಂಜು ಎಡೆಬಿಡದೆ ಸುರಿಯುತ್ತಿದೆ. ಮಂಜು ಭೂಮಿಯ ಹಚ್ಚನೆಯತನವನ್ನು ಮರೆಮಾಚಿ, ಬಿಳಿಯ ಬಟ್ಟೆಯನ್ನು ಮೇಲೆ ಹೊದಿಸಿದಂತಿದೆ. ಹಸುರು ಹುಲ್ಲುಗಾವಲುಗಳು, ಹಚ್ಚನೆಯ ಹೊಲಗಳು ಬೆಳ್ಳಗಾಗಿರುವುವು. ಮನೆಗಳ ಮೇಲ್ಛಾವಣಿಗಳೆಲ್ಲ ಬಿಳಿದಾಗಿರುವುವು. ಹಚ್ಚಗೆ ತಲೆಯೆತ್ತಿಕೊಂಡಿರುವ ಮರಗಳೂ ಬಿಳಿಯ ಮಂಜಿನ ಭಾರಕ್ಕೆ ಬಗ್ಗಿಹೋಗಿರುವುವು. ಅಬ್ಬಾ! ಆ ಬೇಗಿನ ಚಳಿ ಎಷ್ಟೊಂದು! ನರಗಳೆಲ್ಲಾ ಜಗಿಯುತ್ತಿರುವುವು. ಅಂತಹ ಚಳಿಯನ್ನು ನಾನು ಬದುಕಿರುವವರೆಗೂ ಮರೆಯಲಾರೆ. ಸೆಂಟಿಗ್ರೇಡು-ಥರ್ಮಾಮೀಟರಿನಲ್ಲಿ ಪಾದರಸವು ಸೊನ್ನೆಗಿಂತ ೩೦° ಡಿಗ್ರಿ ಕಡಿಮೆಯಾಗಿ ಕಾಣುತ್ತಿರುವುದು. ಅಂದರೆ ಮನುಷ್ಯನ ಶರೀರ ತಾಪಕ್ಕಿಂತಲೂ ೧೦೩° ಡಿಗ್ರಿಗಳಿಗಿಂತಲೂ ಕಡಿಮೆ ಎಂದಂತೆ.

ಎರಡು ಮೂರು ನಿಮಿಷಗಳಲ್ಲಿ ರೈಲೆಲ್ಲ ಖಾಲಿಯಾಯಿತು. ನನ್ನ ಗಾಡಿಯಲ್ಲಿಯೇ ಇಂಗ್ಲೀಷು ಮಾತನಾಡುತ್ತಿದ್ದ ಒಬ್ಬ ದೊಡ್ಡ ಮನುಷ್ಯನಿದ್ದುದರಿಂದ 'ಯಾತ್ರಿಕ ಶಾಖೆಯವರ' ಏಜಂಟರನ್ನು ತಿಳಿದುಕೊಳ್ಳಲು ಸ್ವಲ್ಪ ಸಹಾಯಮಾಡಿರೆಂದು ಆತನನ್ನು ಪ್ರಾರ್ಥಿಸಿದೆನು. ವಿದೇಶೀಯ ಪ್ರಯಾಣಿಕರಿಗೆ ಅಲ್ಪ ವ್ಯಯದಲ್ಲಿಯೇ ನೋಡಬೇಕಾದ ಮುಖ್ಯ ಸ್ಥಳಗಳನ್ನು ತೋರಿಸಲು 'ಯಾತ್ರಿಕ ಶಾಖೆ' ಯೊಂದನ್ನು ರಷ್ಯಾಪ್ರಭುತ್ವದವರು ಏರ್ಪಡಿಸಿರುವರು. ನಾನೂ ಆ ಯಾತ್ರಿಕ ಶಾಖೆಯವರ ಸಹಾಯದಿಂದಲೇ ರಷ್ಯಾದೇಶದಲ್ಲಿ ಸಂಚರಿಸಿದೆನು. ಆ ದೊಡ್ಡ ಮನುಷ್ಯನು ನನ್ನ ಸಾಮಾನನ್ನು ಸಹ ತನ್ನ ಕೂಲಿಯ ತಲೆಯ ಮೇಲೆ ಹೇರಿ, ಆ 'ಯಾತ್ರಿಕ ಶಾಖೆ' ಯವರ ಏಜಂಟರನ್ನು ಹುಡುಕಲಾರಂಭಿಸಿದನು. 'ಕೋಪನ್ ಹೇಗನ್' ನಲ್ಲಿ ರಷ್ಯಾಯಾತ್ರೆಗೆ ಟಿಕೆಟ್ಟು ಕೊಂಡು ಕೊಂಡಾಗ, 'ಲೆನಿನ್ ಗ್ರಾಡ್' ಸ್ಟೇಷನ್ನಿನಲ್ಲಿ ನಾನಿಳಿದ ಕೂಡಲೇ, ಅವರ ಏಜಂಟನು ಬಂದು ನನ್ನನ್ನು ಕಾಣುವನೆಂದು ಆ ವ್ಯವಸ್ಥಾಪಕನು ತಿಳಿಸಿದ್ದನು.

ನಾವು ಐದು ನಿಮಿಷಗಳವರೆಗೂ ಏಜಂಟರಿಗಾಗಿ ನೋಡುತ್ತಾ ನಿಂತಿದ್ದೆವು. ಉಷ್ಣದೇಶವಾಸಿಯಾದ ನನಗೆ ಈ ಐದು ನಿಮಿಷಗಳೇ ಸಾಕು ರಕ್ತವು ಹೆಪ್ಪುಕಟ್ಟಲಿಕ್ಕೆ. ಕೈಗಳು ಚಳಿಗೆ ಕಟ್ಟಿಗೆಯಾಗುತ್ತಿವೆ. ಕಾಲುಬೆರಳುಗಳು ಬಿಗಿಯುತ್ತಿವೆ. ಕಿವಿಗಳು ಕೆಂಪೇರಿವೆ. ತಲೆಯ ಮೇಲಿನ ರುಮಾಲು ನೆನೆದಿದೆ. ನರಗಳೆಲ್ಲ ಎಳೆಯುತ್ತಿವೆ. ಅಬ್ಬಾ! ಈ ಚಳಿಯು ಎಂತಹ ಭಯಂಕರವಾಗಿದೆ! ಆದರೆ ಮಾಡುವುದೇನು? ನನಗಾರು ದಿಕ್ಕು! ಯಾರ ಮರೆಹೊಗಬೇಕು! ನನಗೆ ಈ ದೇಶದಲ್ಲಿ ಮಾತನಾಡುವ ಭಾಷೆಯ ಒಂದಕ್ಷರವಾದರೂ ತಿಳಿಯದು. ಆದರೆ ಅದೇನು ಅಷ್ಟು ಬಾಧಕವಾಗಿ ನನಗೆ ಕಾಣುತ್ತಿಲ್ಲ; ಇರುವ ತೊಂದರೆಯೇನೆಂದರೆ ಇದು ಎಲ್ಲಾ ದೇಶಗಳ ಹಾಗಲ್ಲ. ಇಲ್ಲಿನ ಕಾನೂನು ಕಟ್ಟಳೆಗಳೇ ಬೇರೆ. ಇದು ಪ್ರಪಂಚದಲ್ಲೆಲ್ಲಾ ವಿಪರೀತವಾದುದು. ಇಲ್ಲಿ ಧನಿಕರನ್ನು ದುರ್ಮಾರ್ಗಿಗಳೆಂದೂ ಸಮಾಜದ್ರೋಹಿಗಳೆಂದೂ ಗಣನೆಮಾಡುತ್ತಾರೆ. ಈ ಭಯದಿಂದಲೇ ನಾನು ಕೂಲಿಯವನನ್ನು ಕರೆಯಲಾರದೆ ಹೋದೆ.

ಇಲ್ಲಿ ಕೂಲಿಯವನಿಗೆ ಯಾವ ರೀತಿ ಏನು ಕೂಲಿಕೊಡಬೇಕೋ ಯಾರಿಗೆ
ಗೊತ್ತು? ಸುಮ್ಮನೆ ಕೂಲಿಯವನ ಕೈಲಿ ಕಾಸಿಟ್ಟರೆ, ಸಮಾಜವಾದದ
ಪ್ರಭುತ್ವವು ನನ್ನನ್ನು ದೋಷಿಯೆಂದು ಸೆರೆಹಿಡಿದರೆ? ಹಾಗಾದರೆ ಈ
ಚಳಿಯನ್ನು ಸಹಿಸುವುದು ಹೇಗೆ? ನಾನು ಆ 'ಪ್ಲ್ಯಾಟ್‌ಫಾರಂ' ಮೇಲೆ
ಹಾಗೂ ಹೀಗೂ ಅಡ್ಡಾಡಲಾರಂಭಿಸಿದೆನು. ಅದರಿಂದ ಸ್ವಲ್ಪ ಮೈ
ಬೆಚ್ಚಗಾಯಿತು. ಪ್ರಭುತ್ವದವರು ಮಾಡಿರುವ ವ್ಯವಸ್ಥೆಯಲ್ಲಿ ವಿದೇಶೀ
ಯರು ತಮ್ಮ ದೇಶದಲ್ಲಿ ಸಂಚಾರಮಾಡಲು ಬಂದಾಗ ಅದರಲ್ಲಿಷ್ಟು
ಉಪೇಕ್ಷೆಯೋ? ಇಂತಹ ನಿಷ್ಕರುಣೆಗೆ ನನ್ನನ್ನು ನಾನೇ ದೂರಿ
ಕೊಂಡೆನು.

ಇಷ್ಟರಲ್ಲಿ 'ಒಬ್ಬ ಯುವತಿಯು ಬಂದು 'ನೀವೇನೇ 'ಕೋಪನ್-
ಹೇಗನ್' ನಿಂದ ಬಂದುದು?' ಎಂದು ಸ್ವಚ್ಛವಾದ ಇಂಗ್ಲೀಷು ಮಾತಿ
ನಲ್ಲಿ ಕೇಳಿದಳು.

'ಹೌದು. ನೀವು ಯಾತ್ರಿಕ ಶಾಖೆಯವರ ಪ್ರತಿನಿಧಿಯೇನು?'
ಎಂದೆ ನಾನು. ಆಕೆಯು ಹೌದೆಂದಳು.

ತಡವಾಯಿತೆಂದು ಕ್ಷಮೆಯನ್ನು ಕೇಳದೆ, ಕೂಲಿಯವನಿಗೆ
ಸಾಮಾನನ್ನೆಲ್ಲಾ ಹೊರಿಸಿ, ಸ್ಟೇಷನ್ನಿನ ಹೊರಗಿರುವ ಮೋಟಾರಿನಲ್ಲಿ
ಇಡಿಸಿದಳು. ಅದನ್ನು ಕಂಡು ನನಗೆ ಸ್ವಲ್ಪ ಸಮಾಧಾನ ವಾಯಿತು;
ಬದುಕಿದೆನೆಂದುಕೊಂಡೆ. ನಾವಿಬ್ಬರೂ ಹೋಗಿ ಮೋಟಾರಿನಲ್ಲಿ ಕುಳಿತು
ಕೊಂಡೆವು. ಆಕೆಯು ಕೂಲಿಯವನ ಕೈಲಿ ಕಾಸಿಗೆ ಬದಲು ಒಂದು
ಚೀಟಿಯನ್ನು ಕೊಟ್ಟಳು. ಕಾರು ನಡೆಯುತ್ತಿದೆ, ನಾವಿಬ್ಬರೂ ಎಷ್ಟೋ
ಕಾಲದಿಂದ ಪರಿಚಯವಿದ್ದವರಂತೆ ಮಾತನಾಡುತ್ತಿದ್ದೇವೆ. ನಮ್ಮ
ಮಾತು, ನಗು, ಇವನ್ನು ನೋಡಿದರೆ ಯಾರಿಗೂ ನಮ್ಮ ಪರಿಚಯವು
ಎರಡು ಮೂರು ನಿಮಿಷಗಳ ಹಿಂದೆ ಎಂದು ತಿಳಿಯಲಾರದು. ಆಕೆಯ
ಮಾತು, ರೀತಿ ಬಹಳ ಆಕರ್ಷಣೀಯವಾಗಿತ್ತು. ಬಂಡವಾಳ ಶಾಹೀ
ದೇಶಗಳ ಪತ್ರಿಕೆಗಳನ್ನು ನೋಡಿದ್ದುದರಿಂದ ರಷ್ಯಾದೇಶದಲ್ಲಿ ಪ್ರಜೆ
ಗಳು ಬಹಳ ಒರಟಾಗಿಯೂ ಕಠಿಣವಾಗಿಯೂ ಇರುವರೆಂದೂ, ಅವರ

ಮುಖದಲ್ಲಿ ನಗುವೇ ಕಂಡುಬರುವುದಿಲ್ಲವೆಂದೂ, ಅವರಿಗೆ ಹಾಸ್ಯ, ಕಲೆ ಗಳ ಗಂಧವೇ ಇಲ್ಲವೆಂದೂ ನನ್ನ ಮನಸ್ಸಿನಲ್ಲೊಂದು ಕಲ್ಪನೆಯು ಮೂಡಿ ಬೇರೂರಿದ್ದಿತು. ಆದರೆ, ಆಕೆಯ ಸಂಗಡ ಸ್ವಲ್ಪ ವೇಳೆ ಮಾತ ನಾಡಿದೊಡನೆಯೇ ಆ ಭಾವನೆಯೇ ಮಾಯವಾಯಿತು. ಯೂರೋ ಪಿನ ಇತರ ಜನಾಂಗದವರಂತೆಯೇ ಈ ರಷ್ಯನರೂ ಸಹ ನಾಗರಿಕರೆಂದು ನನಗೆ ಆಗ ಭಾಸವಾಗತೊಡಗಿತು.

ಸ್ಟೇಷನ ಹತ್ತಿರ ಕೂಲಿಯವರು ಸಾಕಷ್ಟು ಜನ ಇಲ್ಲವೆಂದು ಕೊಳ್ಳುತ್ತೇನೆಂದು, ನಾನು ಮಾತಿಗೆ ಮೊದಲಿಟ್ಟೆನು.

‘ಹೌದು. ಈಗೆಲ್ಲಾ ಅವರವರ ಸಾಮಾನನ್ನು ಅವರವರೇ ತೆಗೆದು ಕೊಂಡು ಹೋಗುತ್ತಿರುವರು. ಚಿಕ್ಕ ಪೆಟ್ಟಿಗೆಯಾದರೂ ಅದನ್ನು ತೆಗೆದು ಕೊಂಡುಬರಲು ಕೂಲಿಯವರು ಬೇಕೇಬೇಕೆಂದು ಬಯಸುವ ಆ ‘ಬುರ್ಜ್ವಾರ’ರೂ ಈಗಿಲ್ಲ.’

‘ಆದರೂ ದೊಡ್ಡ ದೊಡ್ಡ ಸಾಮಾನಿಗಾಗಿ ಕೂಲಿಯವರು ಅಗತ್ಯ ವಲ್ಲವೇ ?’

‘ಹೌದು. ಅದಕ್ಕಾಗಿಯೇ ಸ್ವಲ್ಪ ಮಂದಿ ಕೂಲಿಯವರನ್ನು ಮಾತ್ರ ಸ್ಟೇಷನ್ನಿನಲ್ಲಿಟ್ಟಿರುವುದು. ನಮ್ಮ ಕಾರಖಾನೆಗಳಲ್ಲೂ, ಹೊಲ ಗಳಲ್ಲೂ ಕೆಲಸಮಾಡಲು ಎಷ್ಟೋ ಜನ ಕೂಲಿಯವರು ಬೇಕೆಂದು ನಿಮಗೆ ತಿಳಿದೇ ತಿಳಿದಿರುವುದು. ಆದುದರಿಂದಲೇ ಈ ಕೆಲಸಗಳಿಗೆ ರಾಷ್ಟ್ರದ ದೃಷ್ಟಿಯಿಂದ ಇಷ್ಟು ಜನಕ್ಕಿಂತಲೂ ಹೆಚ್ಚಿಗಿಡಲಾರೆವು.’

ನಮ್ಮ ಮೋಟಾರು ‘ಲೆನಿನ್‌ಗ್ರಾಡು’ ಬೀದಿಗಳ ಮೂಲಕ ಹೋಗುತ್ತಿದೆ. ದಾರಿಯ ಎರಡು ಪಕ್ಕಗಳಲ್ಲಿಯೂ ಅರ್ಧಮರ್ಧ ಕಟ್ಟಿ ಬಿಟ್ಟಿರುವ ಮನೆಗಳೇ ಕಂಡುಬರುವವು. ನಾನು ಆ ಮನೆಗಳು ಹಾಗೆಯೇ ಇರಲು ಕಾರಣವೇನೆಂದು ಕೇಳಿದೆನು.

‘ಚಳಿಗಾಲದ ಈ ಬಿರುಗಾಳಿಯಲ್ಲಿ ಈ ಕೆಲಸಗಳನ್ನು ಮಾಡು ವುದು ಕಷ್ಟ. ಆದುದರಿಂದ ಮನೆ ಕಟ್ಟಲು ಬೇಕಾದ ಕೆಲಸಗಾರರು ಹೊಲಗಳಿಗೂ ಯಂತ್ರಾಲಯಗಳಿಗೂ ಕಳುಹಿಸಲ್ಪಟ್ಟಿರುವರು. ಮತ್ತೆ

ಬೇಸಿಗೆ ಬಂದಾಗ, ಕಟ್ಟಿ ನಿಲ್ಲಿಸಿರುವ ಈ ಮನೆಗಳನ್ನು ಪೂರ್ತಿ ಮಾಡುವರು.'

'ಏನು? ಒಕ್ಕಲತನಕ್ಕೆ ವಿರಾಮವಿರುವ ಬೇಸಿಗೆಯಲ್ಲಿ ಈ ಮನೆ ಕಟ್ಟುವ ಕೆಲಸವು ನಡೆಯಬೇಕೆಂದಂತಾಯಿತಲ್ಲವೇ! ಹಾಗಾದರೆ ಗಿರಣಿಗಳ ಗತಿ ಏನು? ಅವು ಯಾವಾಗಲೂ ನಡೆಯಬೇಕಲ್ಲ! ಹೌದು! ಸ್ವಾಮಿ! ನಮ್ಮ ರಾಷ್ಟ್ರೀಯ ಯೋಜನೆಗೆ, ಕಾರ್ಯಕರ್ತರ ಅಗತ್ಯವು ಬಹಳವಿದೆ. ನಮ್ಮಲ್ಲಿ ಸಾಕಷ್ಟು ಜನರಿಲ್ಲ.'

'ಸರಿ. ಈಗ ನಿಮ್ಮ ದೇಶದಲ್ಲಿ ನಡೆಯಬೇಕಾದ ಕೆಲಸ ಬೇಕಾದಷ್ಟಿದೆ. ನೀವೊಂದು ಹೊಸ ಜನಾಂಗವನ್ನೇ ಸೃಷ್ಟಿಸುತ್ತಿರುವಿರಿ. ವ್ಯವಸಾಯಪ್ರಧಾನವಾದ ದೇಶವನ್ನು ಔದ್ಯಮಿಕ ದೇಶವನ್ನಾಗಿ ಪರಿವರ್ತನೆಗೊಳಿಸುತ್ತಿರುವಿರಿ. ವ್ಯರ್ಥವಾಗಿ ಬೀಳುಬಿದ್ದ ಭೂಮಿಗಳೆಲ್ಲ ಸಾಗಾಗಬೇಕು. ಗಣಿಗಳನ್ನೂ ಅಗೆಯಬೇಕು. ಹೊಸ ಹೊಸ ಯಂತ್ರಗಳನ್ನು ನಿರ್ಮಿಸಬೇಕು. ಬೀದಿಗಳನ್ನು ಮಾಡಬೇಕು. ಮನೆಗಳನ್ನು ಕಟ್ಟಬೇಕು. ಅದಕ್ಕಾಗಿ ಇರುವಷ್ಟು ಜನಕ್ಕೂ ಕೆಲಸವೇಳುತ್ತಿರುವದು. ಆದರೆ, ನಿಮ್ಮ ಯೋಜನೆಯು ಎಂದಾದರೊಂದು ಕಾಲಕ್ಕೆ ಸಂಪೂರ್ಣವಾಗಬೇಕು. ಆಗ ಅಮೇರಿಕಾದಲ್ಲಿದ್ದಂತೆಯೇ ನಿಮ್ಮ ದೇಶದಲ್ಲಿಯೂ ಖರ್ಚಿಗಿಂತ ಉತ್ಪತ್ತಿಯು ಹೆಚ್ಚಾಗುವುದು. ಆಗೇನು ಮಾಡಬೇಕೆಂದಿರುವಿರಿ? ಈಗ ಕೆಲಸದಲ್ಲಿ ಮಗ್ನರಾಗಿರುವ ಕೂಲಿಕಾರರಿಗೆ ಆಗೇನು ಕೆಲಸ ಹೇಳುವಿರಿ? ಈಗ ಬಂಡವಾಳಗಾರರ ದೇಶಗಳಲ್ಲಿ ಅತ್ಯಂತ ತೊಂದರೆಕೊಡುತ್ತಿರುವ **ನಿರುದ್ಯೋಗ ಸಮಸ್ಯೆಯು** ಆಗ ನಿಮ್ಮ ದೇಶದಲ್ಲೂ ತೊಂದರೆಕೊಡುವುದಲ್ಲವೇ?'

ಸ್ವಾಭಾವಿಕವಾದ ಮುಗುಳ್ನಗೆಯಿಂದ ಆಕೆಯು ಎಲ್ಲವನ್ನೂ ಕೇಳಿ 'ಆಗದು. ಹಾಗೆಂದಿಗೂ ಆಗುವುದಿಲ್ಲ. ಇದು ರಷ್ಯಾವಲ್ಲದೆ ಅಮೇರಿಕವಲ್ಲ. ಇಂದು ಪ್ರಪಂಚವನ್ನು ಬಾಧಿಸುತ್ತಿರುವ ನಿರುದ್ಯೋಗ ಸಮಸ್ಯೆಗೆಲ್ಲಾ ಕಾರಣವಾದುದು ಬಂಡವಾಳವಾದ. ಇದ್ದುಬಿದ್ದುದನೆಲ್ಲಾ ಇತರರಿಗಿಲ್ಲದಂತೆ ತಾವೇ ದೋಚಿಹಾಕಿಕೊಳ್ಳಬೇಕೆಂಬುದು ನಮಗೆ ವೈರ. ನಮ್ಮ ದೇಶದಲ್ಲಿ ಒಬ್ಬರದನ್ನು ಕಿತ್ತುಕೊಂಡು ತಿನ್ನುವೆನೆಂಬುವವರಿಗೆ ಸ್ಥಳವಿಲ್ಲ.

ಇಲ್ಲಿ ಯಾರೂ ಇತರರ ಕಷ್ಟದ ಫಲವನ್ನು ನೇರವಾಗಿ ತಿನ್ನಲು ಆಶೆಪಡು
ವುದಿಲ್ಲ. ಪ್ರತಿ ಮನುಷ್ಯನೂ ದಿನಕ್ಕೆ ಏಳುಗಂಟೆಗಳ ಕಾಲ ಕೆಲಸ
ಮಾಡುವುದರಿಂದ ನಮಗೆ ಆವಶ್ಯವಿದ್ದುದಕ್ಕಿಂತಲೂ ಹೆಚ್ಚಿಗೆ ಉತ್ಪತ್ತಿ
ಯಾಗುವುದೆಂದು ಕಂಡುಬಂದಲ್ಲಿ, ಕೆಲಸಗಾರರನ್ನು ಕಡಿಮೆ ಮಾಡುವು
ದರ ಬದಲು ಕೆಲಸಮಾಡುವ ಗಂಟೆಗಳನ್ನು ಕಡಿಮೆ ಮಾಡುವೆವು. ಆದ
ರಿಂದ ಉತ್ಪತ್ತಿಯು ತನ್ನಷ್ಟಕ್ಕೆ ತಾನೇ ಕಡಿಮೆಯಾಗುತ್ತದೆ.
ನಿರ್ವ್ಯಾಪಾರತೆಯುಂಟಾಗುವದೇ ಇಲ್ಲ. ಮೊದಮೊದಲು ಕೆಲಸಗಾರರಿಂದ
ದಿನಕ್ಕೆ ಎಂಟುಗಂಟೆಗಳ ಕಾಲ ಕೆಲಸ ತೆಗೆದುಕೊಳ್ಳುವಂತೆ ಮಾಡಿರು
ವೆವು. ಆಗತ್ಯ ಕಂಡುಬಂದಲ್ಲಿ ಆರು-ಐದು-ನಾಲ್ಕು ಗಂಟೆಗಳಿಗೂ ಅದನ್ನು
ಇಳಿಸುವೆವು.

ನಾವೊಂದು ಚಿಕ್ಕದಾರಿಯಲ್ಲಿ ಹೊರಟೆವು. ಹಳೆಯ ಊರಿಗೆ
ಇದೇ ದಾರಿಯೆಂದು ಹೇಳಿದಳು. ಝಾರನ ಕಾಲದಲ್ಲಿ ಈ ಬೀದಿಯಲ್ಲಿಯೇ
ಸೆಟ್ಟಿ ಸಾವುಕಾರರು ವಾಸಿಸುತ್ತಿದ್ದರೆಂದಳು. ಯುರೋಪದ ಬಿಳಿ
ಛಾಯೆಯು ಇಲ್ಲಿ ನನ್ನ ಕಣ್ಣಿಗೆ ಬೀಳಲಿಲ್ಲ. ಸರಳಜೀವನವು ಎಲ್ಲಿ
ನೋಡಿದಲ್ಲಿ. ಅಂದಚಂದದ ಕನ್ನಡಿಗಳಿಂದ ಮೋಹವನ್ನುಂಟುಮಾಡುವ
ಅಂಗಡಿಗಳನ್ನು ಕಾಣೆವು. ಬೀದಿಯಲ್ಲಿ ಟ್ರಾಂಗಾಡಿಗಳು ೩-೪ ಮಾತ್ರ.
ಮೋಟಾರುಗಳಾದರೋ ಒಂದೆರಡು ಕಣ್ಣಿಗೆ ಬೀಳುವವು. ಬೀದಿಗಳೆಲ್ಲ
ಮಂಜಿನಿಂದ ಜಾರುತ್ತಿರುವವು. ಉಳಿದ ಯುರೋಪ ನೋಡಿದ ಪ್ರವಾಸಿ
ಗನಿಗೆ ರಶಿಯದಲ್ಲಿ ತಾನು ಯುರೋಪದಲ್ಲಿರುವೆನೇ ಎಂದು ಕ್ಷಣಹೊತ್ತು
ಭ್ರಮೆಯಾಗುವದು—

ಕಡೆಗೆ ನಮ್ಮ ಮೋಟಾರು ‘ ಅಕ್ಟೋಬರು ಹೋಟಲು ’ ಬಳಿಗೆ
ಬಂದು ನಿಂತಿತು. ಹೋಟಲು ಬಹಳ ಅಂದವಾಗಿ ರಾಜಭವನದಂತಿರು
ವದು. ಹೊಸ ನಮೂನೆಯ ಕನ್ನಡಿಯ ತಿರಗುವ ಬಾಗಿಲಗಳು, ಅಂದ
ವಾದ ಸ್ಫಟಿಕ ಶಿಲೆಯ ಮೆಟ್ಟಲುಗಳು, ಸರ್ವ ಸೌಕರ್ಯಗಳಿಂದ ಸಿದ್ಧ
ಗೊಳಿಸಿದ ಕೊಠಡಿಗಳು, ಇವೆಲ್ಲಾ ಆ ಹೋಟೆಲಿನಲ್ಲಿ ಮನಸ್ಸಿಗೆ ಅತ್ಯಂತ
ರಮ್ಯವಾಗಿ ಉಲ್ಹಾಸಕರವಾಗಿವೆ. ನನ್ನನ್ನು ಹೋಟಲು ಕಾರ್ಯ
ದರ್ಶಿಯ ಬಳಿಗೆ ಕರೆದುಕೊಂಡು ಹೋದರು. ಓದಿದ ಯುವಕನೊಬ್ಬನು

ಅಲ್ಲಿಯ ಕಾರ್ಯದರ್ಶಿ. ಈ ವಿದ್ಯಾವಂತನಾದ ರಷ್ಯಾಯುವಕನೊಂದಿಗೆ ಮಾತನಾಡಲು ಸಿಕ್ಕ ಅವಕಾಶವನ್ನು ನಾನು ವ್ಯರ್ಥವಾಗಿ ಕಳೆದುಕೊಳ್ಳಲಿಚ್ಛಿಸಲಿಲ್ಲ. ಪ್ರಜೆಗಳಿಗೆ ಕೊಡುತ್ತಿದ್ದ ಸಂಬಳ ಸಾರಿಗೆಗಳನ್ನು ಕುರಿತು ಕೇಳಿ ತಿಳಿದುಕೊಂಡೆನು. ಪ್ರತಿಯೊಬ್ಬ ಪ್ರಜೆಗೂ ಆತನ ಯೋಗ್ಯತೆಯನ್ನನುಸರಿಸಿ ಪ್ರಭುತ್ವವು ವೇತನವನ್ನು ಕೊಡುವದು. ಕಾರಖಾನೆಗಳಲ್ಲಿರುವ ಸಾಮಾನ್ಯ ಕೂಲಿಗಿಂತಲೂ ಇಂಜಿನಿಯರನ ಸಂಬಳವು ಸ್ವಲ್ಪ ಹೆಚ್ಚು. ಹೋಟಲಿನಲ್ಲಿರುವ ಅಡಿಗೆಯವನಿಗಿಂತಲೂ ವ್ಯವಸ್ಥಾಪಕನ ಸಂಬಳ ಹೆಚ್ಚು. ಈ ವಿಷಯದಲ್ಲಿ ಬಂಡವಾಳಶಾಹಿ ರಾಷ್ಟ್ರಗಳಿಗೂ ಇಲ್ಲಿಗೂ ಹೆಚ್ಚೇನೂ ವ್ಯತ್ಯಾಸವಿಲ್ಲ. ಆದರೆ ಒಂದು— ರಷ್ಯಾದಲ್ಲಿ ಯಾರಿಗೂ ಸ್ವಂತವಾಗಿ ವ್ಯಾಪಾರ ಮಾಡಿಕೊಳ್ಳುವುದಕ್ಕಾಗಲೀ ಆಸ್ತಿಯನ್ನು ಗಳಿಸುವುದಕ್ಕಾಗಲೀ ಅಧಿಕಾರವಿಲ್ಲ. ಈ ವಿಷಯವು ನನ್ನ ಮನಸ್ಸಿಗೆ ಸರಿಯಾಗಿ ಹೊಳೆಯಲಿಲ್ಲ.

ಸಮಾಜವಾದಿಗಳು ಸಮಾಜದಲ್ಲಿರುವ ಹೆಚ್ಚು ಕಡಿಮೆ ತರಗತಿಗಳನ್ನೂ ಅಂತರಗಳನ್ನೂ ಹೋಗಲಾಡಿಸಬೇಕೆಂದು ಹೇಳುತ್ತಿರುವರು. ಆದರೂ ನಿಮ್ಮ ದೇಶದಲ್ಲೂ ಸಂಬಳದಲ್ಲಿ ಹೆಚ್ಚು ಕಡಿಮೆ ಇರುವುದಲ್ಲಾ! ಹಾಗಾದರೆ, ಸಮಾಜದ ನಾನಾ ತರಗತಿಗಳು, ಆ ವ್ಯತ್ಯಾಸಗಳು, ಹೇಗೆ ನಶಿಸಿ ಹೋಗುವವು ? ನೀವು ' ಝಾರ್ ' ಕಾಲದ ಭೇದಗಳನ್ನು ದೂರ ಮಾಡಿ ಹೊಸ ತರಗತಿಗಳನ್ನು ಸೃಷ್ಟಿಸಿರುವೆವು ಎಂದಿರಲ್ಲವೆ ! '

' ಕೆಲವರಲ್ಲಿ ಇತರರಿಗಿಂತಲೂ ಹೆಚ್ಚಾಗಿ ಧನವಿರುವದೆಂದೇ ಯಲ್ಲವೇ ನಿಮ್ಮ ಊಹೆ. ಸಂಬಳ ಸ್ವಲ್ಪ ಹೆಚ್ಚು ಕಡಿಮೆ ತೆಗೆದುಕೊಂಡ ಕೂಡಲೆ ತರಗತಿಗಳಲ್ಲಿ ಹೆಚ್ಚು ಅಂತರವು ಹೇಗಾಗುವುದು ? '

' ನಮ್ಮಂತೆ ಹೇಗೆ ಹುಟ್ಟಿರುವುವೋ ಹಾಗೆಯೇ. ಯುರೋಪಿನಲ್ಲಿ ಮತಭೇದವಾಗಲಿ, ವರ್ಗಭೇದವಾಗಲಿ ಇಲ್ಲ. ಆದರೂ ಯುರೋಪಿಯನರ ಸಮಾಜದಲ್ಲಿ ಧನದಿಂದಲೇ ವರ್ಗಭೇದವುಂಟಾಗಿದೆಯೆಂದು ನಿಮಗೆ ತಿಳಿಯದೇನು ? ಕಾರ್ಯದರ್ಶಿಯ ಕಣ್ಣು ಕೆಂಪೇರಿದವು. '

' ಅಯ್ಯಾ, ರಷ್ಯಾದಲ್ಲಿ ಹಣಕ್ಕೆ ಬೆಲೆಯಿಲ್ಲ. ಇತರ ದೇಶಗಳು ಹಾಗಲ್ಲ. ಒಬ್ಬನು ಇನ್ನೊಬ್ಬನಿಗಿಂತಲೂ ಹೆಚ್ಚಿಗೆ ಸಂಪಾದಿಸಿ ಅದ

ನ್ನೆಲ್ಲಾ ಶೇಖರಿಸುತ್ತಾನೆನ್ನಿ. ಆದರೆ, ಆದನ್ನೇನು ಮಾಡುವನು? ಆ ಹಣದಿಂದ ಆತನೇನೂ ಸ್ವಂತಕ್ಕಾಗಿ ವ್ಯವಹಾರ ನಡೆಸಲಾರನು. ಆತನು ತನ್ನ ಸ್ವಂತಕ್ಕಾಗಿ ಮನೆಯನ್ನು ಕೊಳ್ಳಲಾರನು. ತನ್ನ ಆತ್ಮಸುಖಕ್ಕಾಗಿ ಕಾರುಗೀರು ತೆಗೆದುಕೊಂಡು ವಿಹಾರಮಾಡಲಾರನು. ತನ್ನ ಮಕ್ಕಳಿಗೆ ಕೆಲಸಕಾರ್ಯಗಳ ಅಗತ್ಯವಿಲ್ಲದೆ ಸೋಮಾರಿಗಳಂತೆ ಕಾಲ ಕಳೆಯಲು ಕೂಡಿಟ್ಟು ಹೋಗಲಾರನು. ಆತನು ಮಾಡಬಹುದಾದುದೆಲ್ಲ ವಾರಕ್ಕೆ ಮತ್ತೊಂದು ನಾಲ್ಕು ಸಲ ಸಿನಿಮಾಕ್ಕೆ ಹೋಗುವುದು, ಇನ್ನೊಂದೆರಡು ಜತೆ ಬೂಟ್ಸುಕೊಳ್ಳುವುದೋ, ಅಥವಾ ನಾಲ್ಕು ಕುರ್ಚಿ ಮೇಜು ಕೊಂಡು ಹಾಕಿಕೊಳ್ಳುವುದನ್ನು ಬಿಟ್ಟರೆ ಮತ್ತೇನನ್ನೂ ಮಾಡಲಾರ. ಆತನು ಸಾಯುತ್ತಿರುವನೆನ್ನುವಾಗಲೇ ಪ್ರಭುತ್ವವು ಆತನಿಗೆ ಅಗತ್ಯವಿಲ್ಲದ ಆಸ್ತಿಯನ್ನೆಲ್ಲ ಸ್ವಾಧೀನಪಡಿಸಿಕೊಳ್ಳುತ್ತದೆ. ಹೀಗಿರುವಾಗ ಇನ್ನು ತರಗತಿಗಳು ಹೇಗೆ ಏರ್ಪಡುವುವು?'

'ಆದರೆ, ಈಗ ಸಹಿತ ನಿಮ್ಮ ದೇಶದಲ್ಲಿ ಎರಡು ತರಗತಿಗಳಿವೆಯೆಂಬುದನ್ನು ನೀವು ಒಪ್ಪಿಕೊಳ್ಳಬೇಕಾಗುತ್ತದೆ. ಈಕೆಯೂ ನೀವೂ (ಏಜಂಟರನ್ನು ತೋರಿಸುತ್ತ) ಒಂದೇ ಪಂಗಡಕ್ಕೆ ಸೇರಿದವರು. ನಿಮ್ಮ ಬಳಿ ಶುಭ್ರವಾದ ಬಟ್ಟೆಗಳಿವೆ. ಒಳ್ಳೆಯ ತರದ ಬೂಟು, ಅಂದವಾದ ಕೋಟು ಇರುವವು. ಇನ್ನು ನಿಮಗೂ ಸಾಮಾನ್ಯ ಜನ ರೈತ ಸಮುದಾಯಕ್ಕೂ ಮಾಸಿದ ಬಟ್ಟೆ, ಕುರಿಯ ಚರ್ಮದ ಓವರು ಕೋಟು, ಹರಿದ ಜೋಡು, ಒಳಲಿದ ನರಗಳು ಮೊಗಲಾದುವು ಕಂಡುಬರುವುದು ಇದು ವ್ಯತ್ಯಾಸವಲ್ಲವೆ?

ನನ್ನ ಮಾತಿಗೆ ಆತನಿಗೆ ಬಹಳ ಕೋಪ ಬಂದಿತು. ಆಗ ಅವನು, 'ನಾವೂ ಸಹ ರೈತರೇ!' ಎಂದ.

ನಾನು ನಕ್ಕೆನು. 'ಆದರೆ ನಾನು ಒಪ್ಪಿಕೊಳ್ಳುವುದಿಲ್ಲ. ನೀವು ಉತ್ತಮ ಶ್ರೇಣಿಗೆ ಸೇರಿದವರೆಂದೇ ನನ್ನ ನಂಬುಗೆ. ನಿಮ್ಮ ದೇಶದಲ್ಲಿ ಇನ್ನೂ ವರ್ಗಭೇದವಿರುವುದು.'

ಈ ಸಲ ಆತನು ಒಪ್ಪಿಕೊಂಡನು.

'ಹೌದು, ಆದರೆ ನಾವಿಲ್ಲಿಯವರೆಗೂ ಸಮತಾವಾದಿಗಳೇ (socialists); ಕಮ್ಯೂನಿಸ್ಟರಲ್ಲ. ನಮ್ಮ ದೇಶದಲ್ಲಿ ಕಮ್ಯೂನಿಜಂ

ಸ್ಥಾಪನೆಯಾದ ಮೇಲೆ ಹಣವನ್ನು ಕೊಟ್ಟು ತೆಗೆದುಕೊಳ್ಳುವುದನ್ನು ಕಟ್ಟಿಡುತ್ತೇವೆ. ಆಗ ಯಾರಿಗೂ ಹಣ ಕೊಡರು. ಪ್ರತಿಯೊಬ್ಬನೂ ಕೆಲಸಮಾಡಿಯೇ ತೀರಬೇಕು. ಪ್ರತಿಯೊಬ್ಬನೂ ಸಮಾಜಕ್ಕೆ ಸಹಾಯ ಮಾಡಬಲ್ಲುದನ್ನೆಲ್ಲ ಮಾಡುತ್ತಾನೆ. ಅದಕ್ಕೆ ಪ್ರತಿಫಲವಾಗಿ ಆತನಿಗೆ ಅಗತ್ಯವಾದುದನ್ನೆಲ್ಲ ಪ್ರಭುತ್ವವು ಕೊಡುವುದು. ಆದರೆ ಒಂದು—ಆತನಿಗೆ ಬೇಕಾದುದಕ್ಕೆ ಕಡಿಮೆಯಾಗುವಂತಾಗಲಿ, ಹೆಚ್ಚಾಗುವಂತಾಗಲಿ ಕೊಡಲ್ಪಡುವುದಿಲ್ಲ. 'ಕಮ್ಯೂನಿಜಂ'ಗೆ 'ಸೋಷಲಿಜಂ' ಒಂದು ಮೆಟ್ಟಿಲು ಮಾತ್ರ. ಅದು ಸಾಧನ ಮಾತ್ರವಲ್ಲದೆ—ಲಕ್ಷ್ಯವಲ್ಲ. ಈ ವಿಷಯವನ್ನೂ ಜನಗಳಿಗೆ ಚೆನ್ನಾಗಿ ತಿಳಿಯುವಂತೆ ಪ್ರಚಾರ ಮಾಡಬೇಕು. ಅವರ ಬುದ್ಧಿಗೆ ಇದು ಹಿಡಿಯುವಂತೆ ಮಾಡಬೇಕು. ಅದುದರಿಂದಲೇ ನಮ್ಮ ಅಭಿವೃದ್ಧಿಯು ಬಹಳ ಸುಖಮಯವಾಗಿ ಮುಂದುವರಿಯುತ್ತಿದೆ. ನಮ್ಮ ಲಕ್ಷ್ಯವನ್ನು ಸಾಧಿಸಿದ ದಿನಕ್ಕೆ ಈ ವರ್ಗಭೇದವು ನಶಿಸಿಹೋಗುವುದು.'

'ಆ ದಿನವು ಎಂದಿಗಾದರೂ ಬರುದೀತೇ?'

'ಅಹಾ! ಹತ್ತು ವರುಷವಾಗಬಹುದು, ಇಪ್ಪತ್ತು, ಮೂವತ್ತು ವರ್ಷಗಳಾದರೂ ಆಗಬಹುದು. ಆ ಒಂದು ದಿನ ಬಂದೇ ಬರುವುದು.'

ಈ ಮಾತು ಹೇಳುತ್ತಿರುವಾಗ ಆತನ ಕಣ್ಣುಗಳು ನಕ್ಷತ್ರಗಳಂತೆ ಹೊಳೆಯುತ್ತಿದ್ದುವು. ಆತನ ಮುಖದಲ್ಲಿ ದೃಢವಿಶ್ವಾಸವು ಪ್ರತಿಬಿಂಬಿಸಿತ್ತು.

'ಪ್ರತಿ ಮನುಷ್ಯನಿಗೂ ಇರುವ ಕೋರಿಕೆಗಳನ್ನು ಈಡೇರಿಸಿಕೊಳ್ಳಲು ಎಂದಾದರೂ ಸಾಧ್ಯವಾಗುವುದೇ? ನಾನು ನಿತ್ಯವೂ ಸಾಯಂಕಾಲ ಮೋಟಾರಿನಲ್ಲಿ ಷಿಕಾರಿ ಹೊರಡಬೇಕೆನ್ನುತ್ತೇನೆ. ಪ್ರಭುತ್ವವು ನನ್ನ ಈ ಇಷ್ಟಾರ್ಥವನ್ನು ನೆರವೇರಿಸಬಲ್ಲುದೇ?'

'ತಪ್ಪದೆ. ಪ್ರತಿಯೊಬ್ಬನಿಗೂ ಮೋಟಾರನ್ನು ಕೊಡಬಲ್ಲುದಾದಾಗ ಹಾಗೇ ಕೊಡುತ್ತದೆ. ಇಲ್ಲದಿದ್ದರೆ ನಾಲ್ಕು ಐದು ಜನ ಸೇರಿರುವ ಸಂಸಾರಕ್ಕೊಂದರಂತೆಯೋ, ಇಲ್ಲವೆ ಒಂದು ದಿನ ಒಬ್ಬರಿಗೆ, ಇನ್ನೊಂದು ದಿನ ಮತ್ತೊಬ್ಬರಿಗೆ, ಹೀಗೆ ಸರತಿಯಿಂದಾದರೂ ಕೊಡುವರು. ಒಟ್ಟಿನ

ಮೇಲೆ ದೇಶದಲ್ಲಿರುವ ಪ್ರತಿಯೊಬ್ಬನಿಗೂ ಪ್ರತಿವಸ್ತುವೂ ಸಮಾನವಾಗಿ ಸಿಗುವಂತಿರಬೇಕು.'

'ನಮಗೆ ಇದ್ದ ಆವಶ್ಯಕತೆಗಳನ್ನೆಲ್ಲ ಪ್ರಭುತ್ವವು ಒದಗಿಸಿದರೆ ನಾವೇಕೆ ದುಡಿಯುವೆವು ? '

'ನಿಮ್ಮಿಂದ ಬಲಾತ್ಕಾರವಾಗಿ ಕೆಲಸಮಾಡಿಸುವರು. ಕೆಲಸ ಮಾಡುವ ವರೆಗೂ ನಿಮಗೇನೂ ಕೊಡುವುದಿಲ್ಲ. ಹಸಿದು ಸಾಯ ಬೇಕಾದುದೇ ! '

'ಬಲುಮೆಯಿಂದ ಕೆಲಸಮಾಡಿಸಿದರೆ ಮನಸ್ಸಿನಿಂದ ಮಾಡಿದಷ್ಟು ಕಾರ್ಯ ಮಾಡಲಾಗುವುದೇ ? ಕೆಲಸವು ಕೆಟ್ಟು ಹಾಳಾಗುವುದು. '

'ಅಯ್ಯಾ, ಇದು ನಿಮ್ಮ ಬಂಡವಾಳಶಾಹಿ ಜನಾಂಗದ ಮಾನಸಿಕ ಪ್ರವೃತ್ತಿಯ ಫಲ. ನಾವು ಹೇಳುತ್ತಿರುವುದೊಂದು ಹೊಸ ವಿಧದ ಪಾಠ. ನಮಗೆ ಕೆಲಸಮಾಡುವುದೆಂದರೆ ಅದೊಂದು ಆನಂದ. ಕೆಲಸ ಮಾಡದೆ ಸುಮ್ಮನಿರುವ ಸೋಮಾರಿಯು ನಮ್ಮ ದೃಷ್ಟಿಯಲ್ಲಿ **ದೇಶ ದ್ರೋಹಿ, ರಾಷ್ಟ್ರದ** ಶತ್ರು. ರಾಷ್ಟ್ರದ ಅಭಿವೃದ್ಧಿಗಾಗಿ ಕೆಲಸ ಮಾಡುವುದೇ **ಧರ್ಮವೆಂದು ನಮ್ಮ ಪಾಠ.** '

ಇಷ್ಟರಲ್ಲಿ 'ಮಾರ್ಗದರ್ಶಿಕೆ'ಯು ಭುಜ ಹಿಡಿದುಕೊಂಡು, 'ಮಿಸ್ಟರ್, ಬೆನರಜೀ (ರಷ್ಯನರು ಬೆನರ್ಜಿ ಎಂಬುದನ್ನು ಈ ವಿಧವಾಗಿಯೇ ಉಚ್ಚರಿಸುವರು.) ನೀವು ಊಟಕ್ಕೆ ನಡೆಯಿರಿ. ಊಟಮಾಡಿ ಕೂಡಲೆ ಸಿದ್ಧರಾಗಿ. ಸಾಧ್ಯವಾದಷ್ಟು ಬೇಗ ನಾನು ಹಿಂದಿರುಗಿ ಬಂದು ನಿಮ್ಮನ್ನು ಊರು ನೋಡಲು ಕರೆದುಕೊಂಡು ಹೋಗುವೆನು. '

ಕೂಡಲೆ ಕಾರ್ಯದರ್ಶಿಯು ನನ್ನ ಕೈಗೆ ಊಟಕ್ಕೆ ಕೆಲವು ಚೀಟಿ ಗಳನ್ನು ಕೊಟ್ಟನು.

'ಇವನ್ನು ಜಾಗ್ರತೆಯಾಗಿಟ್ಟುಕೊಳ್ಳಿ, ಒಂದು ಟಿಕೆಟ್ಟನ್ನು ಕಳೆದು ಕೊಂಡರೆ ಒಂದು ಹೊತ್ತಿನ ಊಟಕ್ಕೆ ನೀರು ಬಿಡಬೇಕಾಗುವುದು. '

ನಾನು 'ಮಾರ್ಗದರ್ಶಿಕೆ'ಯೊಡನೆ ಒಂದು ಚಾವಡಿಯೊಳಕ್ಕೆ ಹೋದೆನು. ಅಲ್ಲಿ ನನ್ನಂತೆಯೇ ಯಾತ್ರೆಗೆ ಬಂದ ಜನರು ಬಹಳ ಜನ ಇದ್ದರು. ಅವರೆಲ್ಲರೂ ಆ ದಿನವೇ 'ಲೆನಿನ್‌ಗ್ರಾಡಿ'ನಿಂದ 'ಮಾಸ್ಕೊ'ಕ್ಕೆ

ಹೊರಡುತ್ತಿದ್ದರು. ಅವರು ಮೂವರು—ಒಬ್ಬಳು ಚಿಕ್ಕವಳು. ಅಮೇರಿಕಾ ದಿಂದ ಬಂದವರು. ಒಬ್ಬನು ಆಸ್ಟ್ರೇಲಿಯಾದಿಂದ ಬಂದವನು.

'ಈ ದೇಶವು ನಿಮಗೆ ಹೇಗೆ ಕಾಣುತ್ತದೆ?' ಎಂದು ಅವರನ್ನು ಕೇಳಿದೆ.

ಎಲ್ಲರೂ ಒಂದೇ ಬಾರಿ, ಏಕಕಂಠದಿಂದ, ಉದ್ರೇಕಪೂರಿತರಾಗಿ, 'ಬಹಳ ಅದ್ಭುತವಾಗಿದೆ' ಎಂದರು. ಆಸ್ಟ್ರೇಲಿಯಾದಿಂದ ಬಂದಾತನು ತನ್ನ ಬೋಳತಲೆಯನ್ನು ಸವರಿಕೊಳ್ಳುತ್ತಾ, ಬಲವಾದ ತನ್ನ ತೋಳು ಗಳನ್ನು ಕದಲಿಸುತ್ತಾ, 'ನೀವು ನೋಡುವುದಿಲ್ಲವೇನು? ಇವರ ದೇಶದಲ್ಲಿ ನಿರುದ್ಯೋಗವೆಂಬುದಿಲ್ಲವೇ ಇಲ್ಲ. ಎಷ್ಟು ಆಶ್ಚರ್ಯಕರವಾದ ವಿಷಯ ನೋಡಿ. ಇವರು ಅತ್ಯಂತ ಮಹತ್ತರವಾದ ವಿಷಯವನ್ನು ಸಾಧಿಸಿರು ವರು' ಎಂದನು.

'ಆದರೆ ತಮಗೆ ವಿರುದ್ಧವಾಗಿರುವ ಪ್ರಜಾಭಿಪ್ರಾಯವನ್ನು ಇವರು ಹೇಗೆ ಅಣಿಮಾಡುತ್ತಿರುವರೋ ರೂಪುಗೊಳಿಸುತ್ತಿರುವರೋ ನೋಡಿದಿರಾ? ಇದರಿಂದ ಮನುಷ್ಯನಿಗಿರುವ ವ್ಯಕ್ತಿಸ್ವಾತಂತ್ರ್ಯವು ಲುಪ್ತ ವಾಗುವುದಿಲ್ಲವೇನು? ನೀವು ಇವರನ್ನು ಏಕೆ ಹೊಗಳುವಿರಿ?'

ಅಮೇರಿಕಾದಿಂದ ಬಂದ ಆ ಯುವತಿಯು, 'ಇದು ಎಲ್ಲ ದೇಶ ಗಳಲ್ಲಿಯೂ ನಡೆಯುತ್ತಲಿರುವುದು. ಯಾವ ದೇಶದಲ್ಲಾದರೂ ಸರಿಯೇ, ಆ ದೇಶದ ಸರಕಾರವನ್ನೆದುರಿಸಿದರೇನೇ, ಜನಗಳು ತಮ್ಮ ಸ್ವಾತಂತ್ರ್ಯ ವನ್ನು ಕಾಪಾಡಿಕೊಳ್ಳಲು ಆಗುತ್ತದೆ. ಆ ಮಿತಿ ತಪ್ಪಿದರೆ ಅಷ್ಟು ಸ್ವೇಚ್ಛೆ ಯಿರುವುದಿಲ್ಲ. ನಮ್ಮ ದೇಶದಲ್ಲಿ ನಿರುದ್ಯೋಗಿಗಳ ಮೇಲೆ ಗುಂಡು ಹಾರಿಸಿದರು. ಇಂಗ್ಲೆಂಡಿನಲ್ಲಿ ನಿರುದ್ಯೋಗಿಗಳಾದ ಕೂಲಿಯವರ ದಲವನ್ನು (Hungermarchers) ಏನು ಮಾಡಿರುವರೋ ನೋಡಿ. ಇಟಲಿಯಲ್ಲಿ ಫ್ಯಾಸಿಸ್ಟರನ್ನು ನೋಡಿ. ಜರ್ಮನಿಯಲ್ಲಿ ನಾಜಿಗಳನ್ನು ಹೇಗೆ ಹಿಂಸಿಸುತ್ತಿದ್ದರೆಂಬುದು ನೆನಪಿಲ್ಲವೇನು? (ಒಂದು ಕಾಲದಲ್ಲಿ ನಾಜಿ ಸಂಘ ಗಳು ಅಕ್ರಮ ಸಂಘಗಳಾಗಿದ್ದುವು.) ಈ ಪ್ರಜಾಪ್ರಭುತ್ವ ದೇಶಗಳೆಲ್ಲಾ ಏನು ಮಾಡುತ್ತಿರುವುವು? ಕೇವಲ ಪಕ್ಷಪ್ರಭುತ್ವವೂ—ಪಕ್ಷಶಾಸನ ಗಳೂ. ಈ ವಿಚಾರದಲ್ಲಿ ರಷ್ಯಾ ಎಲ್ಲ ದೇಶಗಳಂತೆಯೇ ಇದೆ.'

'ಹಾಗಾದರೆ ರಷ್ಯಾ ಹೆಮ್ಮೆಪಡಬೇಕಾದ ವಿಷಯವೇನಿರುವುದು? ಅದು ತನ್ನ ಪ್ರಜೆಗಳಿಗೆ ಕಲಿಸುತ್ತಿರುವ ಹೊಸ ಸಂಗತಿಯೇನು? ಇಷ್ಟು ರಕ್ತಪಾತವಾದ ಮೇಲೆ ಅವರು ಸಾಧಿಸಿದುದೇನು?'

'ಯಾರೋ ಕೆಲವರು ಅಧಿಕಾರ ಮಾಡುವುದಕ್ಕೆ ಪ್ರತಿಯಾಗಿ **ಜನಸಾಮಾನ್ಯವೇ ಈ ದೇಶದಲ್ಲಿ** ಅಧಿಕಾರವನ್ನು ಗಳಿಸಿಕೊಂಡಿರುವುದು. ಇದೇನು ಚಿಕ್ಕ ವಿಚಾರವೇ?'

'ಆ ಕೆಲವರನ್ನು ದಂಡನೆಗೆ ಗುರಿಮಾಡಿ, ದೇಶಭ್ರಷ್ಟರನ್ನಾಗಿ ಮಾಡಿ, ದನಗಳನ್ನು ಹೊಡೆದೋಡಿಸಿದಂತೆ, ಹೊಡೆದಟ್ಟಿ ಕೊಲೆಮಾಡುತ್ತ ಇರುವರು.'

'ಅದೂ ಸ್ವಾಭಾವಿಕವೇ!' ಎಂದು ಆಸ್ಟ್ರೇಲಿಯಾವಾಸಿಯು ಗರ್ಜಿಸಿದನು. ಬಂಡವಾಳಶಾಹೀ ನೀತಿಗೆ ಕೇಂದ್ರಸ್ಥಾನವಾದ ಅಮೇರಿಕಾ ದಲ್ಲಿ ವಾಸಮಾಡುತ್ತಿರುವ ಪ್ರಜೆಗಳಲ್ಲಿ ಸಹ ರಷ್ಯಾದೇಶದ ಈ ಪರಿ ವರ್ತನೆಯು ಅತ್ಯಾಶ್ಚರ್ಯವನ್ನುಂಟುಮಾಡಿದೆ. ಇಷ್ಟರಲ್ಲಿ ಅವರ 'ಮಾರ್ಗ ದರ್ಶಿಕೆ'ಯು ಬಂದು, 'ಮೋಟಾರು ಸಿದ್ಧವಾಗಿದೆ' ಎಂದಳು. ಅವರೆಲ್ಲರು ನಮಸ್ಕರಿಸಿ ಹೊರಟುಹೋದರು. ಹೊರಡುವಾಗ ಆಸ್ಟ್ರೇಲಿಯನ್ನನು 'ಮಾಸ್ಕೋನಲ್ಲಿ ನಾವೆಲ್ಲರೂ ಮತ್ತೆ ಕಲೆಯಬಹುದೇನೋ' ಎಂದನು.

ನಾನು ಊಟ ಮಾಡಿದೆನು. ನನ್ನ ಜೀವಿತದಲ್ಲಿ ಎಂದೂ ಅಂತಹ ತಿಂಡಿಯನ್ನು ತಿಂದಿರಲಿಲ್ಲ.* ಬೇಯಿಸಿದ ಇಷ್ಟು ಆಲೂಗಡ್ಡೆಯನ್ನೂ, ಬೆಣ್ಣೆಯಿಲ್ಲದ ಸ್ವಲ್ಪ ಕೆಂಪು ರೊಟ್ಟಿಯನ್ನೂ (Brown bread) ತಿಂದೆನು.

---

* ೧೯೩೧-೩೨ರಲ್ಲಿ ರಷ್ಯಾಕ್ಕೆ ಪರೀಕ್ಷೆಯ ದಿನಗಳು. ಪ್ರಪಂಚದ ಎಲ್ಲ ಕಡೆಯಿದ್ದಂತೆ ರಷ್ಯಾದಲ್ಲಿ ಸಹ ಬಹುಭಾಗದಲ್ಲಿ ಬೆಳೆಯೆಲ್ಲಾ ಕೆಟ್ಟುಹೋಗಿದೆ. ಬಹಳ ರಾಷ್ಟ್ರಗಳಲ್ಲಿ ಸೋವಿಯಟ್ ಶತ್ರುಗಳ ಪ್ರೋತ್ಸಾಹವನ್ನು ಹೊಂದಿ ರೈತರು ಬೇಸಾಯ ಮಾಡುವುದನ್ನು ಬಿಟ್ಟುಬಿಟ್ಟರು; ದನಕರುಗಳನ್ನು ಕೊಂದರು. ಈ ವಿಧವಾದ ಗೃಹ ಕಲಹ ಪರಿಣಾಮವು ೧೯೩೩ರಲ್ಲಿ ಸಹ ಅದರ ಪ್ರಭಾವವನ್ನೇ ತೋರಿಸುತ್ತಿದ್ದಿತು.

ಆದರೆ, ೧೯೩೩ ಸಪ್ಟೆಂಬರಿನಲ್ಲಿ ಆ ವರುಷದ ಬೆಳೆಯನ್ನು ಹಂಚಲಾಗಿ, ಒಬ್ಬ ಮನುಷ್ಯನು ಒಂದು ದಿನ ಮಾಡಿದ ಕೆಲಸಕ್ಕೆ ಪ್ರತಿಫಲವಾಗಿ ೭೮ ಕೊಪೆಕ್ಕುಗಳು,

'ಒಂದು ದೊಡ್ಡ ತಟ್ಟೆಯಲ್ಲಿ ಹುಳಿ, ಸಾಕಷ್ಟು ಮಾಂಸ, ಪಲ್ಯ, ರೊಟ್ಟಿ, ಒಂದು ಲೋಟಾ ಟೀ, ಇವು ರಷ್ಯಾ ಕಾರ್ಮಿಕನ ನಿತ್ಯಾಹಾರ' ಎಂದು Paul Brewis ಎಂಬಾತನು ಸೋವಿಯೆಟ್ ಯೂನಿಯನ್‌ದಲ್ಲಿ ಬರೆದಿದ್ದಾನೆ. ಅವರ ಕಪ್ಪುರೊಟ್ಟಿಯು ಬಹಳ ಅಸಹ್ಯವಾಗಿ ವಾಸನೆಯಾಗಿದೆ. ನಾಯಿಗಳೂ ಅದನ್ನು ಮೂಸಿ ನೋಡಲಾರವೆಂದು ನಾನು ಬಗೆಯುತ್ತೇನೆ.

'ಗೋಮಾಂಸವನ್ನಾಗಲಿ ಹಂದಿಯ ಮಾಂಸವನ್ನಾಗಲಿ ನಾನು ತಿನ್ನುವುದಿಲ್ಲ. ಆದ್ದರಿಂದ ಕೋಳಿಯ ಮಾಂಸವಾಗಲಿ, ಮೀನಾಗಲಿ, ಕುರಿಯ ಮಾಂಸವಾಗಲಿ ಇದ್ದರೆ ತರಿಸಿ ಹಾಕಿ' ಎಂದು ಬಡಿಸುವವನನ್ನು ಕೇಳಿದೆ. ಕೋಳಿಯಾಗಲಿ, ಕುರಿಯಾಗಲಿ ಅಲ್ಲಿ ಸಿಗುವುದಿಲ್ಲ. ಡಬ್ಬಿಗಳಲ್ಲಿ ಶೇಖರಿಸಿದ ಒಂದು ಉಪ್ಪಿನ ಮೀನನ್ನು ತಂದು ನನಗೆ ಹಾಕಿದನು. ಅದಾದರೂ ರುಚಿಯಿಲ್ಲ. ಉಪ್ಪಿಗಿಂತಲೂ ಉಪ್ಪಾಗಿತ್ತು ಅದು. 'ಹಾಲು ಸಿಗುವುದೇನು?'

'ಸಿಗುವುದಿಲ್ಲ.' ಸರಿ—

ಅಲ್ಲಿ ಸಿಗುವ 'ಚಾಈ' ಟೀನಲ್ಲೂ ಹಾಲಿರುವುದಿಲ್ಲ. ಭೋಜನ ಶಾಲೆಯು ಬಹಳ ಪರಿಶುಭ್ರವಾಗಿದೆ. ಅಡಿಗೆಯವನ ಬಟ್ಟೆಗಳೂ ಬಹಳ ಸ್ವಚ್ಛ. ಇವನ್ನೆಲ್ಲ ನೋಡಿದ ಮೇಲೆ ಒಳ್ಳೊಳ್ಳೆಯ ಬಟ್ಟೆಗಳನ್ನೂ ಹಾಕಿಕೊಂಡು ಸಂಗೀತ ಕೇಳುತ್ತಾ ಒಳ್ಳೊಳ್ಳೆಯ ಹೋಟಲುಗಳಲ್ಲಿ ಊಟ ಮಾಡುವವರೂ, ಚಳಿಯಲ್ಲಿ ಹರಿದ ಕುರಿಯ ಚರ್ಮಗಳನುಟ್ಟು ಕೆಲಸ ಮಾಡುವವರೂ, ಈ ದಿನಕ್ಕೂ ರಷ್ಯಾದಲ್ಲಿರುವರೆಂದು ನಾನು ಊಹಿ

---

೬.೫ ಕಿಲೋಗ್ರ್ಯಾಮು ಧಾನ್ಯ, ೧೬ ಕಿಲೋಗ್ರ್ಯಾಮ್ ಹುಲ್ಲು ಬಂದಿತು. ಇದು ಹಿಂದಿನ ವರುಷದಾದಾಯಕ್ಕಿಂತಲೂ ೪-೬ರಷ್ಟು ಹೆಚ್ಚು.

—ಸೋವಿಯಟ್ ಕಮ್ಯೂನಿಜಂ.

ವ್ಯಾವಸಾಯಿಕವಾಗಿ ದಿವಾಳಿ ತೆಗೆದ ಹೊಸ ಪರಿಯಲ್ಲಿ ನಿತ್ಯನಾರಾಯಣರಿಗೆ ಇದಕ್ಕಿಂತಲೂ ರಷ್ಯಾದಲ್ಲಿ ಹೆಚ್ಚಿಗೆ ಕಂಡುಬರುವುದೆಂದುಕೊಳ್ಳುವುದೂ ಸಹ ಅಸಂಭವವಾದುದೇ ಸರಿ.

ಸಿದೆನು. ಒಡವರ ಜೋಡುಗಳು ಮಂಜಿನ ಬಿಗಿತಕ್ಕೆ ಒಡೆದು ಅಡ್ಡ ಒಂದು ದನ್ನೆಲ್ಲ ಸಂಗುವಂತೆ ಕಾಣುವವು.

ನಾನಿದ್ದ ಅಕ್ಟೋಬರು ಹೋಟಲು* ಝಾರರ ಕಾಲದಲ್ಲಿಯೂ ಹೋಟಲೇ. ಇದು ಸ್ಟೇಷನ್ನಿನ ಎದುರಿನಲ್ಲಿ ಪೋಸ್ಟ ಆಫೀಸಿನ ಸಮೀಪ ದಲ್ಲಿರುವುದು. ಇದರಲ್ಲಿ ಹವೆಯ ಮೂಲಕ ಕೊಠಡಿಗಳಿಗೆ ಶಾಖವನ್ನು ಕೊಡುವ ಸೌಕರ್‍ಯಗಳಿರುವುವು. ಪ್ರತಿಯೊಂದು ಕೊಠಡಿಗೂ ಒಂದೊಂದು ಸ್ನಾನದ ಮನೆಯಿರುವುದು. ಪ್ರತಿಯೊಂದು ಕೊಠಡಿಯೂ ಎಲ್ಲ ಆಧುನಿಕ ವಿಶ್ರಾಂತಿಸಾಧನಸೌಕರ್ಯಗಳಿಂದ ಅಲಂಕರಿಸಲ್ಪಟ್ಟಿರುವುದು.

ನಾನು ಮಾರ್ಗದರ್ಶಿಕೆಗಾಗಿ ನಿರೀಕ್ಷಿಸುತ್ತ ಕುಳಿತಿದ್ದೆ. ನನ್ನ ಕಾಲಹರಣವಾಗುವುದಲ್ಲ! ಎಂದು ನನಗೆ ಅತ್ಯಂತ ಬೇಸರ. ಕಡೆಗೆ ಆಕೆಯು ಮೂರು ಗಂಟೆಯ ಹೊತ್ತಿಗೆ ಅಮೇರಿಕನ್ ಯಾತ್ರಿಕರನ್ನು ಕರೆದುಕೊಂಡು ಹೋಗಿದ್ದ ಯುವತಿಯನ್ನು ಹಿಂದಿಟ್ಟುಕೊಂಡು ಬಂದಳು. ಬರುತ್ತಲೇ—

'ಇನ್ನು ನಾನು ತಮ್ಮಪ್ಪಣೆ ತೆಗೆದುಕೊಳ್ಳುತ್ತೇನೆ. ನನ್ನ 'ಕಾಮ್ರೇಡ್' ನಿಮಗೆ ನಗರವನ್ನು ತೋರಿಸುವಳು' ಎಂದು, ಆಕೆಯು ಹೊರಟುಹೋದಳು. ರಷ್ಯಾದಂತಹ ದೇಶದಲ್ಲಿ ಚೆಲುವೆಯಾದ ಮಾರ್ಗ ದರ್ಶಿಕೆಯನ್ನು ಬಿಟ್ಟಗಲುವುದೆಂದರೆ ಏನನ್ನೋ ಕಳೆದುಕೊಂಡಂತೆ ತ್ತೋರಿತು. ಆದರೆ ಮಾಡುವುದೇನು? ವಿಧಿಯಿಲ್ಲ. ಯಾತ್ರಿಕರನ್ನು ಸ್ಟೇಷನ್ನಿನಿಂದ ಹೋಟಲಿಗೆ ತಂದಿಳಿಸುವವರೆಗೇ ಆಕೆಯ ಕೆಲಸ. ಈ ನನ್ನ ನೂತನ ಮಾರ್ಗದರ್ಶಿಕೆಯೂ ಇಂಗ್ಲೀಷನ್ನು ಚೆನ್ನಾಗಿ ಮಾತನಾಡುವಳು. ಮೊದಲಿನಾಕೆಯಂತೆ ಈಕೆಯು ಚೆಲುವೆಯಲ್ಲದಿದ್ದರೂ ಯಾವಾಗಲೂ ನಗು ಮೋರೆ. ಒಳ್ಳೆ ಚುರುಕು. ಈಕೆಯು ಕೂಡ ಎರಡು ಮೂರು ನಿಮಿಷಗಳಲ್ಲಿ ನನ್ನೊಡನೆ ಸ್ನೇಹ ಮಾಡಿಕೊಂಡುಬಿಟ್ಟಳು.

'ನೀವು ಏನೇನು ನೋಡಬೇಕೆಂದಿರುವಿರಿ?'

---

* ಝಾರ್ ಚಕ್ರವರ್ತಿಯನ್ನು ಗದ್ದುಗೆಯಿಂದಿಳಿಸಿದ ಮೇಲೆ, 'ಲೆನಿನ್' ನಡೆಸಿದ ಸೋಷಲಿಸ್ಟು ವಿಪ್ಲವವು ಅಕ್ಟೋಬರ್ ತಿಂಗಳಲ್ಲಿ ನಡೆಯಿತು. ಆದುದರಿಂದ ಇಂದಿನ ರಷ್ಯಾದೇಶಕ್ಕೆ 'ಅಕ್ಟೋಬರ್' ಮರೆಯಲಾರದ ಮಾತು.

' ಎಲ್ಲಾ—ಅದರಲ್ಲಿ ಮುಖ್ಯವಾಗಿ—ನಿಮ್ಮ ಸಮಾಜ—ನಿಮ್ಮ ಕಾರಖಾನೆಗಳು, ನಿಮ್ಮ ವ್ಯವಸಾಯ, ನಿಮ್ಮ ಲಲಿತ ಕಲೆಗಳು. '

' ಹಾಗಾದರೆ ಈಗ ಒಪೆರಾ ( ಸಂಗೀತ ನಾಟಕ ) ವನ್ನು ನೋಡೋಣ ನಡೆಯಿರಿ. ಉಳಿದವನ್ನು ನೋಡಲು ವೇಳೆಯಿಲ್ಲ. ನೋಡಬೇಕಾದುದನ್ನೆಲ್ಲಾ ಇನ್ನರ್ಧ ಗಂಟೆಯೊಳಗಾಗಿ ಮುಚ್ಚಿಬಿಡುವರು. ಆದುದರಿಂದ ಎಲ್ಲಿಗೆ ಹೊರಟರೂ ನಿರುಪಯೋಗ. '

' ಆದರೆ, ಅದಕ್ಕಾಗಿ ನಾನು ಬಹುಶಃ ಬೇರೆ ಹಣವನ್ನೂ ಖರ್ಚು ಮಾಡಬೇಕಾಗುವುದು. ನನ್ನ ಸಂಚಾರದಲ್ಲಿ ನಾಟಕವನ್ನೂ ನೋಡುವ ಸನ್ನಿವೇಶವೊದಗಲಿಲ್ಲ.' ಆಕೆಯು ಮುಗುಳ್ನಗೆ ನಕ್ಕಳು.

' ಹೌದು. ನಾಟಕಕ್ಕೆ ನೀವು ಬೇರೆ ಹಣವನ್ನು ಖರ್ಚು ಮಾಡಬೇಕಾಗುವದು. ಸೌಕರ್ಯಕ್ಕಾಗಿ ' ಟಾಕ್ಸಿ ' (ಬಾಡಿಗೆ ಕಾರು) ಏರ್ಪಡಿಸಿಕೊಂಡರೆ ಒಪೆರಾಕ್ಕೆ ಹೋಗಿ ಬರಬಹುದು.

' ಹಾಗಾದರೆ ನೀವು ನನ್ನೊಡನಿರುವುದಿಲ್ಲವೇ ?'

' ನಾನು ಹಾಗೆ ನಿಮ್ಮೊಡನೆ ಬಹಳ ಹೊತ್ತಿರಲಾರೆನು. ಈ ಹೊತ್ತು ಹಗಲೆಲ್ಲಾ ಆ ಅಮೇರಿಕನ್ ಯಾತ್ರಿಕರೊಡನೆ ತಿರುಗುತ್ತಾ ಕಾಲ ಕಳೆದಿದ್ದೇನೆ ಅದರಿಂದ ನಾನು ಬಹಳ ಬಳಲಿದ್ದೇನೆ. '

' ಇನ್ನು ಹೀಗೆ ಕಾಲ ಕಳೆಯುವುದು ನನಗಿಷ್ಟವಿಲ್ಲ, ಅಲ್ಲದೆ ರಶಿಯನ್ ನಾಟಕವನ್ನೂ ನೋಡಲು ಬಹು ಉತ್ಸಾಹದಿಂದಿರುವೆನೆಂದು ನಾನದಕ್ಕೆ ಕೂಡಲೆ ಸಮ್ಮತಿಸಿರುವೆನು. '

' ಹಾಗಾದರೆ ನಾನು ಹೋಗಿ ಬರುತ್ತೇನೆ. ಇಲ್ಲದಿದ್ದರೆ ನಾಟಕಶಾಲೆಯಲ್ಲಿ ಸ್ಥಳ ಸಿಗುವುದು ಕಷ್ಟ ' ವೆನ್ನುತ್ತ ಮಾರ್ಗದರ್ಶಿಕೆಯು ಹೊರಟುಹೋದಳು. ನಾನು ಕಿಟಿಕಿಯಲ್ಲಿ ಕುಳಿತುಕೊಂಡು ' ಲೆನಿನ್-ಯಿಜಂ 'ಗೆ ತೌರೂರಾದ ಆ ' ಲೆನಿನ್‌ಗ್ರಾಡ್ ' ಪಟ್ಟಣವನ್ನು ನೋಡಲಾರಂಭಿಸಿದೆನು. ಪ್ರಪಂಚದಲ್ಲೆಲ್ಲಾ ಈ ನಗರದಲ್ಲಿಯೇ ಮಾರ್ಕ್ಸ್-ತತ್ವಗಳು—ಆ ಸಿದ್ಧಾಂತಗಳು ಬೇರೂರಿ ಫಲಕಾರಿಯಾಗಿರುವವು. ಈ ನಗರದಲ್ಲಿಯೇ ವಿಪ್ಲವವು ಮೊದಲು ಪ್ರಕಟಿಸಲ್ಪಟ್ಟಿತು.

ಸಾಯಂಕಾಲ ಮಾರ್ಗದರ್ಶಿಕೆಯು ಟಾಕ್ಸಿಯಲ್ಲಿ ಒಪೆರಾಕ್ಕೆ ಕರೆದು

ಕೊಂಡುಹೋದಳು. ಆಕೆಯು ಟಿಕೆಟ್ಟನ್ನು ಮುಂಚೆಯೇ ತೆಗೆದು ಕೊಂಡಿದ್ದರೂ ನನ್ನನ್ನು ಒಳಕ್ಕೆ ಬಿಡಿಸಲು ಓಡಾಡಬೇಕಾಯಿತು. ನಾವು ಟಿಕೆಟ್ಟು ಮೊದಲು ಕೊಂಡಿದ್ದರೂ ನಮಗೆ ಸ್ಥಳವು ಕಾದಿಟ್ಟಿರ ಲಿಲ್ಲ. ನನಗೋಸ್ಕರ ಬೇರೊಂದು ಕುರ್ಚಿ ತಂದುಹಾಕಿದರು. ನನ್ನನ್ನು ಕೂಡಿಸಿ ಮಾರ್ಗದರ್ಶಿಕೆಯು ಹೊರಟುಹೋದಳು.

ಒಪೆರಾ ರಂಗವು ಬಹಳ ದೊಡ್ಡದು. ಕೂಡುವ ಪ್ರೇಕ್ಷಕರ ಸ್ಥಾನ ಗಳು ಎಂಟು ಅಂತಸ್ತುಗಳು. ಎಲ್ಲಕ್ಕಿಂತ ಮೇಲಿರುವ ಅಂತಸ್ತಿನಲ್ಲಿ ಕೂತಿರುವ ಪ್ರೇಕ್ಷಕರನ್ನು ಗುರ್ತಿಸುವದು ಕೂಡ ಅಸಾಧ್ಯ. ಎಲ್ಲ ಕಡೆಗೂ ಜನ ಕಿಕ್ಕಿರಿದು ತುಂಬಿರುತ್ತದೆ. ಎಲ್ಲಕ್ಕಿಂತಲೂ ಕೊನೆಯ ಅಂತಸ್ತಿನಲ್ಲಿರುವ ಒಂದು ಸೀಟಿಗಾಗಿ, ನಾನು 'ಕೂಲೀ ಟಿಕೆಟ್ಟಿಲ್ಲದ ವಿದೇಶೀಯಳಾದುದರಿಂದ ಒಂದು ಪೌಂಡಿಗಿಂತಲೂ ಹೆಚ್ಚಾಗಿ ಕೊಡ ಬೇಕಾಗಿ ಬಂತು. ನಾಟಕ, ಸಿನಿಮಾ, ರೈಲು, ಚಿಲ್ಲರೆ ಅಂಗಡಿ, ಯಂತ್ರ ಶಾಲೆ, ಪಾಠಶಾಲೆ, ಆಸ್ಪತ್ರೆ, ಹೋಟೆಲುಗಳಲ್ಲಿ ಒಂದೇಕೆ ಎಲ್ಲ ಕಡೆಗಳಲ್ಲೂ ಕೂಲಿಯವರಿಗೆ ಪ್ರತ್ಯೇಕ ಸೌಕರ್ಯಗಳೇರ್ಪಾಟಾಗಿರುವುವು. ಎಲ್ಲೆಡೆ ಗಳಲ್ಲೂ ವಿದೇಶೀಯರಾದ ನಮಗಿಂತಲೂ ಮೂರೆಂಟರಷ್ಟು ಕಡಿಮೆಯಿರು ವದು—ದರ—ಅವರಿಗೆ. ನಾನು **ಯುರೋಪಖಂಡದಲ್ಲೆಲ್ಲಾ ಇಂತಹ ದೊಡ್ಡ ನಾಟಕರಂಗವನ್ನು ನೋಡಲಿಲ್ಲ.** ಯಾವ ನಾಟಕರಂಗವೂ ಇಷ್ಟು ಕಿಕ್ಕಿರಿದಿರುವುದನ್ನು ನೋಡಲಿಲ್ಲ. ಅದನ್ನು ನೋಡುವಾಗಲೇ ರಷ್ಯನ್ನರು ಕಲೆಯೆಂದರೆ ಅಸಹ್ಯಪಡುವವರೆಂದೂ, ದೇಶದಲ್ಲಿ ಲಲಿತ ಕಲೆ ಗಳೆಲ್ಲಾ ಮಣ್ಣುಪಾಲಾಗಿರುವವೆಂದೂ ಹೇಳುವದು ಮೂರ್ಖತನ ವೆಂದೆ. ಜನಸಾಮಾನ್ಯರಲ್ಲಿ ಸಹ ಕಲೆಯಲ್ಲಿ ಇಷ್ಟು ಆದರಾಸಕ್ತಿಯುಳ್ಳ ಆ ದೇಶವು ಮತ್ತಾವುದಿರುವುದು? ಇಲ್ಲಿದ್ದ ಪ್ರೇಕ್ಷಕರು ದಾರಿಯಲ್ಲಿ ಕಂಡು ಬಂದವರಿಗಿಂತ ಶುಭ್ರವಾಗಿರುವರು. ಇಲ್ಲಿ ಸಾಮಾನ್ಯವಾಗಿ ಎಲ್ಲರ ಬಟ್ಟೆ ಗಳೂ ಪರಿಶುದ್ಧವಾಗಿರುವುವು. ಕೆಲವು ಸ್ತ್ರೀಯರ ಮುಖದ ಮೇಲೆ ಬಲೆಯ ಬುರುಖಾಗಳು, ಕೆನ್ನೆಯ ಮೇಲೆ ಪೌಡರು, ಕೈಲಿ ದೂರದಿಂದ ಆಟವನ್ನು ನೋಡುವ ದುರ್ಬಿಣಿಯೂ ಸಹ ಕಂಡುಬರುತ್ತಿದ್ದುವು. ಕೆಲವು ಯುವತಿಯರು ಸಾಯಂಕಾಲದ ಉಡುಪಿನಲ್ಲಿರುವರು.

ವಿಪ್ಲವವಾದ ಕೆಲವು ಕಾಲದ ವರೆಗೂ ರಷ್ಯನ್ನರು ಎಲ್ಲ ವಿಧದ ಆಟಪಾಟಗಳನ್ನು ಬಿಟ್ಟುಬಿಟ್ಟಿದ್ದರು. ಆ ದಿನಗಳಲ್ಲಿ ಸರ್ಕಸ, ರಂಗಶಾಲೆಗಳನ್ನು ಬಲಾತ್ಕಾರದಿಂದ ಮುಚ್ಚಲಾಗಿತ್ತೆಂದು ಹೇಳಿದರು. ಫಾಕ್ಸ್ ಟ್ರಾಟ್ ಎಂಬೊಂದು ವಿಧವಾದ ನಾಟ್ಯವಾಡುವುದೂ, ನೋಡುವುದೂ ಮಹಾಪರಾಧವಾಗಿ ಪರಿಗಣಿಸಲ್ಪಟ್ಟಿತ್ತು. ಆದರೆ ಇಂದು ರಷ್ಯಾ ತನ್ನ ಪರಿಸ್ಥಿತಿಯನ್ನು ತನ್ನ ಹತೋಟಿನಲ್ಲಿಟ್ಟುಕೊಳ್ಳಬಲ್ಲುದಾಗಿರುವುದು. ಪ್ರಜೆಗಳಿಗೆ ಅಪಾಯದ ಭೀತಿ ತೊಲಗಿರುವುದು. ರಕ್ತಪ್ರವಾಹದಿಂದ ಸಂಪಾದಿಸಿದುದನ್ನು ಅನುಭವಿಸುವದರಲ್ಲಿ ತೊಂದರೆಯಿಲ್ಲದಿರುವದರಿಂದ, ಅವರಲ್ಲಿ ಕ್ರಮಕ್ರಮವಾಗಿ ಆಟಪಾಟಗಳು ವಿನೋದಗಳು ಹೆಚ್ಚುತ್ತಿರುವುವು. ನಾಟಕಶಾಲೆಗಳು ಜನರಿಂದ ತುಂಬಿ ತುಳುಕುತ್ತಿರುವುವು. ಸಿನಿಮಾ ಮಂದಿರಗಳಲ್ಲಿ ಮರಳು ಎರಚಿದರೂ ಬೀಳದಷ್ಟು ಜನರು ಸೇರುತ್ತಿರುವರು. ವಿಪ್ಲವಕಾರರ ರಾಜ್ಯವಾದ ರಷ್ಯಾದಲ್ಲಿ ರಾತ್ರಿಯನ್ನು ಸುಖವಾಗಿ ಈಗ ಕಳೆಯಬಹುದು. 'ಸ್ಟ್ಯಾಲಿನ್ನ'ನ ನಂತರ ಅಷ್ಟೇ ಪ್ರತಿಭಾವಂತನಾದ 'ಕಾಗನೋವಿಷ್' ನು ಕಡೆ ಉಪನ್ಯಾಸ ಮಾಡುತ್ತಾ ದ್ವಿತೀಯ ಪಂಚವರ್ಷ ಪ್ರಣಾಳಿಕೆಯಲ್ಲಿ ರಂಗಸ್ಥಳಗಳು, ವಿನೋದ ಮಂದಿರಗಳು ಹೆಚ್ಚು ಹೆಚ್ಚಾಗಿ ನಿರ್ಮಾಣಮಾಡಲ್ಪಡುವವು ಎಂದು ಹೇಳಿರುವನು.

ನನಗೆ ನಾಟಕದ ಕತೆಯು ಮಾತೊಂದೂ ಕೂಡ ಅರ್ಥವಾಗಲಿಲ್ಲ. ಏಕೆಂದರೆ ಇದು ಕೇವಲ ಒಪೆರಾ. ಇದರಲ್ಲಿ ಸಂಗೀತಕ್ಕೆ ಪ್ರಾಧಾನ್ಯತೆಯುಂಟು. ಕೆಲವು ಗಾಯಕರ ಕಂಠಗಳು ಬಹು ಮಧುರವಾಗಿದ್ದುವು. ಅಂತಹ ಸಂಗೀತ ವಾದ್ಯಗಳ ಸಮ್ಮೇಳನವನ್ನು ನಾನೆಲ್ಲಿಯೂ ನೋಡಿಲ್ಲ. ಐವತ್ತು ಮಂದಿಗಿಂತಲೂ ಹೆಚ್ಚಿರಬಹುದು. ಎಲ್ಲರೂ ಒಂದೇ ಸಾರೆ ನಾನಾ ವಿಧದ ವಾದ್ಯಗಳನ್ನು ಬಾರಿಸಿದರು. ಆ ಧ್ವನಿಗಳೆಲ್ಲವೂ ಸಮ್ಮಿಳಿತವಾಗಿ ಒಂದು ಕರುಣ-ಕೋಮಲ- ಮಧುರ ಧ್ವನಿಯನ್ನು ಸೃಷ್ಟಿಸಿ ನಾಟಕಶಾಲೆಯನ್ನೆಲ್ಲಾ ಪ್ರತಿಧ್ವನಿಗೊಳಿಸುತ್ತಿದ್ದವು. ದೃಶ್ಯಗಳು ಕಣ್ಣುಗಳನ್ನು ಮರುಳು ಮಾಡದಿದ್ದರೂ ಸುಂದರವಾಗಿರುವುವು. ರಂಗದ ಮೇಲೆ ನೀಲಾಕಾಶವನ್ನೂ ಹುಣ್ಣಿಮೆಯ ಚಂದ್ರನನ್ನೂ ನಿಜ

ವೆನ್ನುವಷ್ಟು ಅದ್ಭುತವಾಗಿ ಪ್ರದರ್ಶಿಸಲ್ಪಡುವುದನ್ನು ನಾನೆಲ್ಲಿಯೂ ನೋಡಲಿಲ್ಲ. ಎಲ್ಲವೂ ಪೂರ್ಣಚಂದ್ರನ ಬೆಳದಿಂಗಳಲ್ಲಿ ನಡೆದಂತೆಯೇ ಇದ್ದಿತು. ಇವೆಲ್ಲಕ್ಕಿಂತಲೂ ಮಿಗಿಲಾಗಿ ವಿದೇಶಿಯರ ದೃಷ್ಟಿಯನ್ನು ಸಂಪೂರ್ಣವಾಗಿ ಆಕರ್ಷಿಸುವ ವಿಷಯವೆಂದರೆ ರಷ್ಯನರ ಕ್ರಮಶಿಕ್ಷಣ. ಇಷ್ಟು ಸಾವಿರ ಮಂದಿಯಿದ್ದರೂ ಕಥಾಂತರ ಸಮಯ ( interval ) ದಲ್ಲಿ ಯಾವ ವಿಧವಾದ ಸದ್ದುಗಲಭೆಯೂ ಇಲ್ಲ. ಇತರ ಯುರೋಪ ದೇಶಗಳ ರೀತಿಯಂತೆ 'ಏ ಸಿಗರೇಟ್' ಎಂಬ ಕೇಕೆಗಳಾಗಲೀ, ಟೀ ಕಪ್ಪುಗಳನ್ನು ಸೇರಿಸುವಾಗ ಆಗುವ ಕಲಕಲ ಶಬ್ದವಾಗಲಿ ಇಲ್ಲ. ಸರ್ವಾಂಗವೂ ಕಾಣುವಂತೆ ಬಿಗಿದುಕಟ್ಟಿಕೊಂಡಿದ್ದ ಅರ್ಧ ನಗ್ನ ಸ್ತ್ರೀಯರು ಇಲ್ಲಿ ನಾಟ್ಯವಾಡರು. ಸ್ತ್ರೀ ಶರೀರವನ್ನು ಸಾಧ್ಯವಿದ್ದಷ್ಟು ನಗ್ನ ವಾಗಿ ಕಾಣುವಂತೆ ಮಾಡಲು ಇಲ್ಲಿ ಯಾವ ವಿಧವಾದ ಪ್ರಯತ್ನ ಗಳೂ ಮಾಡುತ್ತಿಲ್ಲ. ಕಾಮೋದ್ದೀಪನವನ್ನುಂಟುಮಾಡುವ ದೃಶ್ಯಗಳು ಸಹಿತ ನಾಟಕದಲ್ಲಿಲ್ಲ. ಇವೆಲ್ಲಾ ಇತರ ದೇಶಗಳಲ್ಲಿ ಸರ್ವಸಾಮಾನ್ಯ ವಾಗಿ ನಡೆಯುವ ವಿಷಯಗಳು. ಅಂತಹ ಸಮಯದಲ್ಲೂ ನಹ ರಷ್ಯ ನರು ನೀತಿಬಾಹಿರರನ್ನೂ, ದುರಾಚಾರವಂತರನ್ನೂ ನಿಂದಿಸುತ್ತಿರುವರು. ಅವರು ಅನುಸರಿಸುತ್ತಿರುವ ಆಚಾರವನ್ನೂ, ನೀತಿ ಪರಿಶೀಲನೆ ಮಾಡಿ ನೋಡಿದರೆ ರಷ್ಯನರು ಐರೋಪ್ಯ ಜಾತಿಗಳೆಲ್ಲಕ್ಕಿಂತ ನೀತಿವಂತರು, ಯೋಗ್ಯರು ಆಗಿದ್ದಾರೆಂದು ಹೇಳದೆ ವಿಧಿಯಿಲ್ಲ. ಪ್ಯಾರಿಸು, ಬರ್ಲಿನ್, ಲಂಡನ್, ರೋಂ ಮೊದಲಾದ ಯುರೋಪುಖಂಡದ ನಗರಗಳಲ್ಲಿನ ಅಂಗಡಿಗಳ ಕನ್ನಡಿಗಳ ಮೇಲೆ ಬರಿಯಬತ್ತಲೆಯಿರುವ ಸ್ತ್ರೀಚಿತ್ರಗಳು ಬೇಕಾದಷ್ಟು ಕಂಡುಬರುವುವು. ರಷ್ಯನರಿಗೆ ಅಂತಹ ಪ್ರದರ್ಶನಗಳೆಂದರೆ ಅಸಹ್ಯ. ಗಿರಾಕಿಯನ್ನು ಸೆಳೆಯಲು ಅಂಗಡಿಗಳ ಮೇಲೆ ಉತ್ತಮ ಚೆಲುವೆಯರನ್ನು ಕೂಡಿಸುವುದನ್ನೂ ನಹ ಅವರು ಅಂಗೀಕರಿಸುವುದಿಲ್ಲ. ತಮ್ಮ ದಿನಪತ್ರಿಕೆಗಳು, ವಾರಪತ್ರಿಕೆಗಳು, ಮಾಸಪತ್ರಿಕೆಗಳು ಹೆಚ್ಚು ಹೆಚ್ಚಾಗಿ ಖರ್ಚಾಗಲು ಅವುಗಳ ಮೇಲೆ ಅಸಹ್ಯಕರವಾದ ಚಿತ್ರಗಳನ್ನು ಮುದ್ರಿಸರು.

ನಾಟಕ ಮುಗಿದ ಮೇಲೆ ಬಾಗಿಲುಬಳಿ ಅತ್ತಿತ್ತ ಅಡ್ಡಾಡುತ್ತ

ವಿಟರಿಗಾಗಿ ನಿರೀಕ್ಷಿಸುತ್ತಲಿರುವ ಹುಡಗಿಯರಾರೂ ನನ್ನ ಕಣ್ಣಿಗೆ ಬೀಳ ಲಿಲ್ಲ. ಈ ದೃಶ್ಯವು ಲಂಡನ್ನಿನಲ್ಲಿಯೂ, ಪ್ಯಾರಿಸ್ಸಿನಲ್ಲಿಯೂ ಸಾಮಾನ್ಯವಾಗಿ ಕಂಡುಬರುವುದು. ಯು, ಯಸ್, ಯಸ್, ಆರ್ ವೇಶ್ಯಾವೃತ್ತಿಯು ಇಷ್ಟು ಬೇಗನೆ ಕಡಿಮೆಯಾಗಲು ಕಾರಣ, ಅವರು ನಡೆಯಿಸುತ್ತಿರುವ 'ವೇಶ್ಯಾಸಂಸ್ಕಾರ ಗೃಹ' ಗಳು ಮಾತ್ರವಲ್ಲ, ರಾಜಕೀಯ ಆರ್ಥಿಕವಿಷಯ ಗಳಲ್ಲಿ ಪುರುಷರಿಗೆ ಸರಿಸಮಾನವಾಗಿ ಸ್ತ್ರೀಯರಿಗೂ ಸ್ವಾತಂತ್ರ್ಯವನ್ನು ಕೊಡುವುದೇ ಕಾರಣ. ಕಡು ಬಡವರಾದ ಜನಾಂಗವನ್ನು ಯಾವಾಗಲೂ ಬಾಧಿಸುತ್ತಿರುವ,ಆಹಾರಸಮಸ್ಯೆಯು ಪರಿಷ್ಕಾರವಾಗಿ ಹೋಗಿರುವುದು. ವಿವಾಹನಿರ್ಬಂಧವು ಸಡಿಲಿಸಲ್ಪಟ್ಟಿರುವುದು. ಆದುದರಿಂದ ಇದಕ್ಕೆ ಮುಂಚೆ ಸಮಾಜದ ಕಾಠಿಣ್ಯಕ್ಕೆ ಬಲಿಯಾಗಿ, ಹೊಟ್ಟೆಗಾಗಿ ತಪ್ಪು-ಒಪ್ಪಿ ಲ್ಲದೆ ವ್ಯಭಿಚಾರವೃತ್ತಿಯನ್ನು ಅವಲಂಬಿಸುತ್ತಿದ್ದ ಸ್ತ್ರೀಯರು ಕಡಿಮೆ ಯಾಗಿರುವರು. ಇನ್ನು ಕೇವಲ ವಿಶೇಷವಾದ ಕಾಮೋಚ್ಛೆಯಿಂದ ವ್ಯಭಿ ಚಾರವೃತ್ತಿಗಿಳಿದ ಸ್ತ್ರೀಯರು ಈಗಲೂ ಈ ಮಾರ್ಗಕ್ಕೆ ಬರುತ್ತಿರುವರು. ಆದರೆ, ಅವರನ್ನು ಕೂಡಲೆ ' ವೇಶ್ಯಾಸಂಸ್ಕಾರ ಗೃಹ ' ಗಳಲ್ಲಿಟ್ಟು ಔಷ ಧೋಪಚಾರಗಳನ್ನು ಮಾಡಿ ದಾರಿಗೆ ತರುತ್ತಿರುವರು.

ಈ ಸಂಸ್ಕಾರಗೃಹಗಳಲ್ಲಿ ಈ ಸ್ತ್ರೀಯರಿಗೆ ಸ್ವತಂತ್ರವಾಗಿ ಜೀವಿ ಸಲು ಅಗತ್ಯವಾದ ಕೆಲಸಗಳನ್ನು ಕಲಿಸಲಾಗುವುದು. ಈ ಸ್ತ್ರೀಯರು ಸುಮಾರು ಒಂದು ವರುಷ ಆ ಮನೆಯನ್ನು ಬಿಟ್ಟು ಹೋಗಕೂಡದು. ಹಾಗೆಂದರೆ ಅವರೆಲ್ಲರನ್ನೂ ಸೆರೆಯಲ್ಲಿಟ್ಟಂತಲ್ಲ. ಉತ್ಸವಗಳಿಗೂ, ಸಭೆ ಗಳಿಗೂ ಹೋಗಬಹುದು. ಈ ವರುಷದಲ್ಲಿಯೇ ಅವರ ಮನೋಪ್ರವೃತ್ತಿ ಯನ್ನೂ, ಅಭ್ಯಾಸಗಳನ್ನೂ ಮಾರ್ಪಡಿಸಬಲ್ಲೆವೆಂದು ಸೋವಿಯಟ್ ಸರಕಾರವು ಕಂಕಣಕಟ್ಟಿ ಹೇಳುತ್ತಿರುವುದು. ಈ ವರುಷವು ಮುಗಿದ ಮೇಲೆ ಸರಕಾರವೇ ಅವರಿಗೆ ಕೆಲಸ ತೋರಿಸುವದು. ಸಂಸ್ಕಾರಗೃಹ ಗಳನ್ನು ಬಿಟ್ಟಮೇಲೆ ಸಹ ಸ್ತ್ರೀಯರು ಮತ್ತೆ ತಮ್ಮ ಧೋರಣೆಯನ್ನೇ ಆರಂಭಿಸಿದ್ದೇ ಆದರೆ, ಅವರನ್ನು ಮತ್ತೆ ಸಂಸ್ಕಾರಗೃಹಗಳಲ್ಲಿಟ್ಟು ಸರಿ ಪಡಿಸಬು ಪ್ರಯತ್ನಿಸುವರು. ವೇಶ್ಯೆಯರಿಗೆ ' ಲೈಸೆನ್ಸು 'ಕೊಟ್ಟು ಅವರ ಸಂಖ್ಯೆಯನ್ನು ಕಡಿಮೆಮಾಡುವುದಕ್ಕಿಂತ ವ್ಯಭಿಚಾರಕ್ಕಿರುವ ಮೂಲ

ಕಾರಣಗಳನ್ನು ನಿವಾರಿಸುವುದು ವ್ಯಭಿಚಾರವನ್ನು ಕುಗ್ಗಿಸಲು ಉತ್ತಮ ಉಪಾಯವಲ್ಲವೇ ?

ಹೊರಗಡೆ ನನ್ನ 'ಟಾಕ್ಸಿ' ಸಿದ್ಧವಾಗಿರುವುದು. ನಂಬರನ್ನು ಹಿಡಿದು ಅದನ್ನು ಗುರ್ತಿಸಿ ಹೋಗಿ ಅದರಲ್ಲಿ ಕೂತುಕೊಂಡು ಹೋಟಲಿಗೆ ಹಿಂತಿರುಗಿ ಬಂದೆನು.

---

೨

ಸಮಾಜವಾದಿ ವ್ಯಾವಹಾರಿಕದೃಷ್ಟಿ

ಬೆಳಿಗ್ಗೆ ಒಂಬತ್ತು ಹೊಡಿಯುವ ಹೊತ್ತಿಗೆ ಕಣ್ಣು ತೆರೆದೆ. ಒಂದು ಕೊಠಡಿಯಲ್ಲಿ ಹವೆಯು ಸಿದ್ಧವಾಗಿ ಹೋಟಲಿನಲ್ಲಿನ ಎಲ್ಲ ಕಿರುಮನೆಗಳೊಳಕ್ಕೂ ಶಾಖವು ಬಿಡಲ್ಪಡುತ್ತಿತ್ತು. ಇದರಿಂದಲೇ ರಾತ್ರಿ ನನಗೆ ನಿದ್ದೆ ಎಚ್ಚರವಿಲ್ಲದಂತೆ ಬಂದಿತು. ಶಾಖೋತ್ಪತ್ತಿ ಮಾಡಲು ಯೂರೋಪಿನಲ್ಲಿ ಆಚರಣೆಯಲ್ಲಿರುವ ಈ ಶಾಸ್ತ್ರೀಯ ವಿಧಾನವು ಬಹು ಸುಖಕರವಾದುದು. ಇದನ್ನೇ 'ಸೆಂಟ್ರಲ್ ಸ್ಟೀಂ ಹೀಟಿಂಗ್'ದಾಗಲಿ 'ಸೆಂಟ್ರಲ್ ಹೀಟಿಂಗ್'ದಾಗಲಿ ಕರೆಯುವರು. ಆದರೆ, ಈ ಪದ್ಧತಿಯು ಎಲ್ಲ ಕಡೆಗಳಲ್ಲೂ ಇಲ್ಲ. ಹ್ಯಾಂಬರ್ಗ್ ನಗರದಲ್ಲಿ ನಾನಿದ್ದ ಹೋಟಲಿನಲ್ಲಿ ಈ ವಿಧಾನವು ಇಲ್ಲ. ಇದರ ಪರಿಣಾಮವೇನೆಂದರೆ, ಫ್ಲಾನಲು 'ರಜಾಯಿ'ಯನ್ನು ಹೊದ್ದುಕೊಂಡು ಮಲಗಿದ್ದರೂ ಮೈದುಳಿಲ್ಲಾಗಡ್ಡೆಕಟ್ಟಿ ಮಂಜಿನ ಮುದ್ದೆಯಂತೆ ಆಗುತ್ತಿದ್ದಂತೆ ತೋರಿತು. ಕೊಠಡಿಯೆಲ್ಲಾ ಮಂಜು ತಯಾರಿಸುವ ಯಂತ್ರಾಲಯವಾಗಿ, ನನ್ನ ಶರೀರವೆಲ್ಲಾ ಮಂಜಿನಲ್ಲಿಟ್ಟಿದ್ದ ಮಾಂಸದ ಮುದ್ದೆಯಂತೆ ಕಂಡಿತು. ಇಂಗ್ಲೆಂಡಿನ ಹೋಟಲುಗಳಲ್ಲೂ, ವಿಶ್ರಾಂತಿ ಭವನಗಳಲ್ಲೂ ಇದೇ ನನ್ನ ಅನುಭವ. 'ಸೆಂಟ್ರಲ್ ಹೀಟಿಂಗ್'ಪದ್ಧತಿಯ ನೀರಿಗೆ ಶಾಖೋತ್ಪತ್ತಿ ಮಾಡುವುದು ಬಹು ಕಷ್ಟ. ಆದರೆ ಈ ಹೋಟಲಿ

ನಲ್ಲಿ ಉಷ್ಣೋತ್ಪತ್ತಿ ಮಾಡಲು ಅವಲಂಬಿಸುತ್ತಿರುವ ವಿಧಾನವು ಬಹಳ ಚೆನ್ನಾಗಿದೆ. ಸ್ನಾನದ ಮನೆಯಲ್ಲಿ ಬಿಸಿನೀರಿನ ನಲ್ಲಿಗಳೂ ತಣ್ಣೀರಿನ ನಲ್ಲಿಗಳೂ ಇರುವುವು.

ನ್ಯಾರಿ ಮಾಡಲು ಹೋದೆ. ಅದು ಬಹಳ ಅರುಚಿ. ನಾನು ಕೊಂಚ ಟೀ, ಕೆಂಪು ರೊಟ್ಟಿಯನ್ನು ಮಾತ್ರ ತಿನ್ನಲು ಯತ್ನಿಸಿದೆ.

'ಗುಡ್ ಮಾರ್ನಿಂಗ್, ರಾತ್ರಿ ಸುಖವಾಗಿ ನಿದ್ರೆ ಹತ್ತಿತೆ?' ಎನ್ನುತ್ತಾ ನಗುಮುಖದಿಂದ ನನ್ನ 'ಮಾರ್ಗದರ್ಶಿಕೆ'ಯು ಕೊಠಡಿ ಯೊಳಕ್ಕೆ ಪ್ರವೇಶ ಮಾಡಿ, 'ನೀವಿನ್ನೂ ಏಳಲಿಲ್ಲವೇ? ಅಬ್ಬಾ, ಎಷ್ಟು ತಡಮಾಡುವಿರಲ್ಲಾ' ಎಂದಳು.

ಟೀಯನ್ನು ಗುಟುಕು ಹಾಕಿ ಎದ್ದೆನು. 'ನಾನು ಸಿದ್ಧನಾಗಿದ್ದೇನೆ. ನಿಮಗಾಗಿ ಎದುರು ನೋಡುತ್ತಿದ್ದೇನೆ.'

'ಹಾಗಾದರೆ ನಡೆಯಿರಿ. ಈ ದಿನ ನಾವು ವ್ಯರ್ಥವಾಗಿ ಕಾಲಹರಣ ಮಾಡಲಾಗದು.'

'ಕ್ಷಮಿಸಿ, ಒಂದು ನಿಮಿಷ. ನನ್ನ ಕೊಠಡಿಯೊಳಗಿರುವ ಮೇಲಂಗಿ ಯನ್ನು (ಓವರ್ ಕೋಟನ್ನು) ತರುತ್ತೇನೆ.'

'ಲಿಫ್ಟ್' ಮೇಲೆ ಹತ್ತಿ ಮೇಲಿರುವ ನನ್ನ ಕೊಠಡಿಗೆ ಹೋದೆನು. ಹೊರಗಿರುವ 'ಹೊರಂಡಾ'ದಲ್ಲಿ ಕೆಲವು ಹುಡುಗರು ಆಡುತ್ತಿದ್ದರು. ಅವರ ಮುಖಗಳು ಅತಿ ಸುಂದರವಾಗಿದ್ದುದರಿಂದ, ಅವರನ್ನು ಮಾತನಾಡಿಸ ಬೇಕೆಂದು ಬಹು ಆಶೆಯಾಯಿತು. ಅವರ ಬಳಿ ಹೋದೆನು. ಅವರಲ್ಲಿ ಸುಮಾರು ಏಳು ವರುಷದ ಹುಡುಗಿಯೊಬ್ಬಳು ಸ್ವಚ್ಛವಾದ ಇಂಗ್ಲೀಷು ಭಾಷೆಯಲ್ಲಿ ಮಾತನಾಡಿಸಿದಳು.

'ನೀವು ಇಂಗ್ಲೀಷು ಮಾತನಾಡುವಿರಾ?' ನನಗೆ ಆ ಮಾತು ಕೇಳಿದ ಕೂಡಲೆ ಬಹು ಸಂತೋಷವಾಯಿತು. ಈ ಮಕ್ಕಳೊಂದಿಗೆ ಮಾತ ನಾಡಲು ಒಳ್ಳೆಯ ಅವಕಾಶವು ಸಿಕ್ಕಿತೆಂದು ನನಗೆ ಸಂತೋಷವಾಯಿತು.

''ನೀನು ರಷ್ಯನಳೇ? ನೀನಿಷ್ಟು ಚೆನ್ನಾಗಿ ಇಂಗ್ಲೀಷನ್ನು ಹೇಗೆ ಮಾತನಾಡಬಲ್ಲೆ?'

'ನಾನು ಅಮೇರಿಕನಳು. ನಮ್ಮ ತಂದೆಯವರಿಲ್ಲಿ ಇಂಜನಿಯರ ರಾಗಿದ್ದಾರೆ.'

'ನೀನಿಲ್ಲಿ ಎಷ್ಟು ದಿನಗಳಿಂದಿದ್ದೀಯೆ ?'

'ಹತ್ತು ತಿಂಗಳಿಂದ. ಆದರೆ ಇನ್ನು ಬಹು ದಿನವಿರಲಾರೆ. ರಷ್ಯನರು ಬಹಳ ಕೆಟ್ಟ ಜನರು.'

ಈ ಚಿಕ್ಕ ಮಗುವಿಗೆ ರಷ್ಯನರೆಂದರೆ ಏಕಿಷ್ಟು ಕೋಪವೋ ತಿಳಿದು ಕೊಳ್ಳಬೇಕೆಂದು ನನಗೆ ಆಶೆಯಾಯಿತು.

'ನನ್ನ ತಂದೆಯವರು ಎರಡು ವರುಷಗಳ (ಕಂಟ್ರಾಕ್ಟಿನ) ಒಪ್ಪಂದದ ಮೇಲೆ ಇಲ್ಲಿಗೆ ಬಂದರು. ಇವರು ನಮ್ಮಿಂದ ಕೆಲಸವಾಗುವ ವರೆಗೂ ನಮ್ಮನ್ನು ಪೂಜಿಸುವರು. ಕೆಲಸದ ಗುಟ್ಟು ತಿಳಿದ ಮೇಲೆ ಆ ಆದರ ಉಳಿಯುವುದಿಲ್ಲ. ಆದರೆ, ನಮ್ಮ ತಂದೆಯವರೊಡನೆ ಒಪ್ಪಂದ ಮಾಡಿ ಕೊಂಡಿರುವುದರಿಂದ ಬಹಿರಂಗವಾಗಿ ಹೊರಟು ಹೋಗೆನ್ನಲಾರದೆ ಹಿಂಸೆ ಮಾಡುತ್ತಿರುವರು.'

ಅಲ್ಲಿರುವ ಮಿಕ್ಕಿಬ್ಬರು ಹುಡುಗಿಯರಿಗೂ ಈ ಮಾತುಗಳಾವುದೂ ಅರ್ಥವಾಗುವುದಿಲ್ಲವೆಂದು ಸ್ಪಷ್ಟವಾಗಿ ಅನಿಸಿತು. ಅವರ ಕಡೆ ತಿರುಗಿ, 'ನೀವು ಇಂಗ್ಲೀಷು ಮಾತನಾಡಲಾರಿರಾ ?' ಎಂದು ಕೇಳಿದೆನು. ಅವರು ಫಕ್ಕನೆ ನಕ್ಕು ಏನೋ ಹೇಳಿದರು. ಅದು ನನಗರ್ಥವಾಗಲಿಲ್ಲ.

'ಇವರು ಇಂಗ್ಲೀಷು ಮಾತಾಡಲಾರರು. ಇವರು ರಷ್ಯನರು. ನಾನು ಮಾತ್ರ ರಷ್ಯನು, ಜರ್ಮನು, ಫ್ರೆಂಚ ಕೂಡಾ ಮಾತಾಡಬಲ್ಲೆನು.'

ಆ ಹುಡಿಗಿಯನ್ನು ಪರೀಕ್ಷಿಸಬೇಕೆಂದು, ಜರ್ಮನೀ ಭಾಷೆಯಲ್ಲಿ 'ನೀನಿಷ್ಟು ಭಾಷೆಗಳನ್ನು ಹೇಗೆ ಕಲಿತಿದ್ದೀಯೆ ?' ಎಂದು ಕೇಳಿದೆನು.

'ರಿವಾಲ್ವರಿ'ನಿಂದ ಗುಂಡು ಹಾರುವಂತೆ, ಆ ಹುಡಿಗಿಯು ಗಂಭೀರ ವಾಗಿ ಜರ್ಮನು ಭಾಷೆಯಲ್ಲಿ ಗಂಭೀರವಾಗಿ ಸಮಾಧಾನವನ್ನು ಹೇಳಿದಳು.

ನನ್ನ ಮಾರ್ಗದರ್ಶಿಕೆಯು ನನಗಾಗಿ ಕಾಯುತ್ತಿರುವಳೆಂಬ ವಿಚಾರವು ಜ್ಞಾಪಕಕ್ಕೆ ಬಂದಿತು. ಮಕ್ಕಳು ನಮಸ್ಕಾರ ಮಾಡುವ ರೀತಿಯಲ್ಲಿ ಸೊಣಕಾಲೂರಿ ತಲೆ ತಿರುಗಿಸಿದರು.

'ಸಾಯಂಕಾಲ ನನ್ನ ಹಾಡು ಕೇಳಲಿಕ್ಕೆ ಬರುವಿರಾ ?' ಎಂದು

ಅಮೇರಿಕನು ಹುಡಿಗಿಯು ಕೇಳಿದಳು. ಸಮಯ ಸಿಕ್ಕರೆ ಬರುವೆನೆಂದು ಮಾತು ಕೊಟ್ಟೆನು.

ಟಾಕ್ಸೀ ಬಾಡಿಗೆಗೆ ತೆಗೆದುಕೊಂಡರೆ ನಗರದಲ್ಲಿ ಸುಲಭವಾಗಿ ಸುತ್ತ ಬಹುದೆಂದೂ ನೋಡಬೇಕಾದುದನ್ನು ಹೆಚ್ಚಾಗಿ ನೋಡಬಹುದೆಂದೂ, ಮಾರ್ಗದರ್ಶಿಕೆಯು ಸಲಹೆಯನ್ನಿತ್ತಳು. ನಾನದಕ್ಕೆ ಒಪ್ಪಿದೆ. ಇದಕ್ಕಾಗಿ ಯಾತ್ರಿಕ ಶಾಖೆಯವರ ಕಾರ್ಯಾಲಯಕ್ಕೆ ಟಾಕ್ಸೀ ಏರ್ಪಡಿಸಿಕೊಳ್ಳಲು ಹೊರಟೆವು.

ಯುರೋಪುಖಂಡದ ಇತರ ದೇಶಗಳಲ್ಲಿದ್ದಂತೆ ಸುಂದರವಾಗಿ ಅಲಂಕರಿಸಲ್ಪಟ್ಟ ಅಂಗಡಿಯೊಂದೂ ಇಲ್ಲಿ ಕಂಡುಬರುವುದಿಲ್ಲ. ಮೋಟಾರು ಗಳಂತೂ ಬಹು ಕಡಿಮೆ. ಮೋಟಾರು ತಯಾರಿಸುವ ಕಾರಖಾನೆಗಳನ್ನು ತಮ್ಮ ದೇಶದಲ್ಲಿ ಪ್ರಾರಂಭಿಸಿದ ತರುವಾಯ ಅದಕ್ಕೆ ಅಭಾವವಿರಲಾರ ದೆಂದು ರಷ್ಯನರ ನಂಬುಗೆ. ಈಗ ವಿದೇಶೀ ವ್ಯಾಪಾರದ ಪೇಟೆಯಲ್ಲಿ ರಷ್ಯಾಕ್ಕೆ ಪತ್ತು ಇಲ್ಲದೇ ಇರುವುದರಿಂದ, ಯಾವ ವಸ್ತುವು ಬೇಕಾದರೂ ಭಂಗಾರವನ್ನೋ, ಕಬ್ಬಿಣವನ್ನೋ, ಧಾನ್ಯವನ್ನೋ ಕೊಟ್ಟು ಕೊಂಡು ಕೊಳ್ಳಬೇಕಾಗುತ್ತದೆ.

ಆಯೀದೊ-ಹತ್ತೋ ಕುದುರೆಯ ಗಾಡಿಗಳು ಕಂಡುಬಂದವು. ಆದರೆ ಅವನ್ನು ಬಹಳ ಭಾರವೆಳೆಯುವದಕ್ಕಾಗಿಯೆ ಉಪಯೋಗಿಸುತ್ತಿ ದ್ದಾರೆ. ಕೆಲವಕ್ಕೆ ರಬ್ಬರ ಟೈರುಗಳನ್ನು ಕೂಡ ಹಾಕಿದ್ದಾರೆ. ಇವು ಇಂದಿನ ವರೆಗೂ ಸ್ವತಂತ್ರ ವ್ಯಕ್ತಿಗಳ ಸ್ವತ್ತೇ ಆಗಿವೆ. ಒಬ್ಬರನ್ನು ಪೀಡಿಸಿ ಸುಲಿಗೆ ಮಾಡಲು ಅವಕಾಶವಿಲ್ಲದ ವಿಧಾನದಲ್ಲಿ ವ್ಯಕ್ತಿ ವ್ಯಾಪಾ ರಗಳಿಗೆ ಇಂದು ರಷ್ಯಾದಲ್ಲಿ ಅನುಮತಿ ಕೊಡಲ್ಪಟ್ಟಿರುವದು. ಕೆಲವು ಪ್ರತ್ಯೇಕ ಪರಿಸ್ಥಿತಿಗಳನ್ನು ಬಿಟ್ಟು, ಯಾರೂ ಯಾರನ್ನೂ ಕೂಲಿಗೆ ಏರ್ಪಡಿ ಸಿಕೊಳ್ಳಲು ಕಾನೂನು ಮೇರೆಗೆ ಒಪ್ಪಿಗೆಯಿಲ್ಲ. ಯಾವುದೋ ರೋಗ ವೋ ಬಂದು ವಿಧಿಯಿಲ್ಲದೆ ಹೋದ ಹೊರತು ರೈತರು ಸಹ ಕೂಲಿಯವ ರನ್ನು ಕರೆದುಕೊಳ್ಳಲು ಶಾಸನದ ಸಮ್ಮತಿಯಿಲ್ಲ. ಈಗೀಗ ವ್ಯಕ್ತಿ ವ್ಯಾಪಾರದ ವಿಷಯವಾಗಿ 'ಸೋಷಲಿಸ್ಟರು' ಶಾಸನವನ್ನು ಮಾರ್ಪಡಿ ಸಿರುವರಾದರೂ, ಅವರ ಅಭಿಪ್ರಾಯಗಳೇನೂ ವ್ಯತ್ಯಾಸವಾಗಿಲ್ಲ. ಈಗ

ಶಾಸನಬದ್ಧವಾಗಿ ವ್ಯಕ್ತಿಗಳು ವ್ಯಾಪಾರ ಮಾಡಿಕೊಳ್ಳಬಹುದು. ಆದರೆ ಸರಕಾರವು ತೋರಿಸುತ್ತಿರುವ ಉಪೇಕ್ಷಾ ಭಾವನೆಯು, ಹೆಚ್ಚು ಹೆಚ್ಚು ತೆರಿಗೆಗಳು, ನಿರ್ಬಂಧದ ಸುಂಕಗಳು ಇವೇ ಮುಂತಾದ ಬಾಧೆಗಳು ಹೆಚ್ಚಾಗಿ ಸ್ವತಂತ್ರವಾಗಿ ವ್ಯಕ್ತಿಗಳು ವ್ಯಾಪಾರ ಮಾಡಲು ಯಾರಿಗೂ ಸಾಧ್ಯವಿಲ್ಲ. ಕುಂಬಾರನು ಮಡಿಕೆಗಳನ್ನು ಮಾಡಿಕೊಂಡು ಪೇಟೆಯಲ್ಲಿ ಮಾರಿಕೊಳ್ಳಬಹುದು. ಇದೇ ರೀತಿಯಲ್ಲಿ ನೇಯ್ಗೆಯವರು, ಬಡಿಗಗಳು, ಕಮ್ಮಾರರು ಮೊದಲಾದ ವೃತ್ತಿದಾರರು ತಮ್ಮ ತಮ್ಮ ವೃತ್ತಿಗಳನ್ನು ಮಾಡಿಕೊಂಡು, ತಮ್ಮ ಸರಕನ್ನು ಎಲ್ಲರಿಗೂ ಮಾರಿಕೊಳ್ಳ ಬಹುದು. ಆದರೆ, ಅದಕ್ಕೊಂದು ನಿರ್ಬಂಧ. ಯಾರನ್ನೂ ಅವನು ಕೂಲಿಗೆ ಕರೆದುಕೊಳ್ಳಕೂಡದು. ವ್ಯಕ್ತಿ ವ್ಯಾಪಾರಿಗಳಿಗೆ ಓಟು ಕೊಡುವ ಹಕ್ಕು ಬಾಧ್ಯತೆಗಳಿರುವದಿಲ್ಲ. ಅವರಿಗೆ 'ರೇಷನ್ ಕಾರ್ಡ' ಕೊಡ ಲ್ಪಡುವದಿಲ್ಲವೇನೋ. ಯಾವ ಪದಾರ್ಥವೂ ಅಗ್ಗವಾಗಿ ಸಿಗುವದಿಲ್ಲ. ಅವರ ಮೇಲೆ ಹೆಚ್ಚು ಹೆಚ್ಚಾಗಿ ಸುಂಕ ಸಾರಿಗೆಗಳನ್ನು ಹೇರುತ್ತಾರೆ. ಅನುಮಾನದಿಂದ ಅವರ ನಡವಳಿಕೆಗಳನ್ನು ಪರೀಕ್ಷಿಸುತ್ತಿರುತ್ತಾರೆ. ವ್ಯಕ್ತಿ ವ್ಯಾಪಾರಿಗಳ ಮೇಲೆ ಕೇಸು ನಡೆಯಿತೆಂದರೆ, ಅವರ ಆಸ್ತಿಯನ್ನು ಸ್ವಾಧೀನಪಡಿಸಿಕೊಳ್ಳುವದು ರಷ್ಯಾದಲ್ಲಿ ಮಾಮೂಲು ವಿಚಾರ.

ಪಾಠಶಾಲೆಗಳಲ್ಲಿ, ವಿನೋದಮಂದಿರಗಳಲ್ಲಿ, ಆಸ್ಪತ್ರೆಗಳಲ್ಲಿ, ನೈಸ್ಕೂ ಗಳಲ್ಲಿ ವ್ಯಕ್ತಿವ್ಯಾಪಾರಿಗಳ ಮಕ್ಕಳಿಗೆ ಅವಕಾಶವು ಎಲ್ಲರಿಗೂ ಆದ ಮೇಲೆ ಕೊನೆಯದಾಗಿ ಕೊಡಲ್ಪಡುವದು. ಓದಿಗೆ, ತಿಂಡಿಗೆ, ಬಟ್ಟೆಗೆ, ವಾಸಕ್ಕೆ ಸಾಮಾನ್ಯ ಕೂಲಿಗಳ ಮಕ್ಕಳಿಗಿಂತ ಹೆಚ್ಚಾಗಿ ಹಣಕೊಡಬೇಕಾಗುವದು. ಸರಕಾರವು ಈ ವ್ಯಕ್ತಿವ್ಯಾಪಾರಿಗಳಿಂದ ಸಾಧ್ಯವಾದಷ್ಟು ಹೆಚ್ಚು ಹಣ ವನ್ನು ವಸೂಲುಮಾಡುವದು. ಅದು ವ್ಯಕ್ತಿ ವ್ಯಾಪಾರ ಪದ್ಧತಿಯನ್ನು ಕಂಡರೆ ಶತ್ರುವನ್ನು ಕಂಡಂತೆ ಕಾಣುತ್ತದೆ. ಅದನ್ನು ನಿರ್ಮೂಲ ಮಾಡ ಬೇಕೆಂದೇ ಪ್ರಭುತ್ವದ ಉದ್ದೇಶ. ಲೆನಿನ್‌ಗ್ರಾಡಿನಲ್ಲಿ ಸ್ವಂತ ಅಂಗಡಿ, ಸ್ವಂತ ಮನೆ, ಸ್ವಂತ ಕಾರು ಇರುವವರಾರೂ ಇಲ್ಲ. ಕಾರಣವೇನೆಂದರೆ ಯಾರೂ ಸ್ಥಿರಾಸ್ತಿಯನ್ನು ಹೊಂದಿರಬಾರದೆಂಬುದೇ. ಪ್ರತಿಯೊಂದು ಪದಾರ್ಥವೂ ರಾಷ್ಟ್ರದ್ದು. ಯಾರೇ ಆಗಲಿ ಸರಕಾರದ ಸಿಟ್ಟಿಗೆ ಸಿಕ್ಕು

ಬಿದ್ದಲ್ಲಿ ಅನ್ನವಿಲ್ಲದೆ ಸಾಯಬೇಕಾಗುವುದು. ಏಕೆಂದರೆ, ಯಾರೂ ಅವರನ್ನು ನೌಕರಿಗೆ ತೆಗೆದುಕೊಳ್ಳರು. ಯಾರೂ ಕೆಲಸ ಹೇಳರು. ಆತನಲ್ಲಿ ಏನಾದರೂ ಹಣವಿದ್ದರೆ ಅದು ಕೆಲವು ದಿನಗಳಲ್ಲಿಯೇ ಮುಗಿಯುವದು. ಹೇಗೆಂದರೆ, ಕೆಲಸ ಮಾಡದವರಿಗೆ ಯಾವ ವಸ್ತುವೂ ಅಗ್ಗವಾಗಿ ಸಿಗುವುದಿಲ್ಲ. ಈ ದೇಶದಲ್ಲಿ ಯಾರಾದರೂ ವ್ಯಾಪಾರ ಮಾಡುತ್ತಾ, ಹಳ್ಳಿಗಳಲ್ಲಿ ಕೊಂಡುದನ್ನು ಲಾಭಕ್ಕಾಗಿ ಪಟ್ಟಣಗಳಲ್ಲಿ ಮಾರಿಕೊಂಡರೆ, ಅವರನ್ನು ಸರಕಾರವು ಹಿಡಿದು, ಕಠಿಣ ಶಿಕ್ಷೆಗೆ ಗುರಿ ಮಾಡುತ್ತದೆ.

ದಾರಿಯಲ್ಲಿ ನಡೆಯುತ್ತ ಭಿಕ್ಷೆ ಬೇಡುತ್ತಿದ್ದ ಹುಡುಗನೊಬ್ಬನನ್ನು ನೋಡಿದೆನು. ಅವನನ್ನು ನೋಡಿ ತಮಾಷೆಯಾಗಿ,

'ನಿಮ್ಮ ದೇಶದಲ್ಲಿ ನಿರುದ್ಯೋಗವೂ, ಭಿಕ್ಷಾಟನೆಯೂ ಇಲ್ಲದ ಮಾತು ನಿಜವೇನೇ?' ಎಂದು ಕೇಳಿದೆನು.

'ಆಹಾ, ಈ ವಿಷಯದಲ್ಲಿ ನಿಮಗೆ ಸಂದೇಹವು ಹೇಗೆ ಹುಟ್ಟಿತು?' ಎಂದಳು ಮಾರ್ಗದರ್ಶಿ.

ಆ ಹುಡುಗನನ್ನು ತೋರಿಸಿದೆನು. 'ಈ ಹುಡುಗನು ನಿನ್ನ ಮಾತುಗಳಿಗೆ ಜವಾಬು ಕೊಡುತ್ತಿರುವನು.'

'ಆಹಾ! ಇವರು ಬರಿಯ ತುಂಟರು. ಪೋಲೀಸರು ಇವರನ್ನು ಹಿಡಿದು ಶಿಶುರಕ್ಷಣಾಲಯಗಳಲ್ಲಿ ಹಾಕುತ್ತಿರುತ್ತಾರೆ. ಆದರೆ, ಇವರು ಚಿಕ್ಕಂದಿನಿಂದ ಭಿಕ್ಷೆಬೇಡುವುದನ್ನೇ ಅಭ್ಯಾಸ ಮಾಡಿಕೊಂಡಿರುವರು. ಅಲ್ಲಿಂದ ತಪ್ಪಿಸಿಕೊಂಡು ಬಂದು ಭಿಕ್ಷೆಬೇಡಿಕೊಳ್ಳುತ್ತಿರುವರು. ಇವರ ರಕ್ತದಲ್ಲಿ ಸೋಮಾರಿತನವು ಮನೆಮಾಡಿಕೊಂಡಿದೆ. ಬಹುಶಃ ಇವರು ಸಾದರೀ ಮಕ್ಕಳೋ, ಜಮೀನುದಾರರ ಮಕ್ಕಳೋ ಆಗಿರಬೇಕು. ಇವರು ಕೆಲಸ ಮಾಡುವುದಕ್ಕಿಂತ ಭಿಕ್ಷೆ ಬೇಡುವದೇ ಲೇಸೆಂದು ಭಾವಿಸುವರು. ಆದರೆ, ಇಂತಹವರ ಸಂಖ್ಯೆ ಬಹಳ ಕಡಿಮೆ; ಅದಕ್ಕೆ ಸಂತೋಷಪಡಬೇಕು.'

'ಪ್ರಾಯಶಃ ಇವರನ್ನು ಪ್ರೇಮದಿಂದಲೂ ಅಭಿಮಾನದಿಂದಲೂ

ಆದರಿಸುತ್ತಿಲ್ಲವೇನೋ ! ಇಲ್ಲದಿದ್ದರೆ ಅದನ್ನೆಲ್ಲಾ ಬಿಟ್ಟು ಹೀಗೆ ಚಳಿಯಲ್ಲಿ ಮುಷ್ಟಿ ಎತ್ತಲು ಏಕೆ ಬರುವರು ? '

' ಸೋಮಾರಿಗಳೆಂದು ಹೇಳಿದೆನಲ್ಲಾ ? ಶಿಶುಸಂರಕ್ಷಣಾಲಯದ ನಿಯಮ ನಿರ್ಬಂಧಗಳೂ, ಅಲ್ಲಿಯ ಕೆಲಸ ಅಭ್ಯಾಸಗಳೂ ಇವರಿಗೆ ರುಚಿಸುವುದಿಲ್ಲ. '

' ಸರಿ, ಆದರೂ, ನಿಮ್ಮ ದೇಶದಲ್ಲಿ ಜನಸಾಮಾನ್ಯರಲ್ಲಿ ಬಡತನ ಏನೂ ಕಾಣುವದಲ್ಲ ? ಒಬ್ಬರ ಬಳಿಯೂ ಬೇಕಾದ ಬಟ್ಟೆಬರೆಗಳಿಲ್ಲ. ಸಾಕಷ್ಟು ಆಹಾರವು ಸಹ ಇಲ್ಲವೆಂದೇ ಕಾಣುತ್ತೆ. ಇಂತಹ ಪರಿಸ್ಥಿತಿಯಲ್ಲಿ ಈ ವಿಪ್ಲವದಿಂದಲೂ ಕ್ರಾಂತಿಯಿಂದಲೂ ರಕ್ತಪಾತದಿಂದಲೂ ನೀವು ಸಾಧಿಸಿದುದೇನು ? '

' ನಮ್ಮ ದೇಶದಲ್ಲಿ ಪ್ರಜೆಗಳೆಲ್ಲರಿಗೂ ಬೇಕಾದಷ್ಟು ಬಟ್ಟೆಬರೆಗಳಿಲ್ಲವೆಂಬ ಮಾತು ನಿಜ. ಪ್ರಜೆಗಳೆಲ್ಲರಿಗೂ ಬೇಕಾದಷ್ಟು ತಿಂಡಿಯು ಸಹ ಇಲ್ಲ. ಆದರೂ ಕ್ರಾಂತಿಗೆ ಮುಂಚೆ ದೇಶದಲ್ಲಿ ಜನರು ಒಂದು ಹೊತ್ತು ಕೂಡ ಅನ್ನವಿಲ್ಲದೆ ನರಳುತ್ತಿರುವಾಗ, ಧನಿಕರು ಚಿನ್ನದ ತಟ್ಟೆಗಳಲ್ಲಿ ತಿಂದಷ್ಟನ್ನೂ ತಿಂದು ಬೇಕಾದಷ್ಟನ್ನು ಬಿಸಾಡುತ್ತಿದ್ದರು. ಈ ದಿನ ನಮಗೆ ಶುದ್ಧವಾದ ಆಹಾರವು ಸಿಗದಿದ್ದರೂ ನಮ್ಮಲ್ಲಿ ಪ್ರತಿಯೊಬ್ಬನಿಗೂ ಹಸಿವಿನ ಬಾಧೆಯನ್ನು ಅಡಗಿಸಿಕೊಳ್ಳಲು ಯಾವುದೋ ಒಂದು ಸ್ವಲ್ಪ ಒಳ್ಳೆಯದೋ—ಕೆಟ್ಟುದೋ ತಿಂಡಿ ಸಿಗುತ್ತದೆ. ನಮ್ಮ ' ದ್ವಿತೀಯ ಪಂಚ ವರುಷ ಪ್ರಣಾಳಿಕೆ 'ಯಲ್ಲಿ ಧಾನ್ಯದ ಬೆಳೆಯ ಅಭಿವೃದ್ಧಿಯನ್ನು ಹೆಚ್ಚುಗೊಳಿಸುವಂತೆ ಯೋಜನೆ ಮಾಡಲಾಗಿದೆ. ಅದರಿಂದ ನಮ್ಮ ಜೀವನದ ಪರಿಸ್ಥಿತಿಯು ಸ್ವಲ್ಪ ಸುಖಮಯವಾಗಬಹುದು. ಆದರೆ, ಇಷ್ಟು ಮಾತ್ರ ನಿಜ. ನಮ್ಮ ರಾಷ್ಟ್ರದಲ್ಲಿ ಇಂದು ಯಾರೂ ಅನ್ನವಿಲ್ಲದೆ ಇಲ್ಲ. '

ನಾವು ಯಾತ್ರಿಕ ಶಾಖೆಯವರ ಕಚೇರಿಯನ್ನು ಸೇರಿದೆವು. ತಿರುಗುವ ಕನ್ನಡಿಯ ಬಾಗಿಲುಗಳನ್ನು ತಳ್ಳಿಕೊಂಡು ಒಳಗೆ ಪ್ರವೇಶಿಸಿ ನೋಡುವ ವೇಳೆಗೆ, ಎಲ್ಲವೂ ಸ್ತ್ರೀಮಯವಾಗಿಯಾಳ. ಎಲ್ಲಿ ನೋಡಿದರೂ

ಹೆಂಗಸರಲ್ಲದೆ ಮತ್ತಾರೂ ಕಂಡುಬರುತ್ತಿಲ್ಲ. ಒಬ್ಬ ಗಂಡಸು ಗುಮಾಸ್ತೆಯೂ ಇಲ್ಲ.

'ರಶಿಯದಲ್ಲಿ ಗಂಡಸರೆಲ್ಲರನ್ನೂ ಆಫೀಸುಗಳಿಂದ ಅಟ್ಟಿಬಿಟ್ಟಿರುವರೇನು?'

'ಗಂಡಸರು ಕಷ್ಟದ ಕೆಲಸಗಳನ್ನು ಮಾಡುವರು. ಯಂತ್ರಾಲಯಗಳಲ್ಲಿ ಗಂಡಸರೆಲ್ಲ ತುಂಬಿಹೋಗಿರುವರು. ನಾವು ಈ ಸುಲಭವಾದ ಕೆಲಸಗಳನ್ನು ಮಾಡುತ್ತಿರುವೆವು.'

'ಆದರೆ ನೀವು ಉತ್ತಮ ವರ್ಗಕ್ಕೆ ಸೇರಿದ 'ಬೂರ್ಜ್ವ'ರೂ ನಿಮ್ಮ ಗಂಡಸರು ಕೀಳು ದರ್ಜೆಗೆ ಸೇರಿದ 'ರೈತರು' ಆಗಿರುವರೆಂದು ತಲ್ಲವೇ?'

'ನಮಗೆ ಕಷ್ಟವಾದ ಕೆಲಸವೆಂದರೆ ಭಯವಿಲ್ಲ, ಕಾರ್ಯಗಳಲ್ಲಿ ಕೀಳು ಮೇಲೆಂದು ನಾವು ಎಣಿಸುವುದಿಲ್ಲ. ನಮ್ಮ ದೇಶದಲ್ಲಿ 'ಟ್ರಾಕ್ಟರು'ಗಳನ್ನೂ 'ಎಂಜಿನು'ಗಳನ್ನೂ ಹೆಂಗಸರು ಸಹ ನಡೆಸುತ್ತಿರುವರು. ಸಿಪಾಯಿಗಳಾಗಿರುವರು. ರಾಜದೂತರಾಗಿ ಕೆಲಸ ಮಾಡುತ್ತಿರುವರು. ನಮ್ಮ ಶಾರೀರಿಕ ದೌರ್ಬಲ್ಯದಿಂದ ಕೆಲವು ಕಾರ್ಯಗಳಿಗೆ ನಾವು ಸಿದ್ಧರಾಗುವಂತಿಲ್ಲ. ಆದರೆ, ನಮಗೆ ಯಾವ ಕೆಲಸವೆಂದರೂ ಭಯವಿಲ್ಲ. ಮಾನವನ ಶಕ್ತಿಯೆಲ್ಲವೂ ರಾಷ್ಟ್ರಕ್ಕೆ ಉಪಯೋಗವಾಗಬೇಕೆಂಬುದೇ ಈ ಯೋಜನೆಯ ಗುಟ್ಟು.

ಇದು ನಿಜವೂ ಹೌದು. 'ಟ್ರಾಮು'ಗಳಲ್ಲಿ 'ಡ್ರೈವರು' 'ಕಂಡಕ್ಟರು'ಗಳು ಸಹ ಹೆಂಗಸರೇ. ಈ ವಿಷಯವನ್ನು ನಾನೇ ಕಣ್ಣಾರೆ ನೋಡಿದೆನು. ಯಾತ್ರಿಕ ಶಾಖೆಯವರಿಗೆ 'ಟಾಕ್ಸೀ' ಸಮಾಚಾರವನ್ನು ತಿಳಿಸಿ, ನಾವಿಬ್ಬರೂ 'ಕ್ರೆಚೀ' ನೋಡಲು ಟ್ರಾಮು ಹತ್ತಿದೆವು. ರಷ್ಯಾದಲ್ಲಿ 'ಟ್ರಾಂ' ಪ್ರಯಾಣವು ಬಹಳ ಬಾಧಕವಾದುದು. 'ಟ್ರಾಮಿ'ನಲ್ಲಿ ಎಳ್ಳಷ್ಟು ಸ್ಥಳ ಸಿಕ್ಕರೆ ಸಾಕು, ಜನರು ತುಂಬಿಬಿಡುತ್ತಾರೆ. ನಾಲ್ಕೈದು ಜನರಿಗೆ ಕಡಿಮೆಯಿಲ್ಲದಂತೆ ಅಡ್ಡ ಹಲಗೆಯ ಮೇಲೆ ಹಿಡಿದು ಜೋತು ಬೀಳುವರು. ನಿಲ್ಲಬೇಕಾದ ಸ್ಥಳಗಳಲ್ಲಿ ಇಳಿಯುವವರನ್ನೂ ಹತ್ತುವವರನ್ನೂ ಲೆಕ್ಕಿಸದೆ 'ಟ್ರಾಂ' ಕ್ಷಣಮಾತ್ರವೂ ನಿಲ್ಲದೆ ಮುಂದೆ

ಸಾಗುತ್ತಿರುತ್ತದೆ. 'ಟ್ರಾಮು' ನೊಳಗೆ ಹತ್ತಬೇಕೆಂದರೆ ಜನರ ಮಧ್ಯೆ ದಾರಿ ಮಾಡಿಕೊಳ್ಳಲೇಬೇಕು. ಅಡ್ಡ ಪಟ್ಟಿಯ ಮೇಲೆ ಸಲಾಕಿಗಳನ್ನು ಹಿಡಿದುಕೊಂಡು ನೇತಾಡುತ್ತಾ ನಿಧಾನವಾಗಿ ಹೋಗಿ ಒಳಗೆ ಸೇರಿಕೊಳ್ಳಬೇಕು. ಒಳಗೆ ಜನರು ಕೂತುಕೊಳ್ಳಲು ಬೇಕಾದಷ್ಟು ಅಗಲವುಳ್ಳ ಬೆಂಚಗಳು ಎರಡು ಸಾಲಾಗಿರುವವು. ಇಲ್ಲಿಯು 'ಟ್ರಾಮು'ಗಳನ್ನು ಜನರು ನಿಂತುಕೊಳ್ಳುವದಕ್ಕಾಗಿಯೇ ಕಟ್ಟಿದಂತೆ ಕಾಣುತ್ತದೆ. ಕಿಟಕಿಯ ಕನ್ನಡಿಗಳ ಮೇಲೆ ಮಂಜು ಬಿದ್ದು ಗಡ್ಡೆಕಟ್ಟಿ ಹೋಗುತ್ತಿರಲು ಒಳಗಿರುವವರು ತಾವು ಇಳಿಯುವ ಸ್ಥಳಗಳನ್ನು ನೋಡಲು ಬೆರಳಿನಿಂದ ತಿವಿದು ತಿವಿದು ತೂತು ಕೆಡುವುತ್ತಿರುವರು. ಬಗ್ಗಿ ಕೆಳಗಿರುವ ವಸ್ತುವನ್ನು ತೆಗೆದುಕೊಳ್ಳಲು ಕೂಡ ಸಾಧ್ಯವಾಗದಷ್ಟು ಜನರು ಕಿಕ್ಕಿರಿದು ಸೇರಿರುವರು.

ಇದರಲ್ಲಿ ಒಂದು ವಿಷಯವನ್ನು ಕುರಿತು ನಾನೀಗಾಗಲೇ ಆಶ್ಚರ್ಯಪಡುತ್ತಿರುವೆನು. ಪ್ರಜೆಗಳು ಇಷ್ಟು ಬಡತನದಿಂದಿದ್ದರೂ, ಯಾರೂ ಕಂಡಕ್ಟರನ ದೃಷ್ಟಿ ತಪ್ಪಿಸಿಕೊಂಡು ಹಣಕ್ಕೆ ಮೋಸ ಮಾಡಲು ಪ್ರಯತ್ನ ಮಾಡುವದಿಲ್ಲ. ಎಷ್ಟು ಅದಕ್ಕೆ ಅವಕಾಶವಿದ್ದರೂ ಸರಿಯೇ. ಆ ಕೊನೆಯಿಂದ ಈ ಕೊನೆಯ ವರೆಗೂ ಪ್ರತಿಯೊಬ್ಬರೂ ತನ್ನ ಹಣವನ್ನು 'ಕಂಡಕ್ಟರಿ'ಗೆ ಕೊಟ್ಟು 'ಟಿಕೆಟ್ಟು' ತರಿಸಿಕೊಳ್ಳುವನು. 'ಟ್ರಾಮು' ಗಳು ತನ್ನವೇಯೆಂದೂ 'ಟಿಕೆಟ್ಟು' ಕೊಳ್ಳುವದು ತನ್ನ ನೈತಿಕ ಕರ್ತವ್ಯವೆಂದೂ, ಪ್ರತಿಯೊಬ್ಬನೂ ತಿಳಿಯುವನು. ತಪ್ಪಿಸುವದು ರಾಷ್ಟ್ರದ್ರೋಹವೆಂದು ಬಗೆಯುವರು. ನೀತಿನೀತಿಯೆಂದು ಹೊಗಳಿ ಹೇಳಿಕೊಳ್ಳುವವರೆಲ್ಲರೂ ರಷ್ಯಾದ ಈ ಬಡ ಪ್ರಜೆಗಳಿಂದ ಪಾಠ ಕಲಿಯಬೇಕು. ಯಾರೇ ಆಗಲಿ ತಾನಿಳಿಯಬೇಕಾದ ಸ್ಥಳಕ್ಕೆ ಎರಡು ಮೂರು ಸ್ಟೇಶನಗಳಿಗೆ ಮುಂಚೆಯೇ ತನ್ನ ಹಾದಿಯನ್ನು ಹುಡಿಕಿಕೊಳ್ಳಬೇಕು. ಈ ಚಳಿಕಾಲದಲ್ಲಿಯೇ ಈ ಜನಸಮ್ಮರ್ದವೂ, ಒತ್ತಡವೂ ಇಷ್ಟು ಬಾಧಕವಾಗಿದ್ದರೆ ಇನ್ನೂ ಬಿಸಿಲಕಾಲದಲ್ಲಿ ಇವರವಸ್ಥೆಯು ಹೇಗಿರುವದೋ ಊಹಿಸುವುದಕ್ಕಾಗದು.

---

# ೩

## ಶಿಶುಸಂರಕ್ಷಣಾಲಯ ಹಾಗು ಹಲವು ರೀತಿ-ನೀತಿ

ನಾವು 'ಕ್ರೆಚೀ' ಸಮೀಪದಲ್ಲಿ 'ಟ್ರಾಮು'ಳಿದೆವು. ಕ್ರೆಚೀ ಎಂಬುದು ಕೂಲಿಜನರ ಮಕ್ಕಳ ಸಂರಕ್ಷಣಾಲಯವೆಂದು ಮಾರ್ಗದರ್ಶಿಕೆಯು ಹೇಳಿದಳು. ಓವರುಕೋಟು, ಬೂಟು ಬಿಟ್ಟು ನಾವು ಮೇಲಕ್ಕೆ ಹೊರಟೆವು. ಆ ಸಂಸ್ಥೆಯ ವ್ಯವಸ್ಥಾಪಕಳ ಬಳಿ ಹೋಗಿ ಮಾರ್ಗದರ್ಶಿಕೆಯು ಕ್ರೆಚಿ ನೋಡಲು ಅನುಮತಿಯನ್ನು ಕೇಳಿದಳು. ಆಕೆಯು ಮುಗುಳ್ನಗೆಯಿಂದ ಅನುಮತಿಯನ್ನಿತ್ತು 'ಮಕ್ಕಳ ಬಳಿಗೆ ಹೋಗುವಾಗ ಬಿಳಿಯ ಉಡುಪು ಹಾಕಿಕೊಂಡು ಹೋಗಿ'ರೆಂದು ಹೇಳಿದಳು.

ಈ ಶಿಶುಸಂರಕ್ಷಣಾಲಯದಲ್ಲಿ ಮೂರು ತಿಂಗಳಿಂದ ಹಿಡಿದು ಮೂರು ವರುಷದ ವಯಸ್ಸಿನ ವರೆಗೂ ಮಕ್ಕಳು ಇರುವರು. ಆ ದೇಶದಲ್ಲಿ ಕೂಲಿಯ ಹೆಂಗಸರಿಗೆ ಪ್ರಸವವಾಗುವುದಕ್ಕೆ ಎರಡು ತಿಂಗಳೂ, ತರುವಾಯ ಎರಡು ತಿಂಗಳೂ ಪೂರಾ ಸಂಬಳದ ಮೇಲೆ ರಜೆಯನ್ನು ಕೊಡುವರು. ಮೂರನೆಯ ತಿಂಗಳಲ್ಲಿ ಅವರು ಮತ್ತೆ ಕೆಲಸದಲ್ಲಿ ಸೇರಬೇಕು. ಆಫೀಸುಗಳಲ್ಲಿ ಗುಮಾಸ್ತೆಯರಾಗಿದ್ದವರಿಗೂ, ಶಾರೀರಿಕ ಶ್ರಮವನ್ನು ತಾಳಲಾರದ ಇತರ ಹೆಂಗಸರಿಗೂ, ಒಟ್ಟಿನಲ್ಲಿ ಮೂರು ತಿಂಗಳು ಮಾತ್ರ ವಿಶ್ರಾಂತಿ ಸಿಗುವುದು. ರಷ್ಯಾ, ಈಗ ಕುಟುಂಬ ಪದ್ಧತಿಯನ್ನು ವಿಚ್ಛಿನ್ನ ಮಾಡಲು ಪ್ರಯತ್ನಿಸುತ್ತಿರುವುದು. ಸ್ವಲ್ಪ ದೂರ ಆ ಪ್ರಯತ್ನಗಳು ಸಫಲವೂ ಆಗಿರುವುವು. ಆದುದರಿಂದಲೇ ಮೂರು ತಿಂಗಳ ಹಸುಕೂಸುಗಳ ಸಂರಕ್ಷಣೆಯು ಅಗತ್ಯವಾಗಿ ಈ ಸಂರಕ್ಷಣಾಲಯಗಳು ನಿರ್ಮಿಸಲ್ಪಟ್ಟಿರುವುವು. ರಷ್ಯಾದಲ್ಲಿರುವ ಯಂತ್ರಾಲಯಗಳು ಇಪ್ಪತ್ತುನಾಲ್ಕು ಗಂಟೆಯೂ ಕೆಲಸ ಮಾಡುತ್ತಲೇ ಇರುವುವು. ಕೂಲಿಯವರು ಸರ್ತಿಯ ಮೇಲೆ ಕೆಲಸ ಮಾಡುತ್ತಿರುವರು. ಯಂತ್ರಾಲಯಗಳಿಗೆ ಹೋಗುವುದಕ್ಕೆ ಮುಂಚೆ ತಾಯಿಯು ತನ್ನ ಮಗುವನ್ನು ಈ ಸಂರಕ್ಷಣಾಲಯಗಳಲ್ಲಿ ಬಿಟ್ಟು ಹಿಂದಿರುಗಿ ಮನೆಗೆ ಹೋಗುವಾಗ ಕರೆದುಕೊಂಡು ಹೋಗುವಳು.

ಈ ಮಧ್ಯೆ ಮಕ್ಕಳಿಗೆ ಬೇಕಾದುದನ್ನೆಲ್ಲ ಸಂರಕ್ಷಣಾಲಯಗಳವರೇ ನೋಡಿಕೊಳ್ಳುವರು. ಇವನ್ನೆಲ್ಲಾ ನೋಡಿ ಕೆಲವರು ರಷ್ಯಾದಲ್ಲಿ ಗೃಹ ಜೀವನವೇ—ಸಾಂಸಾರಿಕ ರೀತಿಯೇ ಲೋಪವಾಗುತ್ತಿರುವುದೆಂದು ಅಂದು ಕೊಳ್ಳುತ್ತಿರುವರು. ಮಕ್ಕಳನ್ನು ಸರಕಾರವು ಕಾಪಾಡುತ್ತಿರುವುದರಿಂದ, ತಾಯಂದಿರಿಗೆ ಈ ಮಕ್ಕಳ ಮೇಲೆ ಪ್ರೀತಿಯಿರುವುದಿಲ್ಲವೆಂದೂ, ವಿವಾಹ ನಿಯಮಗಳು ಕಠಿಣವಿಲ್ಲದಿರುವುದರಿಂದ ತಂದೆಯವರು ಮಕ್ಕಳ ವಿಚಾರ ದಲ್ಲಿ ಅಷ್ಟು ಹೊಣೆ ಹೊರುವುದಿಲ್ಲೆಂದೂ ಅವರ ಊಹೆ. ಕೇವಲ ಕುಟುಂಬದಲ್ಲಿ ಯಜಮಾನಿಯಾಗಿ ದುಡಿಗು ಮನೆಮಕ್ಕಳನ್ನೆಲ್ಲ ಕಾಪಾಡ ಬೇಕೆಂಬ ಪದ್ಧತಿಯನ್ನು ರಷ್ಯನರು ದೂರಿರುವರು. ಆದರೆ, ಗಾರ್ಹಸ್ಥ್ಯ ಜೀವನವನ್ನು ಮಾತ್ರ ಅವರು ನಿಷೇಧಿಸಲಿಲ್ಲ. ಆ ಬಾಧ್ಯತೆಯನ್ನು ತೊಲಗಿ ಸಲಿಲ್ಲ. ಈ ಶಿಶುಸಂರಕ್ಷಣಾಲಯಗಳು ಮಕ್ಕಳನ್ನು ನೋಡಿಕೊಂಡು ಕೂತಿರುವ ಹೊಣೆಯನ್ನು ತಪ್ಪಿಸಿ, ದೇಶದ ಸಂಪತ್ತನ್ನು ಅಭಿವೃದ್ಧಿ ಮಾಡುವುದರಲ್ಲಿ ತಮ್ಮ ಶಕ್ತಿಯನ್ನು ಸಂಪೂರ್ಣವಾಗಿ ವಿನಿಯೋಗ ಮಾಡಲು ತಾಯಂದಿರಿಗೆ ಅವಕಾಶವನ್ನು ಕಲ್ಪಿಸಿ ಕೊಡುತ್ತಿರುವುವು. ಈ ವಿಧವಾಗಿಯೇ ಸಮಷ್ಟಿ ಭೋಜನಾಲಯಗಳೂ, ಬಟ್ಟೆಯೊಗೆಯುವ ಅಗಸರ ಕಾರಖಾನೆಗಳೂ, ಮನೆಗಳೂ, ದೇಶದಲ್ಲಿರುವ ಅರ್ಥಶಕ್ತಿಯು ವ್ಯರ್ಥವಾಗಿ ಹೋಗದಂತೆ ರಕ್ಷಿಸಿರುವರು. ಹಿಂದೆ ಮಕ್ಕಳನ್ನು ಪೋಷಣೆ ಮಾಡುವುದೂ, ಅಡಿಗೆ ಮಾಡುವುದೂ, ಮನೆಗಳನ್ನು ಚೊಕ್ಕಟವಾಗಿ ಇಡುವುದೂ, ಬಟ್ಟೆಯೊಗೆಯುವುದೂ ಇದರಿಂದಲೇ ಸರಿಹೋಗುತ್ತಿತ್ತು ಹೆಂಗಸರ ಕೆಲಸ. ಈಗ ಚಿಕ್ಕ ಚಿಕ್ಕ ಸಂಸಾರಗಳನೇಕವನ್ನು ಒಂದಾಗಿ ಸೇರಿಸಿ, ನಗರಗಳಲ್ಲಿ ಒಂದೇ ದೊಡ್ಡ ಕುಟುಂಬವನ್ನಾಗಿ ಮಾಡುತ್ತಿರು ವರು. ಈ ದೊಡ್ಡ ಕುಟುಂಬದವರು ಸರ್ಕಾರದ ಮನೆಗಳಲ್ಲಿ ಒಂದೇ ಕಡೆ ಇರುವರು. ಒಂದೇ ಭೋಜನಾಲಯದಲ್ಲಿ ತಿಂಡಿಯನ್ನು ತಿನ್ನುವರು. ಒಂದೇ ಅಗಸರ ಅಂಗಡಿಯಲ್ಲಿ ಬಟ್ಟೆಗಳನ್ನೊಗಿಸಿಕೊಳ್ಳುವರು. ಒಂದೇ ಕ್ಲಬ್ಬಿನಲ್ಲಿ ಸೇರುವರು. ಒಂದೇ ಪುಸ್ತಕಾಲಯದಲ್ಲಿ ಕುಳಿತುಕೊಂಡು ಓದುವರು. ಮಾತೃಪ್ರೇಮವೋ! ಅದನ್ನು ಒಂದು ರಷ್ಯಾ ವಿಪ್ಲವವೇನು ಅಂತಹ ಸಾವಿರ ಕ್ರಾಂತಿಗಳು ಬಂದರೂ ಆ ಪ್ರೇಮವನ್ನು ಭಂಗಮಾಡ

ಲಾರವು. ಮಾತೃಪ್ರೇಮವೆಂಬುದು ಮನುಷ್ಯರಲ್ಲಿ ಮಾತ್ರವೇ ಅಲ್ಲ, ಪಶು ಪಕ್ಷಿಗಳಲ್ಲಿ ಸಹ ಇರುವ ಸ್ವಾಭಾವಿಕ ಕೋಮಲ ಪ್ರವೃತ್ತಿ. ಆದುದ ರಿಂದ ಗೃಹಜೀವನವು ಎಂದಿಗೂ ಭಂಗವಾಗದು. ಆದರೆ, ಇತರ ದೇಶಗಳ ಕುಟುಂಬ ಜೀವನಕ್ಕೂ, ಇಲ್ಲಿಯ ಜೀವನಕ್ಕೂ ಯಾವ ಸಂಬಂಧವೂ ಇಲ್ಲದಷ್ಟು ವ್ಯತ್ಯಾಸವಾಗಿರುವುದು. ಇದಕ್ಕೆ ಸರಕಾರವು ಆಚರಣೆಯಲ್ಲಿ ತಂದಿರುವ '**ನವೀನ ಆರ್ಥಿಕ ನೀತಿ**'ಯೇ ಮುಖ್ಯ ಕಾರಣ.

ಹಗಲೆಲ್ಲಾ ಮಕ್ಕಳು ಸಂರಕ್ಷಣಾಲಯಗಳಲ್ಲಿರುವರು. ಮಧ್ಯೆ ಮಧ್ಯೆ ಮೊಲೆಯುಣಿಸಲು ತಾಯಿಗೆ ಅರ್ಧ ಅರ್ಧ ಗಂಟೆ ಅವಧಿಯು ಕೊಡಲ್ಪಡುವುದು. ತನ್ನ ಕಾರ್ಯವು ಮುಗಿದ ಮೇಲೆ ಮಗುವನ್ನೆತ್ತಿ ಕೊಂಡು ಮುದ್ದಿಡುತ್ತಾ, ಮನೆಗೆ ತೆಗೆದುಕೊಂಡು ಹೋಗಿ ತನ್ನ ಪತಿ ಜ ಮಾನಸ ಜತೆಯಲ್ಲಿ ಪುತ್ರಲಾಲನೆಯಲ್ಲಿ ಮುಳುಗಿ ತೇಲುವಳು. ಅನೇಕ ಯುವತಿಯರು, ಪ್ರೌಢೆಯರು ತಮ್ಮ ಸಂತಾನವನ್ನು ಎದೆಗೊತ್ತಿಕೊಂಡು ತಬ್ಬಿಕೊಳ್ಳುತ್ತಾ, ಮುದ್ದಿಟ್ಟುಕೊಳ್ಳುತ್ತಾ, ಅನಿರ್ವಚನೀಯವಾದ ಆನಂದ ವನ್ನು ಅನುಭವಿಸುತ್ತಿರುವುದನ್ನು ನಾನು ಕಣ್ಣಾರೆ ಕಂಡಿರುವೆ. ಅಷ್ಟು ಪ್ರೇಮಮಯಿಯರಾದ ಮಾತೆಯರಿರುವಾಗ, ಗೃಹಜೀವನವು ಭಂಗವಾಗು ವುದು ಹೇಗೆ? ಇನ್ನೊಂದು ವಿಶೇಷವೇನೆಂದರೆ, ಯೂರೋಪು ಅಮೇ ರಿಕಾ ದೇಶಗಳಲ್ಲಿರುವುದಕ್ಕಿಂತಲೂ ರಷ್ಯಾದಲ್ಲಿ **ಮಾತೃತ್ವಕ್ಕೆ** ಬಹಳ ಮಹತ್ವವಿರುವುದು. ಯೂರೋಪಿನಲ್ಲಿಯೂ ಅಮೇರಿಕಾದಲ್ಲಿಯೂ ವಿವಾ ಹವು ಕೇವಲ ಭೋಗತೃಪ್ತಿಗಾಗಿ. ಅಲ್ಲಿ ಮಕ್ಕಳನ್ನು ಹಡೆಯುವುದೊಂದು ಅಪರಾಧವೆಂದು ಎಣಿಸಲ್ಪಡುತ್ತಿರುವುದು. ರಷ್ಯಾದಲ್ಲಿ ಮಕ್ಕಳನ್ನು ಪಡೆಯಬಾರದೆಂದು ಅನ್ನುತ್ತಾ ಮದುವೆಯಾಗುವುದೇ ವ್ಯಭಿಚಾರವೆಂದು ಪರಿಗಣಿಸಲ್ಪಡುತ್ತಿರುವುದು. ಮಕ್ಕಳೇ ದೇಶದ ಸಂಪತ್ತು. ಪ್ರತಿಯೊಬ್ಬ ಸ್ತ್ರೀಯೂ ನಿರೋಗಿಯಾದ ಸಂತಾನವನ್ನು ದೇಶಕ್ಕೆ ಅರ್ಪಿಸುವುದೇ ಆಕೆಯ ಕರ್ತವ್ಯ. ಪ್ರಭುತ್ವವು ಶಾಸನಬದ್ಧವಾಗಿ ಮಾಡಿದರೂ, ವೈದ್ಯರ ಮೂಲಕ ಸಂತಾನ ನಿರೋಧದ ಉಪಾಯಗಳನ್ನು ಕಲಿಸಿಕೊಡುತ್ತಿದ್ದರೂ, ಅವು ಕೇವಲ ತಾಯಂದಿರ ಆರೋಗ್ಯರಕ್ಷಣೆಗಾಗಿ. ಸರಕಾರದ ಆಸ್ಪತ್ರೆಗಳಲ್ಲಿ ಅಲ್ಲದೆ ಇತರ ಸ್ಥಳಗಳಲ್ಲಿ ಗರ್ಭಪಾತವನ್ನು ಮಾಡಿಕೊಂಡರೆ ಅದು ಶಾಸನ

ವಿರುದ್ಧವಾದುದು. ಈ ತಪ್ಪಿತಕ್ಕೆ ಮೂರು ವರುಷ ಕಠಿಣ ಶಿಕ್ಷೆಯನ್ನನು ಭವಿಸಬೇಕಾಗುವುದು. ಮೊದಲನೆಯ ಸಲ ಗರ್ಭಧಾರಣೆ ಮಾಡಿದಾಗ, ವಿಶೇಷ ಕಾರಣಗಳೇನಾದರೂ ಇದ್ದ ವಿನಾ ಗರ್ಭಪಾತ ಮಾಡಿಕೊಳ್ಳಲು ಅನುಜ್ಞೆ ಕೊಡುವುದಿಲ್ಲ. ಮೂರು ತಿಂಗಳಾಯಿತೆಂದರೆ ಗರ್ಭಪಾತಕ್ಕಾಂಗೀಕಾರ ಕೊಡರು. ಸರಕಾರವು ಗರ್ಭಪಾತಕ್ಕಿಂತ ಸಂತಾನ ನಿರೋಧವು ಉತ್ತಮವೆಂದು ಪ್ರಚಾರಮಾಡುತ್ತಿದೆ. ಗರ್ಭಪಾತಕ್ಕೋಸ್ಕರ ಕಟ್ಟಲ್ಪಟ್ಟ ಆಸ್ಪತ್ರೆಗಳು, ಸಿನಿಮಾ ಮಂದಿರಗಳು, ರೇಡಿಯೋಗಳು, ಪತ್ರಿಕೆಗಳ ಮೂಲಕ ಸಂತಾನ ನಿರೋಧದ ರೀತಿಯನ್ನು ಉಪಾಯಗಳನ್ನು ಜನಸಾಮಾನ್ಯಕ್ಕೆ ತಿಳಿಯುವ ಹಾಗೆ ಪ್ರಚಾರ ಮಾಡುತ್ತಿವೆ. ಗರ್ಭಪಾತಕ್ಕೆ 'ಆಪರೇಷನ್' ಮಾಡಿಸಿಕೊಳ್ಳಲು ಸ್ತ್ರೀಯರಿಗೆ ಹತ್ತು ದಿನಗಳ ರಜವು ಕೊಡಲ್ಪಡುವುದು. ಸರಕಾರವು ಈ ವಿಷಯದಲ್ಲಿ ಶ್ರದ್ಧೆ ವಹಿಸಿರುವುದರಿಂದ ತಾಯಂದಿರ ಸಾವಿನ ಸಂಖ್ಯೆ ಬಹುಮಟ್ಟಿಗೆ ಕಡಿಮೆಯಾಗಿರುವುದು. ಯೂರೋಪು ದೇಶದ ಇತರ ಪ್ರಾಂತ್ಯಗಳಲ್ಲಿ ಗರ್ಭಪಾತದಿಂದ ನೂರಕ್ಕೆ ಒಬ್ಬ ಹೆಂಗಸು ಸಾಯುತ್ತಿದ್ದರೆ, ಮಾಸ್ಕೋದಲ್ಲಿರುವ ಗರ್ಭವಿಚ್ಛೇದನ ವೈದ್ಯಶಾಲೆ (abortion clinics) ಗಳಲ್ಲಿ ೨೫ ಸಾವಿರ ಜನಕ್ಕೆ ಒಬ್ಬಳು ಮಾತ್ರ ಸಾಯುತ್ತಿರುವಳು. ಯುಕ್ತವಯಸ್ಸು ಬರುವುದರೊಳಗಾಗಿ ಹೆಣ್ಣುಹುಡಿಗಿಯರಿಂದ ದೊಡ್ಡದೊಡ್ಡ ಕೆಲಸಗಳಾವುವನ್ನೂ ಮಾಡಿಸರು. ಅವರ ತಂದೆತಾಯಿಗಳೇ ಅವರ ಜೀವನದ ವೆಚ್ಚವನ್ನು ತೆತ್ತುತ್ತಾರೆ. ಹಿಂದೂಗಳಲ್ಲಿಯೂ ಕ್ರಿಶ್ಚಿಯನ್ನರಲ್ಲಿಯೂ ಕಂಡುಬರುವಂತೆ ಪಿತೃಭಕ್ತಿಯನ್ನು ನೋಡಬೇಕು ಎಂದರೆ ರಷ್ಯಾದಲ್ಲಿ ಕಂಡುಬರುವುದಿಲ್ಲ. ರಷ್ಯನರು ಕೇವಲ ಭೌತಿಕವಾದಿಗಳು. ತಂದೆಗಳು ಜಮೀನುದಾರರಾಗಿದ್ದುದರಿಂದ ಪಿತ್ರಾರ್ಜಿತಕ್ಕೂ ಬಾಧ್ಯತೆಯನ್ನು ಕಾಪಾಡಿಕೊಳ್ಳಲು ಸಂಬಂಧವನ್ನೇ ಕಡಿದುಕೊಂಡ ಹುಡುಗರು ಬಹಳ ಮಂದಿಯಿರುವರು.

ಶಿಶುಸಂರಕ್ಷಣಾಲಯದಲ್ಲಿ ಪ್ರತಿ ವಸ್ತುವೂ ಕ್ರಮಬದ್ಧವಾಗಿಡಲ್ಪಟ್ಟಿರುವುದು. ಪ್ರತಿಯೊಂದು ಪದಾರ್ಥವೂ ಸುಣ್ಣದಂತೆ ಬೆಳ್ಳಗಿರುವುದು. ಯಾವ ಮೂಲೆಯಲ್ಲಿ ನೋಡಿದರೂ ಕ್ರಮಶಿಕ್ಷಣವು ಕಂಡುಬರುತ್ತಿರುವುದು. ನಮ್ಮನ್ನು ಮುಂಚೆಯೊಂದು ಕೊಠಡಿಯೊಳಕ್ಕೆ ತೆಗೆದುಕೊಂಡು

ಹೋಗರು. ಕೊಠಡಿಯಲ್ಲಿರುವ ಬೀರು (ಕಪಾಟು) ಗಳಿಗೆಲ್ಲ ನಂಬರು ಹಾಕಲ್ಪಟ್ಟಿರುವುದು. ಇಲ್ಲಿಂದ ಮೂತ್ರ—ಪುರೀಷಾದಿಗಳನ್ನು ಬಿಡಲು ಬೇರೊಂದು ಕೊಠಡಿಯೊಳಕ್ಕೆ ಮಕ್ಕಳನ್ನು ತೆಗೆದುಕೊಂಡು ಹೋಗುವರು. ಇದಾದ ಮೇಲೆ ಅವರಿಗೆ ಸ್ನಾನಮಾಡಿಸಿ, ಶುಭ್ರವಾದ ಬಟ್ಟೆಗಳನ್ನು ಹಾಕಿ, ಅವರವರ ನಂಬರುಗಳಿರುವ ಹಾಸಿಗೆಗಳ ಮೇಲೆ ಮಲಗಿಸುವರು. ಅವರೆಲ್ಲಾ ಒಂದೇ ಬಾರಿ ತಿನ್ನುವರು. ಒಂದೇ ಸಾರಿ ಆಡಿಕೊಳ್ಳುವರು. ಒಮ್ಮೆಗೇ ನಿದ್ರೆಮಾಡುವರು.

'ಮಕ್ಕಳೆಲ್ಲಾ ಒಂದೇ ಸಲಕ್ಕೇ ಹೇಗೆ ಮಲಗಿನಿದ್ರೆಮಾಡುವರು ? ಯಾರಾದರೂ ಅತ್ತು ಮಿಕ್ಕವರನ್ನು ಎಬ್ಬಿಸುವುದಿಲ್ಲವೇ ?'

ಮಾರ್ಗದರ್ಶಕೆಯು ನನಗೂ ಆ ದಾದಿಗೂ ನಡುವೆ ಮಧ್ಯವರ್ತಿಯಾಗಿ ಆಕೆಯ ಮಾತುಗಳನ್ನು ನನಗೆ ತಿಳಿಸಿದಳು.

'ಅಬ್ಬಾ! ಮಕ್ಕಳಿಗೂ ಚಿಕ್ಕಂದಿನಿಂದ ನಾಲ್ಕು ಜನರ ಸಂಗಡ ಸೇರಿಕೊಂಡು ಒಂದೇ ಸಾರಿಗೆ ಕೆಲಸಮಾಡುವುದನ್ನು ಕಲಿಸಿದರೆ ಅವರು ಜೀವಂತರಾಗಿರುವವರೆಗೂ ಆ ನಿಯಮವನ್ನು ಬಿಡುವುದಿಲ್ಲ.'

ಹಾಗಾದರೆ ಇದೊಂದು ರಾಷ್ಟ್ರನಿರ್ಮಾಣದ ಅದ್ಭುತ ಪ್ರಯೋಗ.

ನಾನು ನೋಡುವುದಕ್ಕೆ ಹೋದ ಶಿಶುಸಂರಕ್ಷಣಾಲಯದಲ್ಲಿ ಆಟದ ಕೊಠಡಿಯಲ್ಲಿ ಒಂದು ಹಾರ್ಮೋನಿಯಮ್ಮಿರುವುದು. ಸ್ವಲ್ಪ ವಯಸ್ಸು ಬಂದ ಹುಡುಗರು ಹಾರ್ಮೋನಿಯಮ್ಮಿನ ಹಾಡಿಗೆ ಸರಿಯಾಗಿ ತಾಳ ಹಾಕುತ್ತ ನಾಟ್ಯವಾಡುತ್ತಿರುವರು. ಈ ನಾಟ್ಯವೇ ಅವರಿಗೆ ವ್ಯಾಯಾಮವು. ಶಿಶುಶಾಲೆಯಲ್ಲಿ ಅನೇಕ ವಿಧವಾದ ಆಟದ ಸಾಮಾನುಗಳಿರುವವು. ವಿಮಾನಗಳು, ಹಡಗುಗಳು, ಟಾರ್ಪೆಡೋ ಹಡಗುಗಳು, ಪಂಪುಗಳು, ಇಂಜನುಗಳು, ಸೈನಿಕರ ಬೊಂಬೆಗಳು ಇಂತಹವೆಷ್ಟೋ ಇರುವುವು. ಕೇವಲ ಕಾಲ್ಪನಿಕವಾದ ದೇವತೆಗಳದು—ರಾಕ್ಷಸರದು, ಬೊಂಬೆಗಳಾವುವೂ ಇಲ್ಲ. ಭಾರತೀಯ ಮಕ್ಕಳಂತೆ ರಷ್ಯನರ ಮಕ್ಕಳು ಬೊಂಬೆಗಳ ಮದುವೆ, ದೇವರ ಉತ್ಸವ, ಪೂಜೆ ಮೊದಲಾದಂತೆ ಆಡಿಕೊಳ್ಳುವುದಿಲ್ಲ. ಪ್ರತಿಯೊಬ್ಬ ಹುಡುಗನಿಗೂ ತನಗಿಷ್ಟ ಬಂದ ವಸ್ತುವಿನ ಸಂಗಡ ಆಡಿಕೊಳ್ಳುವಂತೆ ಮಾಡುವರು. ಅವರವರ ಅಭಿರುಚಿಯನ್ನು ಅದಷ್ಟು ಬೇಗ

ಬಂದರೆ ಮತ್ತೂ ಒಳ್ಳೆಯದು. ಇಬ್ಬರೂ ಬರಬೇಕೆಂಬ ನಿರ್ಬಂಧ ವಿಲ್ಲ. ಯಾರೊಬ್ಬರು ಬಂದರೂ ಸಾಕು. ಇನ್ನೊಬ್ಬರಿಗೆ ಒಂದು ಕಾರ್ಡಿನಲ್ಲಿ ಬರೆದು ತಿಳಿಯಪಡಿಸುವರು. ಏಕೆಂದರೆ ಈ ವಿಚಾರವನ್ನು ಅವರು ತಮ್ಮ ಪ್ಯಾಸ್‌ಪೋರ್ಟಿನಲ್ಲಿ ನಮೂದಿಸಬೇಕು. ಈ ವಿಚ್ಛೇದನಕ್ಕೆ ಕಾರಣ ರಜಿಸ್ಟ್ರಾರು ಕೇಳುವದಿಲ್ಲ. ಎರಡನೆಯವರ ಮೇಲೆ ದೋಷಾರೋಪಣೆಮಾಡಿ ರುಜುವಾತು ಮಾಡಿಕೊಳ್ಳಬೇಕಾದ ಅವಶ್ಯಕತೆ ಸಹ ಇಲ್ಲ. ಆದರೆ, ಭಾರ್ಯಾಭರ್ತೃರಲ್ಲಿ ನಡೆದ ಕಲಹಗಳನ್ನು ಅವರವರಲ್ಲಿಯೇ ಸರಿಪಡಿಸಿಕೊಂಡರೆ ಒಳ್ಳೆಯದೆಂಬ ಸಲಹೆಯನ್ನು ಮಾತ್ರ ರಜಿಸ್ಟ್ರಾರು ಕೊಡುವಳು. ಅದನ್ನಂಗೀಕರಿಸಿದರೆ ಅವರಿಗೆ ಒಳ್ಳೆಯದು. ಶಾಸನರೀತಿಯಾಗಿ ಸಲಹೆಯೂ ಅವಶ್ಯಕವಿಲ್ಲ ವಿವಾಹಗಳನ್ನೂ, ವಿಚ್ಛೇದಗಳನ್ನೂ ಬರೆದುಕೊಳ್ಳುವ ಪುಸ್ತಕವನ್ನೂ ನನಗೆ ತೋರಿಸಿದರು. ನನಗದರಲ್ಲೊಂದೂ ತಿಳಿಯಲಿಲ್ಲ.

‘ ಒಟ್ಟಿನಲ್ಲಿ ನೂರಕ್ಕೆಷ್ಟು ಮಂದಿ ವಿವಾಹವಿಚ್ಛೇದ ಮಾಡಿಕೊಳ್ಳುವರು ? ’ ಎಂದು ರಜಿಸ್ಟ್ರಾರನ್ನು ಕೇಳಿದನು. ‘ ನೂರಕ್ಕೆ ಐವತ್ತು ’ ಮಂದಿ ಎಂದರು ಅವರು.

‘ ಇದೇನು ಇಷ್ಟು ಹೆಚ್ಚೇ ? ’

‘ ಅಮೇರಿಕಾಕ್ಕೆ ಹೋಲಿಸಿದರೆ ನಮ್ಮ ದೇಶದಲ್ಲಿ ಬಹು ಕಡಿಮೆಯೇ ಸರಿ.’

‘ ಚಿಕ್ಕವಯಸ್ಸಿನ ಜೋಡಿ ಒಂದು ರಜಿಸ್ಟ್ರಾರರ ಬಳಿಗೆ ಬಂದಿತು. ಇಬ್ಬರಿಗೂ ಹದಿನೆಂಟು ವರುಷ ವಯಸ್ಸು. ಅವರ ಹಿಂದೆಯೇ ವಯಸ್ಸಾದ ಮತ್ತೊಂದು ಜೋಡಿ ಬಂದಿತು. ಈ ಜೋಡಿಯಲ್ಲಿ ಇಬ್ಬರೂ ಎರಡನೆಯ ಮದುವೆ ಮಾಡಿಕೊಳ್ಳುವವರೆ, ಆದುದರಿಂದ ರಜಿಸ್ಟ್ರಾರು ‘ ನಿಮ್ಮ ಮೊದಲನೆಯ ವಿವಾಹದಿಂದ ಸಂತಾನವೇನಾದರೂ ಇರುವುದೇ ? ’ ಎಂದು ಪ್ರಶ್ನೆಮಾಡಿದಳು. ಅವರು ಇಲ್ಲವೆಂದು ಹೇಳಿದರು. ಒಂದು ವೇಳೆ ಪ್ರಥಮ ವಿವಾಹಕ್ಕೆ ಸಂತಾನವಾಗಿದ್ದರೆ ಅವರ ಪೋಷಣೆಗೆ ತಂದೆತಾಯಿಗಳಿಬ್ಬರೂ ಹೊಣೆಯಾಗಬೇಕಾದುದೇ. ಇತರ ಕ್ರಿಶ್ಚಿಯನ್ ದೇಶಗಳಲ್ಲಿದ್ದಂತೆ ಆ ಹೊಣೆ ತಂದೆಯ ತಲೆಗೆ ಮಾತ್ರ ಕಟ್ಟ

ಲ್ಪಡುವದಿಲ್ಲ. ಇಲ್ಲಿ ಮಕ್ಕಳ ಪೋಷಣೆಯು ಗಂಡಹೆಂಡಂದಿರ ಸಂಪಾದನೆಯ ಮೇಲಿದೆ. ಒಂದು ವೇಳೆ ಅವರಿಬ್ಬರಲ್ಲಿ ಒಬ್ಬರು ಕೇವಲ ಜೀವನಕ್ಕೆ ಸಾಲುವಷ್ಟೇ ದುಡಿಯುವವರಿದ್ದರೆ ಎರಡನೆಯವರ ಸಂಪಾದನೆಯಲ್ಲಿ ಮೂರನೆಯೊಂದು ಪಾಲನ್ನು ಮಕ್ಕಳ ಪೋಷಣೆಗಾಗಿ ಕೊಡಿಸುತ್ತಾರೆ. ವಿಚ್ಛೇದನವನ್ನು ಪಡೆದ ತರುವಾಯ ಸಾಮಾನ್ಯವಾಗಿ ಮಕ್ಕಳು ತಾಯಿಯ ಬಳಿಯೇ ಇರುವರು. ಆದರೆ, ತಾಯಿ,ಮಕ್ಕಳನ್ನು ಸರಿಯಾಗಿ ನೋಡದಿದ್ದರೆ ಪತಿತೆಯಾದರೆ, ತಂದೆಯು ಮಕ್ಕಳನ್ನು ತನ್ನ ಬಳಿಯಲ್ಲಿಟ್ಟುಕೊಳ್ಳಲು ಕೇಳಿಕೊಳ್ಳಬಹುದು. ಸಾಮಾನ್ಯವಾಗಿ ಮಕ್ಕಳ ವಿಚಾರವಾಗಿಯೂ ಅವರನ್ನು ಪೋಷಣೆ ಮಾಡುವ ವೆಚ್ಚದ ವಿಚಾರವಾಗಿಯೂ ವಿಚ್ಛೇದನ ಮಾಡಿಕೊಳ್ಳಲು ಹೋಗುವುದಕ್ಕೆ ಮುಂಚೆ ತಮ್ಮಲ್ಲಿ ತಾವೇ ನಿರ್ಧರಿಸಿಕೊಳ್ಳುವರು. ಸಂಧಿ ಸರಿ ಹೋಗದಿದ್ದರೇನೇ ಕೋರ್ಟಿಗೆ ಹತ್ತುವುದು.

ರಷ್ಯಾದಲ್ಲಿ ವಿವಾಹಗಳು ರಜಿಸ್ಟರು ಆಗಿಯೇ ತೀರಬೇಕೆಂದು ಶಾಸನವಿಲ್ಲ. ಸ್ತ್ರೀಪುರುಷರಿಷ್ಟಪಟ್ಟರೆ ಭಾರ್ಯಾಭರ್ತೃರಂತೆ ನಡೆದುಕೊಳ್ಳಬಹುದು. ಇದಕ್ಕೆ ಸರಕಾರವೇನೂ ಅಡ್ಡಿ ತರುವುದಿಲ್ಲ. ಆದರೆ, ರಕ್ಷಣೆ ಪೋಷಣೆಗಳ ವಿಚಾರವಾಗಿ, ರಸಾಭಾಸವಾದಾಗ ಈ ವಿಧದ ವಿವಾಹಗಳಲ್ಲಿ ಬಹಳ ತೊಂದರೆಗಳುಂಟಾಗುವವು. ಆ ಸ್ಥಿತಿಯಲ್ಲಿ ಸ್ನೇಹಿತರನ್ನೂ, ಬಂಧುಗಳನ್ನೂ ಸಾಕ್ಷ್ಯವಾಗಿ ತೆಗೆದುಕೊಂಡು ಮಕ್ಕಳ ತಂದೆಯನ್ನು ನಿರ್ಣಯ ಮಾಡಲಾಗುವುದು. ಸಾಕ್ಷಿಗಳು ಅವರಿಬ್ಬರೂ ದಂಪತಿಗಳಂತೆ ನಡೆದುಕೊಳ್ಳುತ್ತಿದ್ದರೆಂದೂ, ಮಕ್ಕಳಾತನಿಗೇ ಹುಟ್ಟಿದವರೆಂದೂ, ಹೇಳಿದ್ದೇ ಆದರೆ, ಅವನೂ ಸಹ ಜೀವನಾಂಶದಲ್ಲಿ ಭಾಗವಹಿಸಬೇಕಾಗುವುದು. ರಷ್ಯಾದಲ್ಲಿ ಇಷ್ಟು ಸ್ತ್ರೀಪುರುಷ ಸಂಬಂಧಗಳು ಸಡಿಲವಾಗಿದ್ದರೂ ಅಲ್ಲಿ ದುರಾಚಾರಗಳು ಬೆಳೆಯುತ್ತಿಲ್ಲ. ರಷ್ಯಾ ಸ್ತ್ರೀಯರು ಪುರುಷರೊಡನೆ ಸಂಕೋಚವಿಲ್ಲದೆ ತಿರುಗುವರು. ಅಂದಕೂಡಲೆ ಪ್ರತಿಯೊಬ್ಬ ರಷ್ಯನ ಸ್ತ್ರೀಯೂ ವೇಶ್ಯೆಯಂತೆ ಸಂಚರಿಸುತ್ತಿರುವಳೆಂದೂ, ಪುರುಷರು ಪತಿತರು, ದುರಾಚಾರಿಗಳು ಆಗಿರುವರೆಂದೂ ತಿಳಿಯಕೂಡದು. ಅದು ಸುಳ್ಳು. ನಾನು ನೋಡಿದುದರಲ್ಲಿ ಯುರೋಪು

ವ್ರದು. ಪೂರ್ವದಲ್ಲಿ ಇದು ಝಾರನ ಶರತ್ಪ್ರಾಸಾದ (Winter Palace) ವಾಗಿ ಉಪಯೋಗವಾಗುತ್ತಿದ್ದು, ಈಗ ಜನ್ಸನ ವಸ್ತುಪ್ರದರ್ಶನಾಲಯವಾಗಿ ಉಪಯೋಗಿಸಲ್ಪಡುತ್ತಿರುವ ಭವನಕ್ಕೆ ಎದುರಿನಲ್ಲಿರುವುದು.

ಈ ವಿಶಾಲ ಸುಂದರ ಭವನದ ಪಕ್ಕದಲ್ಲಿಯೆ ಪ್ರಪಂಚಪ್ರಸಿದ್ಧಯಾದ 'ಋಷಿಕುಟೀರ'ವು (Hermitage) ಇದೆ. ಇದು ಝಾರರ ಕಾಲದಿಂದ ಅತ್ಯಂತ ಹೆಸರು ಹೊಂದಿದ ಚಿತ್ರಶಾಲೆ. ಇದನ್ನು 'ಟರ್ಸ್ಕೋರ್ಜ್' ೧೭೬೪-೧೭೬೭ರಲ್ಲಿ ನಿರ್ಮಿಸಿದನು. ಅಂದಿನಿಂದ ಮೊದಲುಗೊಂಡು ಇಂದಿನವರೆಗೂ ಇರುವ ಸುಪ್ರಸಿದ್ಧರಾದ ಫ್ರೆಂಚ್ ಮತ್ತು ಇಟಾಲಿಯನ್ ಕಲಾವಿದರಿಂದ ಚಿತ್ರಿಸಲ್ಪಟ್ಟ ಸುಂದರ ಚಿತ್ರಗಳೆಲ್ಲಾ ಇದರಲ್ಲಿ ಸಂಗ್ರಹಿಸಲ್ಪಟ್ಟಿರುವುವು. ಝಾರರ ಪುತ್ರ-ಪುತ್ರಿಯರ, ಬಂಧುಮಿತ್ರರ ಸೌಧಗಳು ಸಹ ನೋಡಬೇಕಾದುವೇ. ಇಂತಹುದೇ 'ಪಾಂರೇ ಪೇಲೇಸ್' ಎಂಬುದೂ ಇದಕ್ಕೆದುರಿನಲ್ಲಿಯೇ ಒಂದು ಸುಂದರವಾದ ತೋಟವಿರುವುದು. ಆ ಉದ್ಯಾನದ ಹಸುರು ಹುಲ್ಲಿನ ಮೇಲೆ ಕಮ್ಯೂನಿಸ್ಟರ ಕುರುಹು ಆದ ಸುತ್ತಿಗೆ-ಕುಡಲಿ ಚಿತ್ರಿಸಲ್ಪಟ್ಟಿರುವುವು. ಇದು ಝಾರರ ಅರಮನೆಗೆ ಸ್ವಲ್ಪ ಹತ್ತಿರವೇ ಇರುವುದು. ಇಲ್ಲಿ ಸಾವಿರಾರು ಮಂದಿ ಕಮ್ಯೂನಿಸ್ಟರು ಕೊಂದುಹಾಕಲ್ಪಟ್ಟಿದ್ದರಿಂದ ಇದನ್ನು ಕ್ರಾಂತಿವೀರರ ಉದ್ಯಾನವೆಂದು ಕರೆಯುವರು.

ನಗರದಲ್ಲಿರುವ ಮುಖ್ಯ ಸೌಧಗಳನ್ನು, ಉದ್ಯಾನಗಳನ್ನು ನೋಡಿ, ಪಟ್ಟಣದ ಹೊರಗಿರುವ ಝಾರರ ಗ್ರೀಷ್ಮಪ್ರಾಸಾದ (Summer Palace) ದ ಸಮೀಪಕ್ಕೆ ಸುತ್ತಿಕೊಂಡು ಬಂದೆವು. ಝಾರ ಚಕ್ರವರ್ತಿಗಳ ಮೂರಂತಸ್ತಿನ ಅರಮನೆಯನ್ನು ಪೂರ್ವದಂತೆಯೇ ಜಾಗರೂಕತೆಯಿಂದಿಟ್ಟಿರುವರು. ಇದರಲ್ಲಿನ ಅಲಂಕಾರಗಳು, ವಸ್ತು ಸಾಮಗ್ರಿಗಳು, ಬಡವರನ್ನು ಹೀರಿ ಹಾಳುಮಾಡಿ ಸೂರೆಮಾಡಿದ ಹಣವನ್ನು ಎಂತಹ ವಿಲಾಸವೈಭವಕ್ಕಾಗಿ ವೆಚ್ಚಮಾಡಿರುವರೋ ಎಂಬುದನ್ನು ನೋಡುವವರು, ತಿಳಿದುಕೊಳ್ಳುವುದಕ್ಕಾಗಿ ಇಡಲ್ಪಟ್ಟಿವೆ.

---

## ಮದುವೆ

ತರುವಾಯ ‘ಜೈಸ್’ ವಿವಾಹಗಳನ್ನು ರಜಿಸ್ಟರು ಮಾಡುವ ಕಚೇರಿಗೆ ಹೊರಟೆವು. ಒಂದು ದೊಡ್ಡ ಬಂಗಲೆಯ ಎರಡನೆ ಅಂತಸ್ತಿನ ಒಂದು ಚಿಕ್ಕ ಕೊಠಡಿಯಲ್ಲಿ ಈ ಕಚೇರಿ. ಗುಮಾಸ್ತರು ಇಬ್ಬರೂ ಹೆಂಗಸರು. ಮದುವೆ ಮಾಡಿಕೊಳ್ಳಲು ಬರುವ ವಧೂವರರಿಗಾಗಿ ನಾಲ್ಕೈದು ಆಸನಗಳಿವೆ. ನಮಗೆ ರಜಿಸ್ಟ್ರಾರರು ತಮ್ಮ ಹತ್ತಿರವಿದ್ದ ಬೆಂಚಿನ ಮೇಲೆ ಕುಳಿತುಕೊಳ್ಳಲು ಹೇಳಿದರು. ನನ್ನ ಮಾರ್ಗದರ್ಶಿನಿ ಅಲ್ಲಿಗೆ ಬಂದ ದಂಪತಿಗಳನ್ನು ರಜಿಸ್ಟ್ರಾರರು ಕೇಳುತ್ತಿದ್ದ ಪ್ರಶ್ನೆಗಳೆಲ್ಲವನ್ನು ಭಾಷಾಂತರಮಾಡಿ ನನಗೆ ಹೇಳಿದಳು.

ದಂಪತಿಗಳಾಗಬೇಕೆನ್ನುವವರು ಎರಡು ರೂಬೆಲ್ ಕೊಟ್ಟರೆ ಅವರಿಗೊಂದು ಚೀಟಿಕೊಡುತ್ತಾರೆ. ಆ ಚೀಟಿಯ ಸಂಖ್ಯೆಯ ಪ್ರಕಾರ ದಂಪತಿಗಳ ಸರತಿ. ಅವರು ಪೋಲೀಸರ ರಹದಾರಿ (ಪಾಸ್‌ಪೋರ್ಟ್) ತೋರಿಸಬೇಕು. ಹೊಸ ಶಾಸನದಂತೆ ಇದು ಅತ್ಯಗತ್ಯ. ರಜಿಸ್ಟ್ರಾರರ ಪುಸ್ತಕದಲ್ಲಿ ವಧೂವರರು ಸಹಿಮಾಡಬೇಕು. ಅವರು ಇವರ ಹೆಸರನ್ನು ತಮ್ಮ ಪಟ್ಟಿಗೆ ಸೇರಿಸಬೇಕು. ಇಷ್ಟಾದರೆ ಕೆಲಸ ಮುಗಿದಂತೆ. ರಜಿಸ್ಟ್ರಾರರು ಕೇಳುವ ಪ್ರಶ್ನೆ ಎರಡೇ: ‘ಹಿಂದಾಗಲೇ ನಿನಗೆ ಮದುವೆಯಾಗಿತ್ತೇ?’ ‘ನಿನ್ನ ವಯಸ್ಸೆಷ್ಟು?’. ನಾನಲ್ಲಿರುವಾಗಲೇ ಎಷ್ಟೋ ಜೋಡಿ ಬಂದು ದಂಪತಿಗಳಾಗಿ ಹೊರಟು ಹೋದರು. ಈ ವಿವಾಹಗಳಿಗೆ ಪಾದರಿಗಳು ಅಥವಾ ಪುರೋಹಿತರು ಬೇಕಿಲ್ಲ. ಮೆರವಣಿಗೆಗಳಿಲ್ಲ. ಉತ್ಸವ ಆಡಂಬರಗಳಿಲ್ಲ. ರಷ್ಯಾದಲ್ಲಿ ಮದುವೆಗೆ ಐದೇ ನಿಮಿಷ ಸಾಕು. ವಿವಾಹವಿಚ್ಛೇದಕ್ಕೂ ಅಷ್ಟೇ. ಭಾರ್ಯಾಭರ್ತೃರಲ್ಲಿ ಯಾರಾದರೂ ಒಬ್ಬರು ಬಂದು ‘ನಾನು ವಿವಾಹವಿಚ್ಛೇದ ಮಾಡಿಕೊಳ್ಳಲೆಳಸಿರುವೆನು’ ಎಂದು ಹೇಳಿದರೆ ಸಾಕು. ವಿವಾಹಬಂಧನ ಸಡಲಿಸುವರು. ಭಾರ್ಯಾಭರ್ತೃರಿಬ್ಬರೂ

ಪರಿಶೀಲನೆಮಾಡಿ ನೋಡುವರು. ಆ ಮಕ್ಕಳಿಗೆ ಚಿಕ್ಕಂದಿನಲ್ಲಿರುವ ಅಭಿರುಚಿಯಂತೆ ವಿದ್ಯೆಯನ್ನು ಕಲಿಸುವರು. ಅದನ್ನನುಸರಿಸಿಯೇ ಇಂಜನಿಯರಿಂಗ್, ಸೈನಿಕಶಿಕ್ಷಣ, ವ್ಯವಸಾಯ, ಲಲಿತಕಲೆಗಳನ್ನು ಕಲಿಸಲು ಅವಕಾಶಕೊಡಲ್ಪಡುವುದು. ಚಿಕ್ಕಂದಿನಿಂದ ಅವರ ಅಭಿರುಚಿಯನ್ನು ಕಂಡುಹಿಡಿದು ಅದನ್ನೆಲ್ಲಾ ಬರೆದು ಇಡುವರು. ಅವರೆಲ್ಲರಿಗೂ ಒಂದೇ ವಿಧವಾದ ಶಿಕ್ಷಣವನ್ನು ಕೊಡುವುದಿಲ್ಲ. ರಷ್ಯಾ ಪ್ರಭುತ್ವವು ಮನುಷ್ಯರ ಬುದ್ಧಿಪ್ರವೃತ್ತಿಗಳೆಲ್ಲರಲ್ಲಿಯೂ ಒಂದೇ ವಿಧವಾಗಿರುವುದಿಲ್ಲ ಎಂಬುದನ್ನು ಚೆನ್ನಾಗಿ ಬಲ್ಲದು. ಎಲ್ಲಿ ನೋಡಿದಲ್ಲಿ ತಾವು ರಷ್ಯಾದ ಮಕ್ಕಳೆಂಬ ಅಭಿಮಾನವೇ ಅಭಿಮಾನ!

ವಯಸ್ಸಿನಂತೆ ಮಕ್ಕಳನ್ನು ಬೇರೆ ಬೇರೆ ತರಗತಿಗಳಾಗಿ ವಿಂಗಡಿಸಿ ಅವರನ್ನು ಜಾಗರೂಕತೆಯಿಂದ ನೋಡಿಕೊಳ್ಳುವರು. ಒಂದು ಕೊಠಡಿಯಲ್ಲಿ ಸುಮಾರು ಮೂವತ್ತು ಮಂದಿ ಮಲಗಿ ನಿದ್ರೆಮಾಡುತ್ತಿರುವರು. ಅವರ ಸಂರಕ್ಷಣೆಯನ್ನು ನೋಡಿಕೊಳ್ಳುವ ದಾದಿಯು ಅವರ ದಿನಕೃತ್ಯಗಳನ್ನು ಬರೆದಿಡುವಳು. ಪ್ರತಿನಿತ್ಯವೂ ಪ್ರತಿಯೊಬ್ಬ ಹುಡುಗನ ಶರೀರದ ಶಾಖ, ಮಲಮೂತ್ರ ವಿಸರ್ಜನೆಯನ್ನು ಕುರಿತು, ಎಷ್ಟು ಸಲ ಎದ್ದಿರುವನೋ, ಎಷ್ಟು ಸಲ ಅತ್ತಿರುವನೋ, ಇವೆಲ್ಲವನ್ನು ಬರೆಯಬೇಕಾಗಿರುವುದು. ಪ್ರತಿಯೊಬ್ಬ ಹುಡುಗನ ವಿಚಾರವಾಗಿ ಪ್ರತ್ಯೇಕವಾಗಿ ಶ್ರದ್ಧೆ ತೆಗೆದುಕೊಳ್ಳುವರು. ಶಾಸ್ತ್ರೀಯ ಪದ್ಧತಿಯ ಪ್ರಕಾರ ಪ್ರತಿಯೊಬ್ಬ ಹುಡುಗನೂ ಕೈಗಳನ್ನು ಮೇಲಕ್ಕೆತ್ತಿಕೊಂಡು ಮಲಗಿರುವನು. ಯಾವ ಹುಡುಗನಿಗಾಗಲಿ ಸ್ವಲ್ಪ ನೋವಾಗಲಿ ರೋಗವಾಗಲಿ ಬಂದರೆ ಅವನನ್ನು ಎಲ್ಲ ಮಕ್ಕಳ ಮಧ್ಯದಿಂದ ತಪ್ಪಿಸಿ 'ಕ್ರೆಚಿ' ವೈದ್ಯರ ಹತ್ತಿರಕ್ಕೆ ಕಳುಹಿಸಿ ಕೊಡುವರು. ಆ ಮಗುವನ್ನು ಮನೆಗೆ ತೆಗೆದುಕೊಂಡು ಹೋಗುವುದಕ್ಕೆ ಅವಕಾಶ ಕೊಡುವುದಿಲ್ಲ. ಅಗತ್ಯವಾದರೆ ತಾಯಿಯು ಮಗುವಿನ ಬಳಿಯೆ ಇರಬಹುದು. ರಷ್ಯಾದಲ್ಲಿ ಕೂಲಿಯವರ ಮಕ್ಕಳನ್ನು ಶಾಸ್ತ್ರೀಯ ಪದ್ಧತಿಯ ಪ್ರಕಾರ ಪೋಷಣೆ ಮಾಡುತ್ತಿರುವುದನ್ನು ನೋಡಿದರೆ, ನಮ್ಮ ದೇಶದಲ್ಲಿ ಮಹಾ ಧನವಂತರು ಸಹ ಅಸೂಯೆ ಪಡುವರು. ಶಿಶುಸಂರಕ್ಷಣಾಲಯವನ್ನು ನೋಡುವುದಾದ ತರು

ವಾಯ ಪ್ರೇಕ್ಷಕರ ಅಭಿಪ್ರಾಯ ಪುಸ್ತಕದಲ್ಲಿ (ವಿಜಿಟರ್ಸ್ಸ್ ರಿಜಿಸ್ಟರ) ಅಭಿಪ್ರಾಯವನ್ನು ಬರೆಯಹೇಳುವರು. ಈ 'ಕ್ರೆಚೆ'ಗಳಲ್ಲಿ ಒಡ ಕೂಲಿಕಾರರಿಂದ ಹಣ ತೆಗೆದುಕೊಳ್ಳುವದಿಲ್ಲ. ಆದರೆ, ಸಂಬಳ ಹೆಚ್ಚು ತಂದುಕೊಳ್ಳುವವರಿದ್ದರೆ ಅವರ ಹತ್ತಿರ ಅವರ ಸಂಬಳಕ್ಕೆ ಸರಿಯಾಗಿ ರುಸುಮನ್ನು ವಸೂಲು ಮಾಡುತ್ತಾರೆ. ಪ್ರಸವ ಚಿಕಿತ್ಸಾಲಯಗಳಲ್ಲಿ ವೈದ್ಯರ ಸಲಹೆಯಿಲ್ಲದೆ ಕೇವಲ ತಮ್ಮ ಸ್ವಂತ ಕಾರಣಗಳಿಂದ ಗರ್ಭವಿಚ್ಛೇದನೆ ಮಾಡಿಕೊಳ್ಳಲು ಬಂದ ಸ್ತ್ರೀಯರಿಂದ ಲರಿಂದ ೧೩ ರೂಬಲ್ಸ ವರೆಗೂ ರುಸುಮು ತೆಗೆದುಕೊಳ್ಳುವರು.

ಇಷ್ಟರಲ್ಲಿ ಯಾತ್ರಿಕ ಶಾಖೆಯವರು ಟಾಕ್ಸೀಯೊಂದನ್ನು ಕಳುಹಿಸಿದರು. ನಾವು ಅದರಲ್ಲಿ ಪಟ್ಟಣವನ್ನು ನೋಡಲು ಹೊರಟೆವು.

ನಮ್ಮ ಗಾಡಿಯು ಜಾಗ್ರತೆಯಾಗಿಯೆ 'ನೀವಾ' ನದಿಯ ದಂಡೆಗೆ ಹೋಯಿತು. 'ನೀವಾ' ನದಿಯ ತರಂಗಗಳು ಕದಲುತ್ತಿವೆ. ಅಲುಗಾಡುತ್ತಿರುವಾಗಲೆ ಚಳಿಗೆ ಹೆಪ್ಪುಕಟ್ಟಿ ಬಿಗಿದುಕೊಂಡು ಹೋಗಿರುವದರಿಂದ ಎರಡು ದಂಡೆಗೂ ಮಧ್ಯ ಇರುವ ವಿಶಾಲ ಪ್ರದೇಶವು ಮುಡಕೆ ಮುಡಕೆಯಾಗಿ ಬಿದ್ದಿದ್ದ ಬಿಳಿಯ ಹಚ್ಚಡವನ್ನು ಹಾಸಿದಂತಿದೆ.

ದಾರಿಯಲ್ಲಿ ಬಹಳ ಮುಖ್ಯವಾದ ಸೌಧಗಳು ಕಂಡುಬಂದುವು. ನೌಕಾಸೈನ್ಯ ಕಳಾಶಾಲೆ, ಅವುಗಳ ಕಚೇರಿ, ಕಾರ್ಮಿಕಶಾಖೆಯ ಕಾರ್ಯಾಲಯ ಇವೆಲ್ಲಾ 'ನೀವಾ' ನದಿಯ ತೀರದಲ್ಲಿಯೇ ಇವೆ. ಅವನ್ನು ನೋಡಿದೆನು. ಇದರಲ್ಲಿ ಹಿಂದೆ ರಾಜಕೀಯ ಕೈದಿಗಳನ್ನು ಹಾಕಿ ನಾನಾ ಹಿಂಸೆ ಕೊಡುತ್ತಿದ್ದರು. ಕಮ್ಯೂನಿಸ್ಟ ಪಕ್ಷದವರು, ಕೇಂದ್ರ ಕಾರ್ಯನಿರ್ವಾಹಕ ವರ್ಗದವರು ಹಿಂದೆ ಮನೆಮಾಡಿಕೊಂಡಿದ್ದ ಭವನವನ್ನು ನೋಡಿದೆನು. ಈ ಭವನದ ಕಿಟಿಕಿಗಳ ಬಳಿಯೇ ನಿಂತು, 'ಲೆನಿನನು' ವಿದೇಶಗಳಿಂದ ಬಂದಾಗ ತನ್ನ (ಕಾಮ್ರೇಡು) ಸೋದರರಿಗೆ ಪ್ರಥಮೋಪನ್ಯಾಸವನ್ನು ಕೊಟ್ಟಿದ್ದನಂತೆ. (ರೆಡ್ ಷರ್ಟ್ಸ) ರಕ್ತಕವಚಧಾರಿಗಳ ಭವನವೂ ಬಹು ದೊಡ್ಡದು. ಇದನ್ನು ಭವನ-ನಿರ್ಮಾಣ ಕಲೆಯಲ್ಲಿ ಪ್ರಸಿದ್ಧಿ ಹೊಂದಿದ 'ರೋಸಿ' ಎಂಬಾತನು ೧೮೧೯-೩೪ರ ಮಧ್ಯ ನಿರ್ಮಿಸಿದನು. ಈ ಭವನವು ರಕ್ತಕವಚ ಸೈನ್ಯಗಳಿಗೆ ಕೇಂದ್ರಕಾರ್ಯಾಲಯವಾಗಿ ಉಪಯೋಗಿಸಲ್ಪಡುತ್ತಿರು

ದೇಶದ ಇತರ ದೇಶದ ಜನರಿಗಿಂತಲೂ ರಷ್ಯನರು ಉತ್ತಮರೆಂದು ಹೇಳಬಲ್ಲೆನು. ಯೂರೋಪಿನ ನಾಗರಿಕ ದೇಶಗಳಲ್ಲೆಲ್ಲಾ ಸ್ತ್ರೀಯರು ಪುರುಷರನ್ನು ಸುಂದರವಾಗಿ ತಮ್ಮ ಕಡೆ ಸೆಳೆಯುವ ಉಪಾಯವನ್ನು ಹಾಕಿಕೊಳ್ಳುತ್ತಾರೆ. ಉತ್ತಮ ವಸ್ತ್ರಧರರು ಮಾಡುವ ಸಂತೋಷಕೂಟ ಭೋಜನಗಳಲ್ಲಿಯೂ, ನಾಟಕಗಳಲ್ಲಿಯೂ ಸ್ತ್ರೀಯರು ಪುರುಷರನ್ನು ಸೆಳೆಯಲು ಯತ್ನಿಸುವರು. ಗಂಡಸರು ಸ್ತ್ರೀ 'ನರಕ ಸೋಪಾನವಲ್ಲ ಸ್ವರ್ಗಸುಖ' ವೆಂದು ತಿಳಿಯುವರು. ರಷ್ಯಾದಲ್ಲಿ ಆ ರೀತಿಯಾಗಿ ಒಬ್ಬರನ್ನೊಬ್ಬರು ತಮ್ಮ ಬಲೆಯಲ್ಲಿ ಹಾಕಿಕೊಳ್ಳಬೇಕೆಂಬ ದುಷ್ಟ ಪ್ರಯತ್ನಗಳಿಲ್ಲ. ಸ್ತ್ರೀಪುರುಷರು ರಾತ್ರಿಯಾಗಲೂ ಒಂದೇ ಗಾಡಿಯಲ್ಲಿ ಪ್ರಯಾಣಮಾಡುವರು. ಬೇಸಿಗೆಯಲ್ಲಿ ಸಮುದ್ರತೀರದಲ್ಲಿಯೂ, ನದೀತೀರದಲ್ಲಿಯೂ, ಕಲಸೇ ಬಟ್ಟೆ ಬಿಚ್ಚಿದ ಕಳೆದು ನಲಿದು ಬತ್ತಲೆಯಾಗಿ ತಿರುಗುತ್ತಿರುವರು. (ಒಂದೊಂದು ಸಲ ದಿಗಂಬರಿಗಳಾಗಿಯೇ ಸ್ನಾನಮಾಡುತ್ತಿರುವರು. ಆದರೆ, ಅವರಲ್ಲಿ ಮೋಹಕ ಚೇಷ್ಟೆಗಳು ಕಂಡುಬರುವುದಿಲ್ಲ. ಆ ದೇಶದಲ್ಲಿ ಒಬ್ಬರನ್ನೊಬ್ಬರು ಮೋಸಮಾಡುವುದೇ ಮಹಾಪಾಪ) ಪ್ರೇಮದ ವಿಷಯದಲ್ಲಿ ನಿಜವಾಗಿಯೂ ನ್ಯಾಯವಾಗಿಯೂ ನಡೆದುಕೊಳ್ಳಬೇಕೆಂದು ರಷ್ಯನರ ಇಚ್ಛೆ. ಸ್ತ್ರೀಪುರುಷರಿಗಿಷ್ಟ ಬಂದಾಗ ವಿವಾಹವಿಚ್ಛೇದನಮಾಡಿಕೊಳ್ಳಬಹುದು. ಆದರೆ, ಯಾವಾಗಲೂ ಹಳಬರನ್ನು ಬಿಟ್ಟು ಹೊಸಬರನ್ನು ಮದುವೆಯಾಗುವುದು ಸ್ವಾಭಾವಿಕವಾಗಿದೆ ಎಂದು ತಿಳಿದರೆ ಅವರನ್ನು ಸರಕಾರವು ಕಠಿಣ ಶಿಕ್ಷೆಗೆ ಗುರಿಪಡಿಸಿ ಕಾರಾಗೃಹದಲ್ಲಿಡುವುದು. ವಿಶ್ವವಿದ್ಯಾಲಯಗಳಲ್ಲಿ ಸ್ತ್ರೀಪುರುಷರು ಒಂದೇ ವಿದ್ಯಾರ್ಥಿಭವನದಲ್ಲಿರುವರು. ಒಬ್ಬರ ಕೋಣೆಯೊಳಗೆ ಇನ್ನೊಬ್ಬರು ಹೋಗಬಹುದು. ಒಬ್ಬರನ್ನೊಬ್ಬರು ಪ್ರೇಮಿಸಬಹುದು. ಭಾರ್ಯಾಭರ್ತೃರಂತೆ ನಡೆದುಕೊಳ್ಳಬಹುದು. ಇದಕ್ಕೆ ಅಧಿಕಾರಿಗಳಾಗಲಿ, ಸಹಪಾಠಿಗಳಾಗಲಿ, ಅಡ್ಡಬರುವುದಿಲ್ಲ. ವಿದ್ಯಾರ್ಥಿ ವಿದ್ಯಾರ್ಥಿನಿಯರು ರಿಜಿಸ್ಟರು ಮಾಡಿಸಿಕೊಂಡಾಗಲಿ, ಇಲ್ಲವೆ ಹಾಗೆಯಾಗಲಿ, ಜೀವನ ನಡಿಸಬೇಕೆಂದರೆ ನಡೆಸಬಹುದು. ಒಂದು ವೇಳೆ ಅವರಿಗೆ ಸಂತಾನವಾದರೆ (ಕಾಲೇಜಿನಲ್ಲಿ) ಕಲಾಶಾಲೆಗೆ ಸಂಬಂಧಿಸಿದ ಸಂರಕ್ಷಣಾಲಯದಲ್ಲಿ ಮಗುವನ್ನು ಬಿಟ್ಟು ಓದಲು ಹೋಗ

ಒಹುದು. ಆದರೆ ಯಾವ ರೀತಿಯ ಪ್ರೇಮವಾಸನೆಯಿಲ್ಲದೆಯೇ ಸ್ತ್ರೀ-ಪುರುಷರು ಕೇವಲ ಕಾಮಸಂತೃಪ್ತಿಗಾಗಿಯೇ ಕಲೆತುಬಿಡುತ್ತಿರುವರೆಂದು ತಿಳಿದರೆ ಸರಕಾರವು ಶಿಕ್ಷೆಯನ್ನು ವಿಧಿಸುತ್ತದೆ. ಸ್ತ್ರೀಪುರುಷರಾರೇ ಆದರೂ, ಮದುವೆಮಾಡಿಕೊಂಡರೂ—ಮಾಡಿಕೊಳ್ಳದೇ ಇದ್ದರೂ, ಸರಿಯೆ—ಎರಡನೆಯವರಿಗೆ ಸುಖವ್ಯಾಧಿಯನ್ನು ಸೋಂಕಿಸಿದರೆ ಒಂದು ವರುಷ ಕಠಿಣ ಶಿಕ್ಷೆ ಕೊಡುವರು.

ರಜಿಸ್ಟರ ಮಾಡುವವಳಿಗೆ ಕೆಲಸವು ಬಹಳವಿದ್ದುದರಿಂದ ಇನ್ನೊಬ್ಬ ಮುದುಕಿಯು ಆಕೆಗೆ ಸಹಾಯಮಾಡಲು ಬಂದಳು. ನಾನೂ, ಮಾರ್ಗದರ್ಶಿಕೆಯೂ, ರಜಿಸ್ಟ್ರಾರು ಬಳಿಯೇ ಕುಳಿತಿದ್ದೆವು. ನಾವೂ ಸಹ ಮದುವೆಯಾಗಲು ಬರುವ ಜತೆಯಂತೆಯೇ ಇದ್ದೆವು. ಆದುದರಿಂದ ಆ ವೃದ್ಧೆಯು ನಮ್ಮ ಕಡೆ ನೋಡುತ್ತ ಗಂಭೀರವಾಗಿ 'ನಿಮ್ಮ ಸಂಖ್ಯೆಯೆಷ್ಟು?' ಎಂದು ಕೇಳಿದಳು. ಆ ಮಾತು ಕೇಳಿ ಮಾರ್ಗದರ್ಶಿಕೆಯು ಪಕಪಕನೆ ನಕ್ಕಳು. ಮುದುಕಿಯು ಕೇಳಿದ ಪ್ರಶ್ನೆಯನ್ನು ನನಗೆ ಹೇಳಿದಳು. ರಿಜಿಸ್ಟ್ರಾರು ಸಹ ನಗಲಾರಂಭಿಸಿದಳು. ನಾವು ಸುಮ್ಮನೆ ನೋಡಲು ಬಂದೆವೆಂದೂ, ಮದುವೆಯಾಗಲು ಬರಲಿಲ್ಲವೆಂದೂ, ಅವರು ಹೇಳಿದರು. ಆಗ ಆ ವೃದ್ಧೆಯು 'ಯಾವಾಗಲೋ ಒಂದು ಸಲ ನೀನು ಯಾವನೋ ವಿದೇಶೀಯನಾದ ಭಾಗ್ಯಶಾಲಿಗೆ ಮಾರ್ಗದರ್ಶಿಕೆಯಾಗುವಿಯೇಳು. ನನಗೆ ಗೊತ್ತು' ಎಂದು ಹಾಸ್ಯಮಾಡಿದಳು.

'ಏಕೆ ಯಾವಾಗಲೋ? ಈವಾಗಲೇ ಆಗಲಿ.'

'ಆದರೆ, ನಮ್ಮಲ್ಲಿ ಸಂಖ್ಯಾಚೀಟಿಯಿಲ್ಲವಲ್ಲಾ' ಎಂದು ನಾನು ಆಡ್ಡ ಹೇಳಿದೆನು.

'ಆದಕ್ಕೇನು ಪರವಾಯಿಲ್ಲ. ನಾನೇ ಕೊಡುತ್ತೇನೆ, ನಿಮ್ಮ ಸಂಖ್ಯೆಯನ್ನು ಹೇಳಿ, ನಿಮಗಿಷ್ಟವೇನೇ?' ಎಂದಳು ಮುದುಕಿ.

'ನಾನು ಹಿಂದುಸ್ಥಾನದವನು. ನಿಮ್ಮ ಕಾಮ್ರೇಡ್ ನನ್ನೊಡನೆ ವಿವಾಹವಾಗಲು ಒಪ್ಪಲಿಕ್ಕಿಲ್ಲ.'

ನನ್ನ ಮಾರ್ಗದರ್ಶಿಕೆಯು ನಗುತ್ತ, 'ನನಗಿಷ್ಟವಾದರೆ ನೀವು ಸಿದ್ಧರಾಗಿದ್ದೀರಾ?' ಎಂದಳು. ಒಳ್ಳೇ ಪೇಚಿಗೆ ಸಿಕ್ಕಿಕೊಂಡಂತಾಯಿತು.

'ಹೋದ ವರುಷವೇ ನಾನೊಬ್ಬ ಭಾರತೀಯ ತರುಣನಿಗೆ ರಷ್ಯನ್ ಯುವತಿಯೊಬ್ಬಳನ್ನು ಮದುವೆ ಮಾಡಿರುವೆನು' ಎಂಬುದಾಗಿ ರಜಿಸ್ಟ್ರಾರು ಒಂದು ಉದಾಹರಣೆಯನ್ನು ತೋರಿಸಿದಳು. ನಾನು ಉಗುಳು ನುಂಗುತ್ತಾ, 'ನನಗೆ ನಮ್ಮ ದೇಶದಲ್ಲಿ ಮದುವೆಯಾಗಿದೆ' ಎಂದೆನು. ನನ್ನ ಮಾರ್ಗದರ್ಶಿಕೆಯು ಆಶ್ಚರ್ಯಪಟ್ಟಳು.

'ಏನು? ನಿಜವಾಗಿಯೂ? ನಿಮಗೆ ಮದುವೆಯಾಗಿರುವುದೇ?'

ಅಲ್ಲಿಂದ ಎದ್ದೆವು. ಆನಂತರ ನನ್ನ ಮಾರ್ಗದರ್ಶಿಕೆಯು ನನ್ನ ಮದುವೆಯ ವಿಚಾರವಾಗಿ ಸುಮ್ಮನೆ ಬಿಡುವಳೇ. ಒಂದು ಲಕ್ಷ ಯಕ್ಷ ಪ್ರಶ್ನೆಗಳನ್ನು ಹಾಕಿದಳು.

'ನಿಮಗೆ ಮದುವೆಯಾಗಿ ಎಷ್ಟು ವರುಷ? ನಿಮ್ಮ ಹೆಂಡತಿಯ ವಯಸ್ಸೆಷ್ಟು? ಆಕೆಯು ಚೆಲುವೆಯೇ? ನಿಮಗಿಬ್ಬರಿಗೂ 'ಕೋರ್ಟುಷಿಪ್' ಎಷ್ಟು ದಿನ ನಡೆಯಿತು?'

ಇಂತಹವುಗಳನ್ನೇ ಉಸಿರು ಬಿಡದಂತೆ ಕೇಳಿದಳು. ನಮ್ಮ ದೇಶದಲ್ಲಿ ಮದುವೆಗೆ ಮುಂಚೆ 'ಕೋರ್ಟುಷಿಪ್' ನಡೆಯುವುದಿಲ್ಲವೆಂದು ಹೇಳಿದಾಗ ಆಕೆಯ ಆಶ್ಚರ್ಯಕ್ಕೆ ಮಿತಿ ಮೇರೆ ಇಲ್ಲ.

'ಹಾಗಾದರೆ ನೀವು ಮದುವೆ ಹೇಗೆ ಮಾಡಿಕೊಳ್ಳುವಿರಿ?'

'ನಮ್ಮ ತಂದೆತಾಯಿಗಳು ನಮಗಾಗಿ ಹುಡುಗಿಯರನ್ನು ನೋಡಿ ನಮಗೆ ತೋರಿಸುವರು. ನಮ್ಮ ಸಮ್ಮತಿ ದೊರೆತರೆ ತೀರಿತು—'

'—ನೀವು ಮದುವೆ ಮಾಡಿಕೊಳ್ಳುವಿರಾ?' ಆಶ್ಚರ್ಯದಿಂದಾಕೆಯು ಸ್ವಲ್ಪ ಹೊತ್ತು ಸುಮ್ಮನಿದ್ದು 'ಹೀಗೆ ನಡೆಯುತ್ತದೆಂದು ಊಹಿಸಲಿಕ್ಕೆ ಕೂಡಾ ಕಷ್ಟಸಾಧ್ಯವಾಗಿ ತೋರುವುದಲ್ಲ! ನೀವು ಹೇಗೆ ಮಾಡಿಕೊಳ್ಳುವಿರಿ?' ಎಂದಳು.

'ಅದು ನಮ್ಮ ದೇಶಾಚಾರ.'

ನಾವು ಟೀ ತೆಗೆದುಕೊಳ್ಳಲು ಹೋಟಲಿಗೆ ತಿರುಗಿ ಬಂದೆವು. ಸಾಯಂಕಾಲ ಮತ್ತೆ (ಆರ್ಟ—ಗ್ಯಾಲರಿ) ಕಲಾಭವನವನ್ನು ನೋಡಲಿಕ್ಕೆ ಹೊರಟೆವು. ಹೊರಡುವುದಕ್ಕೆ ಮುಂಚೆ ಮಾಸ್ಕೋಕ್ಕೆ ಹೊರಡಲು ರೈಲು ತಿಕೀಟು, ಪ್ಯಾಸ್‌ಪೋರ್ಟು, ಯಾತ್ರಿಕ ಶಾಖೆಯವರ ಬಳಿಯಿದ್ದುದರಿಂದ

ಅದನ್ನು ತರಲು ಹೊರಟೆವು. ಸೋವಿಯಟ್ ಸರಕಾರವು ಈ ಬಲೆಯನ್ನು ಬಹಳ ಜಾಣತನದಿಂದ ಹೆಣೆದಿರುವರು. ಯಾರಾದರೂ ಹೊಸ ಮನುಷ್ಯರು ರಷ್ಯಾ ಸರಹದ್ದಿನಲ್ಲಿ ಕಾಲಿಟ್ಟ ಕೂಡಲೆ ಒಟ್ಟಿಗೆ ಬರೆಗಳನ್ನೂ ಪೆಟ್ಟಿಗೆಗಳನ್ನೂ ಹುಡುಕುವರು. ಪ್ರತಿಯೊಂದು ವಸ್ತುವನ್ನು—ಕಡೆಗೆ ಕವರುಗಳನ್ನೂ ಸಹ—ಹುಡಿಕಿ, ಆತನ ಬಳಿ ಇರುವ ಪ್ರತಿಯೊಂದು ಪದಾರ್ಥವನ್ನು ಲೆಕ್ಕವಿಟ್ಟುಕೊಳ್ಳುತ್ತಾರೆ. ರಷ್ಯಾ ಬಿಟ್ಟು ತನ್ನ ದೇಶಕ್ಕೆ ಹಿಂದಿರುಗುವುದಕ್ಕೆ ಮುಂಚೆ ಲೆಕ್ಕಗಳಲ್ಲಿ ಬರೆದಿರುವ ವಸ್ತುಗಳನ್ನು ಬಿಟ್ಟು ಮತ್ತೇನಾದರೂ ಇದ್ದರೆ, ಅದಕ್ಕವರು ಸಗದು ಕೊಂಡ ಚೀಟಿಗಳನ್ನು ತೋರಿಸಬೇಕಾಗುತ್ತದೆ. ಆತನು ರಷ್ಯಾದಲ್ಲಿದ್ದಷ್ಟು ದಿವಸವೂ ಪ್ಯಾಸುಪೋರ್ಟು ಪ್ರಭುತ್ವದವರ ಕೈಯಲ್ಲಿರುವುದು. ಪ್ರಾಯಶಃ ಈ ಕೆಲಸವನ್ನು ವಿದೇಶೀಯರ ಮೇಲೆ ಒಂದು ಕಣ್ಣಿಟ್ಟಿರಲಿಕ್ಕೇ ಇರಬಹುದು. ಯಾತ್ರಿಕರು ಒಂದು ನಗರದಿಂದ ಮತ್ತೊಂದು ನಗರಕ್ಕೆ ಹೋಗುವಾಗ ಆತನಿಗೆ ಪ್ಯಾಸ್‌ಪೋರ್ಟನ್ನು ಕೊಡುವರು. ಯಾತ್ರಿಕ ಶಾಖೆಯ ಕಾರ್ಯಾಲಯದ ಉದ್ಯೋಗಿಗಳು ಅಷ್ಟು ಚುರುಕಾಗಿಲ್ಲ. ಚಿಕ್ಕ ಕೆಲಸಕ್ಕೇ ಎಷ್ಟೋ ಕಾಲಹರಣ ಮಾಡುವರು. ನಾನು ಯಾತ್ರಿಕ ಶಾಖೆಯವರ ಆಫೀಸಿನಿಂದ ಹೊರಗೆ ಬರುತ್ತಿದ್ದಾಗ ಒಬ್ಬ ಭಾರತೀಯನನ್ನು ಕಂಡು ಚಕಿತನಾದೆ. ಅಷ್ಟರಲ್ಲಿ ಆತನು ಬಂದು 'ನೀವು ಭಾರತೀಯರೇ' ಎಂದನು. 'ಹೌದು. ನೀವೂ ಕೂಡ—' 'ಏಕೆ? ನೀವು ಗುರ್ತಿಸಲಾರಿರಾ? ನಿಮ್ಮ ಹೆಸರೇನು?' 'ಬೆಸರ್ಜೀ.' 'ನಾನು ಚಟರ್ಜೀ.'

ಇಷ್ಟು ದೂರದಲ್ಲಿ ಒಬ್ಬ ಬಂಗಾಳೀ ಮನುಷ್ಯನನ್ನು ನೋಡಿ ಬಹಳ ಆನಂದವಾಯಿತು. ವಿವರವಾಗಿ ಕೇಳಿದ ತರುವಾಯ ಶ್ರೀಮತಿ ಸರೋಜಿನಿ ನಾಯುಡು ಅವರ ತಮ್ಮನೆಂದೂ, ಹೆಸರು ಹರೀಂದ್ರನೆಂದೂ, ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದಲ್ಲಿ ಆಚಾರ್ಯನಾಗಿರುವನೆಂದೂ ತಿಳಿಯಿತು.

---

## ಕಲಾಮಂದಿರ

ಅಲ್ಲಿಂದ ಕಲಾಸಂಗ್ರಹಾಲಯ ನೋಡಲು ಹೊರಟೆವು. ಅದನ್ನು ನೋಡಲಿಕ್ಕೆ ಹೆಸರಿಗೆ ಸ್ವಲ್ಪ ರೂಪಾಯಿ ಕೊಡಬೇಕು. ಹಾಗೆ ಮಾಡಿದರೆ ಅಲ್ಲಿಯ ಮಾರ್ಗದರ್ಶಿಕೆಯು ಯಾತ್ರಿಕನಿಗೆ ಎಲ್ಲಾ ಚಿತ್ರಗಳನ್ನೂ ಪ್ರತಿಮೆಗಳನ್ನೂ ತೋರಿಸಿ ಅವು ಯಾವಾಗ ತಯಾರಿಸಲ್ಪಟ್ಟವೋ ಅದರ ವಿಧಾನ, ಮಹತ್ವ ತಿಳಿಸುವಳು.

'ಹರ್ಮಿಟೇಜಿ'ನಲ್ಲಿ ಪುರಾತನ ಚಿತ್ರಗಳೆಲ್ಲ ಶೇಖರಿಸಲ್ಪಟ್ಟಂತೆ ಇದರಲ್ಲಿ ವಿಪ್ಲವದ ತರುವಾಯ ಬರೆದ ಚಿತ್ರಗಳನ್ನೂ ಮೂರ್ತಿಗಳನ್ನೂ ಆರಿಸಿ ಇಟ್ಟಿದ್ದಾರೆ. ಕಾಲಾನುಕ್ರಮವಾಗಿ ಈ ಪ್ರತಿಮೆಗಳನ್ನು ಪರಿಶೀಲನೆ ಮಾಡಿದರೆ ಕ್ರಾಂತಿಯ ದಿನದಿಂದ ಈ ದಿನದ ವರೆಗೂ ರಷ್ಯನರ ಮಾನಸಿಕ ಪ್ರವೃತ್ತಿವಿಕಾಸವು ಗೋಚರವಾಗುವುದು. ಬೇರೆ ಬೇರೆ ಕಾಲದ ವಸ್ತುಗಳನ್ನು ಬೇರೆ ಬೇರೆ ಕೊಠಡಿಗಳಲ್ಲಿಟ್ಟಿರುವರು. ಸಮಕಾಲಿಕ ಚಿತ್ರಗಳು, ಮೂರ್ತಿಗಳು, ಪಾತ್ರೆಗಳು, ಬಟ್ಟೆಗಳು ಮೊದಲಾದ ಸಮಸ್ತ ವಸ್ತುಗಳೂ ನೋಡುವವರಿಗೆ ಒಂದೇ ಕಿರುಮನೆಯಲ್ಲಿ ಕಂಡುಬರುವುವು. ಈ ಪದ್ಧತಿಯಿಂದ ಒಂದು ಕಾಲದ ವಸ್ತುಗಳೆಲ್ಲಾ ಒಂದೇ ಕಡೆ ಕಂಡು ಬರುವುವು.

ವಿಪ್ಲವದ ತರುವಾಯ ಪ್ರಜೆಗಳ ಮನಸ್ಸು ದಂಗೆ ದರೋಡೆಗಳಿಂದ ನೊಂದುಗೊಂಡಿತ್ತು. ಆಗ ಬರೆದ ಚಿತ್ರಗಳಲ್ಲಿ ದುಃಖ, ಚಿಂತೆ ಸ್ಪಷ್ಟವಾಗಿ ಕಾಣುತ್ತದೆ. ನಾಟಕ, ಕಾದಂಬರಿ, ಕತೆ, ಕವನ, ಕಲಾ-ಸಂಬಂಧದ ಪ್ರತಿಯೊಂದು ವಸ್ತುವಿನಲ್ಲಿಯೂ ಅದೇ ದುಃಖಪೂರಿತ ಭಾವವು ಸ್ಪಷ್ಟವಾಗಿ ಕಂಡುಬರುತ್ತಿರುವುದು. ಈ ಕಾಲ ಕಳೆದ ಮೇಲೆ ವಿಪ್ಲವ ವಿರೋಧಿಗಳೆಲ್ಲಾ ನಾಶಮಾಡಲ್ಪಟ್ಟ ನಂತರ, ವಿಜಯೋಲ್ಲಾಸದಲ್ಲಿ ಬೋಲ್ಶೆವಿಕ್ ಯುವಕರು ಕುಡಿಯುವುದರಲ್ಲಿಯೂ, ವ್ಯಭಿಚಾರದಲ್ಲಿಯೂ ಮುಳುಗಿ ಹೋಗಿದ್ದರು. ರಷ್ಯನ್ ಯುವಕರು ಮತ

ವಿಶ್ವಾಸಗಳನ್ನು ಧಿಕ್ಕರಿಸಿ ದೂರ ಸರಿದಿರುವರು. ಸಮಾಜದ ಕಟ್ಟಳೆಗಳನ್ನು ಸ್ವೇಚ್ಛೆಯಾಗಿ ಕಾಲಿಸಿಂದೊದೆದಿರುವರು. ಆ ದಿಸಗಳು ಗಂಡು ದಿನಗಳು. ಆ ಯುಗದಲ್ಲಿ ಪ್ರಜೆಗಳೆಲ್ಲರೂ ಹೊಸತನದ ಮದದಲ್ಲಿ ಮೈಮರೆತು ಹೋಗಿರುವರು. ದೇಶದಲ್ಲಿರುವ ಮೇಧಾವಿಗಳು ಕ್ರಾಂತಿಯು ಈ ಭಯಂಕರ ಪರಿಣಾಮವನ್ನು ನೋಡಿ ಭ್ರಾಂತರಾಗಿ ಶಾಂತಿ ಸ್ಥಾಪಿಸಿ, ಸಮಾಜವನ್ನು ಸುವ್ಯವಸ್ಥಿತವನ್ನಾಗಿ ಸುಸ್ಥಿರವನ್ನಾಗಿಮಾಡಲು ವಿಶೇಷವಾಗಿ ಪ್ರಯತ್ನಿಸಿದರು. ಆ ಕಾಲದ ಪ್ರಜೆಗಳ ಮಾನಸಿಕ ಪ್ರವೃತ್ತಿ 'Three pairs of silk stockings—Embezzlers—Squaring the circle—' ಮೊದಲಾದ ಸುಪ್ರಸಿದ್ಧ ನಾವಲುಗಳನ್ನು ನೋಡಿದರೆ ಬೋಧೆಯಾಗುವುದು.

ಇದಾದ ಮೇಲೆ ಪಂಚವರ್ಷಯೋಜನೆಯ ಕಾಲ. ಎಲ್ಲದರಲ್ಲೂ ನಿಶ್ಚಿತವಾದ ಕಾರ್ಯಕ್ರಮ ಏರ್ಪಟ್ಟಿತು. ಉತ್ಪತ್ತಿಕ್ರಮದಲ್ಲಿ ಒಂದು ನಿಶ್ಚಿತವಾದ ಕಾರ್ಯಪ್ರಣಾಳಿಕೆ, ಶಾಸನಗಳಲ್ಲಿ ಒಂದು ಪದ್ಧತಿ ಏರ್ಪಟ್ಟಿತು. ಕಲಾವಿಭಾಗದಲ್ಲಿ ಈ ಯುಗಕ್ಕೆ ಸಂಬಂಧಿಸಿದ ಚಿತ್ರ ಹೆಚ್ಚಾಗಿವೆ. ಗಣಿಗಳಲ್ಲಿ ಕೆಲಸಮಾಡುತ್ತಿರುವ ಕೂಲಿಕಾರರು ಗಿರಣಿಗಳನ್ನು ನಡೆಸುತ್ತಿದ್ದಂತೆ ಹೊಸದಾಗಿ ವಿಶ್ರಾಂತಿ ಮಂದಿರಗಳನ್ನು ಕಟ್ಟುತ್ತಿದ್ದಂತೆ, ಕಾರಖಾನೆಗಳಲ್ಲಿ ಕೆಲಸಮಾಡುತ್ತಿದ್ದಂತೆ, ಕಪ್ಪು ಕಪ್ಪು ಹೊಗೆ ಸಿಗಿ ಸಿಗಿ ಉರಿವ ಕೆಂಡ, ಮಧ್ಯ ಕೂಲಿಯವರು ನಿಂತಿರುವ ಹಾಗೆ—ಇವೇ ಚಿತ್ರ. ಸಮಷ್ಟಿ ವ್ಯವಸಾಯಕ್ಷೇತ್ರಗಳು, ಸಾಮೂಹಿಕ ಭೋಜನಾಲಯಗಳು, ಸರಕಾರವು ನಡೆಸುತ್ತಿದ್ದ ಇತರ ಕೆಲಸಗಳ ಕ್ಷೇತ್ರಗಳೆಷ್ಟೋ. ಇವಲ್ಲದೆ, ಹಣ್ಣುಗೊಂಚಲು ಇತ್ಯಾದಿ ದೃಶ್ಯಗಳ ಚಿತ್ರಸಹಿತ ಈ ಕಾಲದಲ್ಲಿ ತಯಾರಾಗಿರುವವು. ಅಪ್ಸರಸ್ತ್ರೀಯರದಾಗಲಿ, ದೇವತೆಗಳದಾಗಲಿ, ಸ್ವರ್ಗ–ನರಕಗಳ ವಿಚಿತ್ರಗಳಾಗಲಿ ಚಿತ್ರಿಸಲ್ಪಟ್ಟಿಲ್ಲ. ಕೊನೆಗೆ ಏಸುಕ್ರಿಸ್ತನ ಬೊಂಬೆಯೂ ಇಲ್ಲ. ಈಗಿನ ರಷ್ಯನ್ನರು ನೂರಕ್ಕೆ ನೂರು ಪಾಲು ಪ್ರತ್ಯಕ್ಷವಾದಿಗಳು. ಅವರು ಮಕ್ಕಳ ಪುಸ್ತಕಗಳಲ್ಲಿ ಸಹ ದೇವತೆಗಳ ಪಾಠಗಳನ್ನೂ ಕತೆಗಳನ್ನೂ ತೆಗೆದುಹಾಕಿರುವರು. ಈಗೀಗ ಪಠ್ಯಪುಸ್ತಕಗಳಲ್ಲಿ ಕಲ್ಪನಾ ಕತೆಗಳಿಗೆ ಅನುಮತಿ ಕೊಟ್ಟಿರುವರು. ಈ ಕಲ್ಪನಾ ಕತೆ

ಗಳಲ್ಲಾದರೂ ಭೂತ-ಪ್ರೇತ-ಪಿಶಾಚಗಳನ್ನು ಕುರಿತ ವಿಚಾರಗಳಿಲ್ಲ; ನೂತನ ಸಮಾಜ, ನೂತನ ಆದರ್ಶಗಳನ್ನು ಕುರಿತು ಬರೆಯುತ್ತಿರುವರು.

ಕ್ರಾಂತಿಯ ತರುವಾಯ ಕೆಲವು ಕಾಲದಲ್ಲಿಯೇ ರಷ್ಯದ ಕಲೋಪಾಸಕರು ರೇಖಾಚಿತ್ರಗಳಲ್ಲಿಯೂ— ಬಣ್ಣದ ಚಿತ್ರಗಳಲ್ಲಿಯೂ ನೂತನ ವಿಧಾನವನ್ನು ಅವಲಂಬಿಸಿರುವರು. ಚಿತ್ರ, ಕತೆ, ನಾಟಕ ಎಲ್ಲವೂ ಒಂದು ಪ್ರತ್ಯೇಕೋದ್ದೇಶ ಸಾಧನೆಗಾಗಿಯೇ.

ಕಲಾಸ್ವಾತಂತ್ರ್ಯವನ್ನು ನಿರೋಧಿಸಲು 'Rapp' ಎಂಬ ಜನಸಾಮಾನ್ಯರ ಸಭೆಯೊಂದನ್ನು ನಿರ್ಮಾಣಮಾಡಿದಾರೆ. ಆ ಸಭೆ ಬಲಾತ್ಕಾರವಾಗಿ ಕಲೆಯ ಎಲ್ಲಾ ಶಾಖೆಗಳನ್ನೂ ಉದ್ದೇಶಸಾಧನೆಗೆ ಆಯುಧವಾಗಿ ಮಾಡಿದೆ; ಪ್ರತಿಯೊಂದೂ ಕಮ್ಯೂನಿಸ್ಟ ತತ್ವಪ್ರಚಾರಕ್ಕಾಗಿ. ಆದ್ದರಿಂದ ಆ ಕಾಲದ ರಚನೆಯೆಲ್ಲ ಒಂದೇ ಅಚ್ಚಿನಲ್ಲಿ ಎರಕ ಹೊಯ್ದಂತಿರುವವು. ಗಾಯನ, ಕಾವ್ಯ, 'ಜಿಪ್ಸೀ' ಸಂಗೀತ ನಿಷೇಧಿಸಲ್ಪಟ್ಟಿರುವುದು. 'ಹೆರಾಲ್ಡ್ ಲಾಯಿಡ್' ಫಿಲ್ಮಿಗೆ ಸಹ ಪ್ರತಿಬಂಧ.

ಪತ್ರಿಕೆ, ರೇಡಿಯೋ, ಸಭಾಸಮಾವೇಶ, ವಾಗ್ವರ್ಧಿನೀ ಸಮಾಜ, ಪ್ರತಿಯೊಂದು ಸ್ಥಳದಲ್ಲಿಯೂ ರಾಜನೀತಿಯ ಉಪನ್ಯಾಸ ಕೊಡುವುದೊ ಕೇಳುವುದೋ. ಇದರಿಂದ ಬೇಸರಗೊಂಡ ರಷ್ಯನರು, ಕಲಾಕಾರ ಸಮಾಜದ ಸಜೀವ ಅಂಗ, ಅಸಂಪ್ರದಾಯಿಕ ಎಂಬ ಅಭಿಪ್ರಾಯಕ್ಕೆ ಬಂದಿರುವರು.

ಕಲಾನಿರೋಧಕ ಸಮಿತಿಗಳು ರದ್ದಾದೊಡನೆ ಕಲಾಪ್ರವಾಹವು ಬೇರೆ ಬೇರೆ ಹಾದಿಗಳಲ್ಲಿ ನಿರ್ನಿರೋಧವಾಗಿ ಪ್ರವಹಿಸಿತು. ಇಂದು ರಷ್ಯಾ ಪ್ರಭುತ್ವವು ತನ್ನನ್ನು ಕೆಳಗುರುಳಿಸಲು ಪ್ರಯತ್ನಿಸುವ ಸಾಹಿತ್ಯವನ್ನು ಮಾತ್ರ ನಿಷೇಧದಲ್ಲಿಟ್ಟಿದೆ.

ಈಗ ರಷ್ಯಾದಲ್ಲಿ ಹೊಸ ಚಿತ್ರಗಳು ಹೇರಳವಾಗಿ ಬರುತ್ತಿವೆ. ಫ್ರೆಂಚು, ಇಟಾಲಿಯನ್ ಚಿತ್ರಗಳೊಡನೆ ಸ್ಪರ್ಧಿಸುತ್ತಿವೆಯೋ ಎಂಬಂತೆ ಬಹಳ ತೀವ್ರವಾಗಿ ಅಭಿವೃದ್ಧಿಹೊಂದುತ್ತಿರುವುವು. ಪ್ರೇಮಕತೆಗಳೂ, ಕಾದಂಬರಿಗಳೂ ಬರೆಯಲ್ಪಡುತ್ತಿರುವವು. ಸರ್ವಾಧಿಕಾರವು ವ್ಯವಸಾಯವನ್ನು ವಿಪುಲವಾಗಿ ವೃದ್ಧಿಪಡಿಸಿ, ಯಂತ್ರಗಳನ್ನು ನಡೆಸಬಲ್ಲುದು; ಕಲೆಗಳನ್ನು ಅಭಿವೃದ್ಧಿಗೆ ತರಲಾರದೆಂದು ಅವರು ಅನುಭವದಿಂದ ಗ್ರಹಿಸಿರು

ವರು. ಆದರೂ ರಷ್ಯನ್ ಸಾಹಿತ್ಯದಲ್ಲಿ ಕ್ರಾಂತಿಯ ಉದ್ರೇಕ ಇನ್ನೂ ಕಡಿಮೆಯಾಗಿಲ್ಲ. ಕಡಿಮೆಯಾಗುವುದಾದರೂ ಹೇಗೆ? ರಷ್ಯನ್ ಸಾಹಿತ ನಿರ್ಮಾಣಕರೆಲ್ಲಾ ಕ್ರಾಂತಿಕಾರರೇ.

ಮೊದಲಿಗೆ ರಷ್ಯಾದಲ್ಲಿ ಕಲೋಪಾಸಕರೆಂದರೆ ಬಹಳ ನೀಚವಾಗಿ ಪರಿಗಣಿಸಲ್ಪಡುತ್ತಿದ್ದರು. ಅವರು ಪಟ್ಟಣಿಗರ ಯುಗದ ಅವಶೇಷವೆಂದು ಅಭಿಪ್ರಾಯವಿದ್ದಿತು. ಕಲಾಕಾರರಿಗೆ ಪ್ರಭುತ್ವದಲ್ಲಿ ಸ್ಥಾನವಿರಲಿಲ್ಲ. ಈಗ ಅವರ ಸ್ಥಿತಿಯೇ ಬೇರೆ. ಇಂಜನಿಯರುಗಳು, ವಿಜ್ಞಾನವೇತ್ತರು, ಇವರಂತೆ ಅವರಿಗೂ ವಿಶೇಷವಾದ ಪ್ರತಿಫಲ ಕೊಡುತ್ತಿರುವರು. ಈಗ ವರು ತಮ್ಮ ಗ್ರಂಥಪ್ರಕಾಶಕರನ್ನೂ ಕೊಳ್ಳುವವರನ್ನೂ ಹುಡುಕ ಬೇಕಾದುದಿಲ್ಲ. ಪುಸ್ತಕ ಬರೆಯುವುದು, ಸರಕಾರಕ್ಕೆ ಕಳುಹಿಸುವುದು; ಉಳಿದುದನ್ನೆಲ್ಲಾ ಸರಕಾರವೇ ನೋಡಿಕೊಳ್ಳುತ್ತದೆ. ಮಾಸ್ಕೋದಿಂದ ಬರ್ಲಿನ್ನಿಗೆ ಬರುವಾಗ ಗಾಡಿಯಲ್ಲೊಬ್ಬ ಗ್ರಂಥಕರ್ತನನ್ನು ನೋಡಿದೆ. ನಲವತ್ತು ಸಾವಿರ ಶಬ್ದಕ್ಕೆ ಒಂದು ಪ್ರಮಾಣದಂತೆ ಪ್ರಭುತ್ವವು ಪ್ರತಿಫಲ ಕೊಡುತ್ತಿರುವುದಂತೆ. ನಾಟಕಕಾರರಿಗೂ, ಶಿಲ್ಪಿಗಳಿಗೂ ಗೌರವ ಕೊಡುತ್ತಿರುವರು. ಈಗ ರಷ್ಯನ್ ಕಲಾಕಾರರು ಇತರ ದೇಶದವರೆಲ್ಲರಿಗಿಂತಲೂ ಸುಖವಾಗಿ ಜೀವನ ನಡೆಸುತ್ತಿರುವರು. ಪ್ರಭುತ್ವವೂ ಪ್ರಜೆಗಳೂ ಸಹ ಅವರನ್ನು ಸನ್ಮಾನಿಸುತ್ತಿರುವರು.

---

## ೬

### ರೈಲುಗಳು

ಅಕ್ಟೋಬರು ಹೋಟಲಿನ ಎದುರಿನಲ್ಲಿಯೇ ಮಾಸ್ಕೊ ನಿಲುಮನೆ. ಇಲ್ಲಿಂದ ಬೋಲ್ಷ್ವಿಕ್ ರಾಜಧಾನಿ ಮಾಸ್ಕೊಕ್ಕೆ ರೈಲು ಹೋಗುವುದು. ನಾನು ಮಾರ್ಗದರ್ಶಿಕೆಯೊಡಗೂಡಿ ಕಾಲುನಡಿಗೆಯಲ್ಲಿ ಸ್ಟೇಶನಕ್ಕೆ ಹೊರಟೆನು. ಮಾರ್ಗದರ್ಶಿಕೆ ಗಾಡಿಯಲ್ಲಿ ನನಗಾಗಿ ಇದ್ದ ಹಾಸಿಗೆಯನ್ನು ಹುಡಿಕಿ

ಕಂಡುಕೊಂಡಳು. ರಷ್ಯದ ರೈಲಿನಲ್ಲಿ ಮೂರನೆ ತರಗತಿಯಲ್ಲೂ ಸಹ ಟಿಕೇಟಿನ ಹಣಕ್ಕಿಂತ ಸ್ವಲ್ಪ ಹೆಚ್ಚಿಗೆ ಕೊಟ್ಟರೆ ಹಾಸಿಗೆ ಸಿಗುತ್ತದೆ. ಇನ್ನೂ ಸ್ವಲ್ಪ ಹೆಚ್ಚು ಕೊಟ್ಟರೆ ಅಧಿಕಾರಿಗಳು ಶುಭ್ರವಾದ ಹಚ್ಚಡ, ದಿಂಬು, ಲೇಪನನ್ನೂ ಒದಗಿಸಿ ಕೊಡುವರು. ಸ್ವೀಡನ್ನೊಂದರಲ್ಲಿ ವಿನಾ ಮತ್ತೆಲ್ಲಿಯೂ ಪ್ರಯಾಣಿಕರಿಗೆ ಇಂತಹ ಸೌಕರ್ಯಗಳಿಲ್ಲ.

ಮಾರ್ಗದರ್ಶಿಕೆ ನನ್ನನ್ನು ಸುಖವಾಗಿ ಕುಳ್ಳಿರಿಸಿ ಹೊರಟು ಹೋದಳು. ಹೋಗುತ್ತಾ ಹೋಗುತ್ತಾ 'ನಿಮ್ಮ ದೇಶದಲ್ಲಿ ತಂದೆ ತಾಯಿಗಳೇ ಮಕ್ಕಳಿಗೆ ವರರನ್ನೂ ವಧುಗಳನ್ನೂ ಜೋಡಿಸುವರೆಂಬ ಮಾತನ್ನು ನಾನೆಂದಿಗೂ ಮರೆಯಲಾರೆ' ಎಂದಳು.

'ನಮಗೇನು ಅದರಿಂದ ಕಿಂಚಿತ್ತೂ ತೊಂದರೆಯಿಲ್ಲ. ನಿಮ್ಮ ವಿವಾಹ ಪದ್ಧತಿಯಿಂದ ನಿಮಗೆ ಸುಖವಿದೆಯೆ? ನಿಮಗೆ ಇಷ್ಟ ಬಂದ ಸಹಚರಿಗಳನ್ನು ನೀವೇ ಆರಿಸಿಕೊಂಡೂ ಇಷ್ಟು ವಿಚ್ಛೇದ ಏಕೆ?'

'ಅದೇ ಬಾಳು! ಬದುಕು ದಿನ ದಿನ ಒಡಲಾಗಬೇಕು; ಪರಿವರ್ತನೆಯೇ ಬಾಳಿನ ಗುರುತು.'

'ಆಗಲಿ—' ಎನ್ನುತ್ತಿರುವಾಗಲೇ ಗಾರ್ಡು ಸಿಳ್ಳು ಹಾಕಿದ. ನಾನು ಕೈಚಾಚುತ್ತಾ 'ನನ್ನ ಮಾತುಗಳಿಂದ ನಿಮಗೆ ಕಷ್ಟವಾಗಿದ್ದರೆ ಕ್ಷಮಿಸಿ; ಅವೆಲ್ಲವನ್ನೂ ಮರೆತು ಬಿಡಿ' ಎಂದೆನು.

'ನಾನು ನಿಮ್ಮನ್ನು ಎಂದಿಗೂ ಮರೆಯುವುದಿಲ್ಲ.' ಎಂದಳು.

ಗಾಡಿ ಹೊರಟಿತು. ರಷ್ಯದ ಗಾಡಿಗಳ ಕಿಟಿಕಿಗೆ ಎರಡೆರಡು ಕನ್ನಡಿ. ಗಾಡಿಯಲ್ಲಿ ಹವೆಯಿಂದ ಶಾಖೋತ್ಪತ್ತಿ ಮಾಡುತ್ತಾರೆ. ಗಾಡಿಯು ಕೂಲಿಕಾರರಿಂದಲೂ ರೈತರಿಂದಲೂ ತುಂಬಿರುವುದು. ಅಬ್ಬಾ! ಅವರ ಬಟ್ಟೆಗಳೆಷ್ಟು ಕೊಳಕು! ಗಾಡಿಯಲ್ಲಿ ಕೆಳಕ್ಕೆ ಥೂಯೆಂದು ಉಗುಳಿ ದೊಡ್ಡ ದೊಡ್ಡ ಬೂಟುಗಳಿಂದ ಒರಸುತ್ತಾರೆ. ಅವರ ಬಟ್ಟೆ ನೋಡಿದರೆ ಎಂದಿಗೂ ಅಗಸನ ಮುಖವನ್ನೇ ಕಂಡಂತಿಲ್ಲ. ಹೆಂಗಸರೂ ಗಂಡಸರೂ ಸೇರಿ ಜೊತೆಯಲ್ಲಿಯೇ ಕೂತಿರುವರು. ಅವರೆಲ್ಲ ಸಂಗಾತಿಗಳು. ಸರಕಾರದ ದೃಷ್ಟಿಯಲ್ಲಿ ಯಾರೊಬ್ಬರಿಗೂ ಏನೂ ವ್ಯತ್ಯಾಸವಿಲ್ಲ. ಈ ಸಹ

ವಾಸದಿಂದ ಆಕರ್ಷಣೆಯು ಕಡಿಮೆಯಾಗಬಹುದಾದರೂ ಸಹಜವಾದ ಕಾಮೇಚ್ಛೆಯು ಹೇಗೆ ಕಡಿಮೆಯಾಗುವುದೋ ಏನೋ!

ಇಲ್ಲಿಯು ರೈತರು ಕೂಲಿಕಾರರು ತಮ್ಮ ಕೀಳು ದಿನಗಳ ಚಟಗಳನ್ನು ಮರೆತಿಲ್ಲ. ಸ್ವಲ್ಪ ಜಾಗರೂಕತೆಯಿಂದ ಸಾಮಾನನ್ನು ನೋಡಿಕೊಳ್ಳುತ್ತಿರಬೇಕೆಂದು ಮಾರ್ಗದರ್ಶಿಕೆ ಎಚ್ಚರಿಕೆ ಕೊಟ್ಟು ಹೋದಳು. ಆದುದರಿಂದ ಚೊಕ್ಕಟವಾದ ಶಯ್ಯೆಯಿದ್ದರೂ ನಿದ್ದೆ ಮಾಡಲಾರದೆ ಹೋದೆ.

ನಾನು ಹತ್ತಿದ ಗಾಡಿ ರಷ್ಯಾದ ರೈಲುಗಾಡಿಗಳಲ್ಲಿ ಎಲ್ಲಕ್ಕಿಂತ ಬಹಳ ವೇಗವಾದುದು. 'ಲೆನಿನ್‌ಗ್ರಾಡ್'ನಿಂದ 'ಮಾಸ್ಕೋ' ವರೆಗೆ ಇರುವ ೪೦೫ ಮೈಲಿಗಳ ಪ್ರಯಾಣವನ್ನು ೧೨ ಗಂಟೆಗಳಲ್ಲಿಯೆ ಈ ಗಾಡಿ ಮುಗಿಸಿ ಬಿಟ್ಟಿತು.

---

೨

## ಲೆನಿನ್‌ನ ಸಮಾಧಿ

ಮಾಸ್ಕೋದಲ್ಲಿ ನನಗೆ ಸರಿಯಾದ ಸ್ವಾಗತ ನಡೆಯಿತು. ರೈಲಿನಿಂದ ಇಳಿಯುತ್ತಿದ್ದಂತೆಯೆ ಅಂದಗಿತ್ತಿಯಾದ ಚೆಲುವೆಯೊಬ್ಬಳು ನನ್ನ ಬಳಿಗೆ ಬಂದಳು.

'ನೀವೇನೇ ಬೆನರಜೀ ?'

'ಹೂಂ'

ನಾನು ತಲೆದೂಗಿದೆ. ಆಕೆ ನನ್ನನ್ನು ಮೋಟಾರಿನಲ್ಲಿ ಕೂಡಿಸಿಕೊಂಡು ಹೋಟಲಿಗೆ ಕರೆದುಕೊಂಡು ಹೋದಳು.

'ಮಾಸ್ಕೋ' ಅಥವಾ 'ಮಾಸ್ಕಾವಾ' 'ರೆಡ್‌ಸ್ಕ್ವೇರಗೂ' 'ಕ್ರೆಮಿನ್'ಗೂ ಹತ್ತಿರ ಇರುವ ನದೀ ತೀರದಲ್ಲಿ ಹೋಟಲು. ಬಹಳ ಆಧುನಿಕ ರೀತಿಯದು. 'ಲೆನಿನ್‌ಗ್ರಾಡಿ'ನಲ್ಲಿದ್ದ ಹೋಟಲುಗಳಿಗಿಂತಲೂ ದೊಡ್ಡದಿರಬೇಕು.

ನನಗೆ ತಿಂಡಿ ಚೀಟಿಗಳನ್ನು ಕೊಟ್ಟು ಇರಲಿಕ್ಕೆ ಒಂದು ಕೊಠಡಿ ತೋರಿಸಿದರು. ನನ್ನ ಕೊಠಡಿಯಿಂದ ನೋಡಿದರೆ 'ಮಾಸ್ಕಾವಾ'

ನದಿಯೂ 'ರೆಡ'ಸ್ಕ್ವೆರೂ ಕಾಣುತ್ತವೆ. ಇವೊತ್ತೇ ಏನಾದರೂ ನೋಡ ಬಯಸಿದರೆ ಕೂಡಲೆ ಊಟಮಾಡಿ ಹೊರಡಿ' ಎಂದು ಮಾರ್ಗದರ್ಶಿಕೆ ಸಲಹೆಇತ್ತಳು. ನಾನು ಕೈಕಾಲು, ಮುಖ ತೊಳೆದುಕೊಂಡು ಭೋಜನ ಶಾಲೆಗೆ ಹೋದೆನು.

ನಿನ್ನೆ ಲೆನಿನ್‌ಗ್ರಾಡಿನಲ್ಲಿ ಕಾಣಿಸಿದ ಆಸ್ಟ್ರೇಲಿಯಾ ದೇಶೀಯನು ಇಲ್ಲಿಯೂ ಕಂಡುಬಂದುದರಿಂದ ನನಗೆ ಬಹಳ ಸಂತೋಷವುಂಟಾ ಯಿತು. ಆತನು ಬಹಳ ವ್ಯಸನದಿಂದಲೂ, ನಿರಾಶೆಯಿಂದಲೂ ಇದ್ದಂತೆ ತೋರಿತು.

'ನಿಮ್ಮ ಸ್ನೇಹಿತರೆಲ್ಲಾ ಎಲ್ಲಿ?' ಎಂದೆ. 'ಸ್ನೇಹಿತರಾರು?'

'ನಿನ್ನೆ ನಿಮ್ಮ ಜತೆಯಲ್ಲಿ ಲೆನಿನ್‌ಗ್ರಾಡದಲ್ಲಿ ಕಂಡುಬಂದವರು?'

'ಅವರಿಗೂ ನನಗೂ ರಷ್ಯಾದಲ್ಲಿಯೇ ಪರಿಚಯವುಂಟಾದುದು. ಇಲ್ಲಿಗೆ ಬಂದ ಮೇಲೆ ಅಗಲಿಹೋದರು. ನಾವು ಸ್ನೇಹಿತರಲ್ಲ'

'ಏನು? ಎರಡು ದಿನಗಳಲ್ಲಿಯೇ ಬಹಳ ಇಳಿದು ಹೋಗಿರುವಿರಲ್ಲ.'

'ಹೌದು. ನಾನು ಬಹಳ ನಿಸ್ಸಹಾಯನಾಗಿದ್ದೇನೆ. ಬಿಕ್ಕೆಬೇಡು ವವನಿಗಿಂತ ಅಧಮನಾಗಿರುವೆನು. ನನ್ನ ಮನೋವ್ಯಾಕುಲವು ಪ್ರಾಯಶಃ ಶರೀರವನ್ನು ಬಳಲಿಸಿರಬಹುದು.'

ಆತನ ಮಾತು ನನಗೆ ಬಹಳ ಆಶ್ಚರ್ಯವನ್ನುಂಟುಮಾಡಿದುವು.

'ಏನು ನಡೆದಿದೆಯೋ ದಯವಿಟ್ಟು ಹೇಳುವಿರಾ? ನಿಮ್ಮ ಸಾಮಾನು ಗಳನ್ನು ಯಾರಾದರೂ ತೆಗೆದುಕೊಂಡುಹೋದರೇ? ಇಲ್ಲದಿದ್ದರೆ ನಿಮ್ಮಲ್ಲಿ ಇದ್ದ ಹಣವು ಎಲ್ಲಿಯಾದರೂ ಬಿದ್ದುಹೋಯಿತೇ?'

'ಅಲ್ಲವಣ್ಣಾ! ಅದೇನೂ ಅಲ್ಲ. ನಾನಿಲ್ಲಿ ಯಾವುದಾದರೂ ಕೆಲಸ ವನ್ನು ಹುಡುಕಿಕೊಳ್ಳೋಣನೆಂದು ಬಂದೆ. ನಾನೊಬ್ಬ ಇಂಜನಿಯರು, ರಷ್ಯಾದಲ್ಲೀಗ ಬಹಳ ಜನ ವಿದೇಶೀ ಇಂಜನಿಯರುಗಳಿರುವರು, ಇನ್ನೂ ಬೇಕಾಗಿರುವರು. ಆದುದರಿಂದ ಇಲ್ಲೇನಾದರೂ ಕೆಲಸ ಸಿಗುವುದೆಂಬ ಆಶೆಯಿಂದಿದ್ದೇನೆ.'

ಒಂದು ಗುಟುಕು ಟೀ ಕುಡಿದು ಮತ್ತೆ ಮೊದಲುಮಾಡಿದ.

'ಯಾರಾದರೂ ಇಲ್ಲಿ ಕೆಲಸ ಸಂಪಾದಿಸಿಕೊಳ್ಳುವ ಉದ್ದೇಶದಿಂದ

ಬರುತ್ತಿದ್ದರೆ, ಪ್ಯಾಸಪೋರ್ಟು ಅರ್ಜಿಯಲ್ಲಿ, ಆ ವಿಷಯವನ್ನು ನಮೂದಿಸ ಬೇಕೆಂದೂ ಇಲ್ಲವಾದರೆ ನೌಕರೀ ಕೊಡಲ್ಪಡಲಾರದೆಂದೂ ಈ ಮಧ್ಯೆ ಒಂದು ಹೊಸ ಶಾಸನವನ್ನು ಮಾಡಿರುವರು. ಆದರೆ, ಯಾರೂ ರಷ್ಯನರು ವಿದೇಶೀಯರಾರಿಗೂ ಕೆಲಸ ಕೊಡಲಾಗುವುದಿಲ್ಲವೆಂದೂ, ನೌಕರಿಗಾಗಿ ಹಾಕಿಕೊಳ್ಳುವ ಅರ್ಜಿಗಳ ಮೇಲೆ 'ವಿಸಾ' (ರಾಯಭಾರಿಯ ಸಹಿ) ಸಿಗಲು ಬಹಳ ಕಾಲ ಹಿಡಿಯುವುದೆಂದೂ ನನಗೆ ಹೇಳಿದ್ದರಿಂದ ನಾನು ಅರ್ಜಿಯಲ್ಲಿ ಅದನ್ನು ಬರೆಯಲಿಲ್ಲ. ಅಷ್ಟು ಕಾಲ ಕಾದುಕೊಂಡು ಕೂತಿರಲು ಬೇಕಾದಷ್ಟು ಹಣ ನನ್ನಲ್ಲಿಲ್ಲ. ಆದುದರಿಂದ ನಾನು ಸಾಧಾರಣ ಯಾತ್ರಿಕನ 'ವಿಸಾ' ಮಾತ್ರವನ್ನೇ ಸಂಪಾದಿಸಿಕೊಂಡು ಬಂದೆ. ಇಲ್ಲಿಗೆ ಬಂದ ಮೇಲೆ ನಾನು ಮಾಡಿದುದು ಬಲು ತಪ್ಪು ಕೆಲಸವೆಂದು ತಿಳಿಯಿತು.'

'ಇಲ್ಲಿ ಕೆಲಸಕ್ಕಾಗಿ ಪ್ರಯತ್ನ ಮಾಡಿದಿರೋ?'

'ಲೆನಿನ್‌ಗ್ರಾಡಿನಲ್ಲಿ ಪ್ರಯತ್ನಮಾಡಿದೆ; ಮಾಸ್ಕೋಗೆ ಹೋದರೆ ಸುಲಭವಾಗಿ ಸಿಗುವುದೆಂದರು; ಇಲ್ಲಿಗೆ ಬಂದೆ. ಅಧಿಕಾರಿಗಳು ಮೊದಲು ನನಗೆ ಆಶೆ ತೋರಿಸಿ ನನ್ನದು ಯಾತ್ರಿಕರ 'ವಿಸಾ' ಎಂದು ತಿಳಿದ ಕೂಡಲೇ ನಿನಗೇನೂ ಅವಕಾಶವಿಲ್ಲ ಹೊರಟು ಹೋಗೆಂದರು. ಈಗ ಮನೆಗೆ ಹಿಂತಿರುಗಿ ಹೋಗುವುದಕ್ಕಾದರೂ ಬೇಕಾದಷ್ಟು ಹಣವಿಲ್ಲ. ನಾನು ಇಂಗ್ಲೆಂಡಿನಲ್ಲಿರುವ ಕೆಲವರು ಸ್ನೇಹಿತರಿಗೆ ತಂತಿ ಕೊಟ್ಟಿರುವೆ. ಆದರೆ, ಅವರು ಇದ್ದೋ ಇಂತಹ ಮಿತ್ರರು—'

ಆತನ ಕಂಠವು ಬಿಗಿಯಾಯಿತು. ಮಾತನಾಡದೆ ಸುಮ್ಮನಾದ.

'ನಿಮ್ಮ ಕುಟುಂಬ ಎಲ್ಲಿ ಇರುವುದು?'

'ಆಸ್ಟ್ರೇಲಿಯಾದಲ್ಲಿ. ಪಾಪ, ನಿರ್ಭಾಗ್ಯರಾದ ನನ್ನ ನಾಲ್ಕು ಮಕ್ಕಳೂ ತಾಯಿಯೊಡನೆ ಬೆಂದು ಬೆಂಡಾಗುತ್ತಿರುವರೊ ಏನೋ.'

ಹಠಾತ್ತಾಗಿ ಕಡಿಯುತ್ತಿದ್ದ ರೊಟ್ಟಿಯ ಚೂರನ್ನು ತಟ್ಟೆಯಲ್ಲಿ ಬಿಸಾಡಿ, 'ನಿಮಗೆ ದೇವರೆಂದರೆ ವಿಶ್ವಾಸವಿದೆಯೆ?' ಎಂದು ಪ್ರಶ್ನಿಸಿದ.

ಈತನ ಉದ್ದೇಶವೇನೆಂದು ಯೋಚಿಸುತ್ತಿದ್ದಾಗಲೇ ನನ್ನ ಉತ್ತರ ತಿಳಿಯದೆಯೆ ಗಟ್ಟಿಯಾಗಿ ಕೇಕೆ ಹಾಕಿದನು.

'ಸುಳ್ಳು. ದೇವರಿಲ್ಲ. ನಾನು ಹೇಳಬಲ್ಲೆ. ಪ್ರಜೆಗಳೆಲ್ಲ ಈಶ್ವರನನ್ನು

'ಸರ್ವಪಿತ'ನೆನ್ನುವರು. ಆತನು ಎಲ್ಲರನ್ನೂ ಪ್ರೇಮಿಸುವನೆನ್ನುವರು. ಆದರೆ, ನಿಜಸ್ಥಿತಿ ಇದಕ್ಕೆ ಪೂರಾ ವಿರೋಧವಾಗಿದೆ ಆದುದರಿಂದಲೇ ದೇವರಿಲ್ಲ. ಒಂದು ವೇಳೆ ಇದ್ದರೂ ಆತನು ಪಕ್ಷಪಾತಿ. ಆತನು ಬಂಡವಾಳಗಾರರಿಗೂ ಇತರರನ್ನು ಸುಲಿದು ತಿನ್ನುವವರಿಗೂ ಮಾತ್ರ ಸಹಾಯ ಮಾಡುವನು.'

'ಪೂರ್ವಜನ್ಮದಲ್ಲಿ ಮಾಡಿದ ಕರ್ಮಾನುಸಾರವಾಗಿ ಈ ಜನ್ಮದಲ್ಲಿ ಮಾನವನು ಸುಖದುಃಖಗಳನ್ನನುಭವಿಸುವನೆಂದು ನಮ್ಮ ಮತಧರ್ಮ ಹೇಳುತ್ತಿವೆ.' ಎಂದು ಅನ್ನುವಷ್ಟರಲ್ಲಿ ಆತನು ಪ್ರಾರಂಭಿಸಿದ.

'ಪೂರ್ವಜನ್ಮವೇ? ಬರಿ ತಿಳಿಗೇಡಿತನ. ಎಂದೂ ಕಾಣದ ಈಶ್ವರ, ಪುನರ್ಜನ್ಮ, ಅದೃಷ್ಟ ಮೊದಲಾದ ಕುರುಡು ನೀತಿಯಿಂದ ಬಂಡವಾಳಗಾರರ ದುಷ್ಕೃತ್ಯಗಳನ್ನೂ, ದೌರ್ಜನ್ಯವನ್ನೂ ಮರೆಮಾಚಿ ಬಚ್ಚಿಟ್ಟರೆ ಲಾಭವೇನು? ತನಗೆ ತಾನು ನೆರವಾದರೆ ದೇವರೂ ನೆರವಾಗುತ್ತಾನಂತೆ. ನನ್ನನ್ನು ನೋಡಿರಿ. ನನಗೆ ಪ್ರಾಯವಿದೆ; ಆರೋಗ್ಯವಿದೆ. ಕೆಲಸ ಮಾಡಲು ಸಿದ್ಧವಾಗಿದ್ದೇನೆ; ಚೆನ್ನಾಗಿ ಓದಿಕೊಂಡಿದ್ದೇನೆ; ತಿಳುವಳಿಕೆ ಇದೆ. ಫಲವೇನು? ಬಂಡವಾಳಗಾರರ ಕೃತ್ರಿಮಗಳಿಂದ ತಿಂಡಿ ಇಲ್ಲದೆ ಸಾಯಬೇಕಾಗಿ ಬಂದಿದೆ.'

ಉದ್ರೇಕದಲ್ಲಿ ರೊಟ್ಟಿಯಿಂದೊಂದು ಚೂರನ್ನು ಕಡಿದು ಹಾಕಿದ. ಆತನ ತುಟಿಗಳು ದುಃಖದ ವೇದನೆಯಿಂದ ಕಂಪಿಸುತ್ತಿವೆ.

'ಆದರೆ, ರಷ್ಯಾ 'ಸಾಮಾನ್ಯ ಜನತೆ' ದೇಶವಲ್ಲವೇ? ಇಲ್ಲಿಯುವರು ನಿಮಗೇಕೆ ಕೆಲಸ ಕೊಡುವುದಿಲ್ಲ?'

'ಅವರಿಗೆ ಅನೇಕ ನಿಯಮಗಳಿವೆ. ನಾನದನ್ನು ಅತಿಕ್ರಮಿಸಿರುವೆ.'

'ನಿಮ್ಮ ತಾಯಿನಾಡು ಆಸ್ಟ್ರೇಲಿಯಾದಲ್ಲಿ, ನಿಮಗೆ ಕೆಲಸ ಸಿಗುವುದಿಲ್ಲವೋ?'

'ತಾಯಿನಾಡು ಹಾಳಾಯಿತು. ಇದೆಲ್ಲಾ ಒಂದು ದೊಡ್ಡ ಮೋಸದ ಬಲೆ, ಎಲ್ಲಾ ದೇಶಗಳಲ್ಲಿಯೂ—ಸ್ವತಂತ್ರ ದೇಶಗಳಾಗಲಿ ಪರತಂತ್ರ ದೇಶಗಳಾಗಲಿ ಒಳ್ಳೆ ವಸ್ತುಗಳನ್ನೆಲ್ಲಾ ಧನಿಕರೂ ಮಧ್ಯ

ಮರೂ ಎತ್ತಿಹಾಕುತ್ತಾರೆ. ಇನ್ನೂ ಸಾಮಾನ್ಯರಿಗೆ ಉಳಿಯುವುದು ಕಲ್ಲು ಮಣ್ಣು!'

ಮಾತಾಡದೆ ಒಟ್ಟಿಲಲ್ಲಿದ್ದ ಚಾ ಚಪ್ಪರಿಸಲಾರಂಭಿಸಿದೆ. ಅಕಸ್ಮಾತ್ತಾಗಿ ಆತನು ತನ್ನ ಬಲವಾದ ಬೆರಳಿಂದ ಅಡಿಗೆಯವನನ್ನು ತೋರಿಸುತ್ತ ಮೊದಲಿಟ್ಟನು.

'ಇವರ ಮುಖದಲ್ಲಿರುವ ಸಂತೋಷ ನೋಡಿ. ಇವರು ಮಹತ್ವದ ಭೋಗಗಳಾವುದನ್ನೂ ಅನುಭವಿಸುತ್ತಿಲ್ಲ; ಆದರೆ ತಿಂಡಿಯಿಲ್ಲದೆ ಸಾಯುವಗತಿ ಮಾತ್ರ ಬರುವುದಿಲ್ಲ. ಇವರು ಸಂಸಾರದ ಹಸಿವಿಗೆ ಬಳಲಿ ಹುಚ್ಚು ಮೊರೆಮಾಡಿ ಸಂಪಾದನೆಗಾಗಿ ಎದುರು ನೋಡುತ್ತಾ ಇರುವುದಿಲ್ಲ. ವಿಪ್ಲವ ಸಾಧಿಸಿದ ಮಹತ್ಕಾರ್ಯವೆಂದರೆ ಇದೇ.

'ಇಲ್ಲಿಯೂ ಕೆಲಸ ಕೊಡುವುದು, ತೆಗೆದುಹಾಕುವುದು ನಡೆಯುತ್ತಲೇ ಇದೆ. ಇಲ್ಲಿಯೂ ಮೇಲಿನಧಿಕಾರಿಗಳನ್ನು ತೃಪ್ತಿಪಡಿಸಬೇಕಾಗಿಲ್ಲವೇ?'

'ಮಿಸ್ಟರ್ ಬೇಸರ ಈ.'

ಹಿಂತಿರುಗಿ ನೋಡಿದೆನು. ಒಬ್ಬ ಯುವತಿಯೊಡನೆ ನನ್ನ ಮಾರ್ಗದರ್ಶಿಕೆ ನಿಂತಿದ್ದವಳು.

'ನೀವು ಸಿದ್ಧರಾಗಿರುವಿರಾ?'

'ನೀವು ಈಗಲ್ಲಿಗಾದರೂ ಹೊರಡುವಿರಾ?'

'ನಿಮಗಿಷ್ಟವಾದರೆ ಇದೋ ಈಕೆ ನಿಮ್ಮ ಹೊಸ ಮಾರ್ಗದರ್ಶಿ, ನೋಡಬೇಕಾದುದನ್ನೆಲ್ಲಾ ತೋರಿಸುವಳು. ಇನ್ನು ನನಗೆ ಅಪ್ಪಣೆ ಕೊಡಿ.'

ಇದು ಬಲು ಸಂಕಟದ ಕೆಲಸ. ನನ್ನ ಅದೃಷ್ಟ! ಪ್ರತಿಯೊಂದು ಸ್ಥಳದಲ್ಲಿಯೂ ನಿಲುಮನೆಯಿಂದ ನನ್ನನ್ನು ಕರೆದುಕೊಂಡು ಬರಲು ಒಳ್ಳೆ ಚೆಲುವೆಯೂ ಜಾಣೆಯೂ ಆದ ಯುವತಿ; ಆದರೆ ನನ್ನ ದುರದೃಷ್ಟ ಅವರನ್ನು ಬದಲಾಯಿಸುತ್ತಿದೆ. ಅವರ ಬದಲು ಬಂದವರು ಅಸಹ್ಯವಾಗಿಲ್ಲದಿದ್ದರೂ ಅಷ್ಟು ಅಂದವಲ್ಲ. ಈ ಹೊಸ ಮಾರ್ಗದರ್ಶಿಕೆ ೨೧ ವರುಷದ ಚಿಕ್ಕ ಹುಡುಗಿ. ಇಂಗ್ಲಿಷು ಚೆನ್ನಾಗಿ ಮಾತಾಡುವಳು. ಮೇಲು

ತುಟಿಯ ಮೇಲೆ ಗೋದಿ ಬಣ್ಣದ ಮೀಸೆ ರೇಖಾ ಮಾತ್ರವಾಗಿದೆ. ಯೂರೋಪಿಯನ್ ಸ್ತ್ರೀಯರಲ್ಲಿ ಇದು ಸರ್ವಸಾಮಾನ್ಯ.

ನಾವು 'ಕ್ರೆಮ್ಲಿನ್'ಗೆ ಸಮೀಪದಲ್ಲಿರುವ 'ಲೆನಿನ್' ಸಮಾಧಿಯನ್ನು ನೋಡಲು ಹೊರಟೆವು.

ಮಾಸ್ಕೋ ನದಿಯ ಸೇತುವೆ ದಾಟಿ, 'ರೆಡ್ ಸ್ಕ್ವೇರ್' ಸೇರಿದೆವು. ೧೯೧೭ರ ಮಹಾ ವಿಪ್ಲವದಲ್ಲಿ ಈ ಪ್ರದೇಶವು ರಕ್ತಮಯವಾದುದರಿಂದ ಇದಕ್ಕೀ ಹೆಸರು. ಒಂದು ಪಕ್ಕದಲ್ಲಿ 'ಕ್ರೆಮ್ಲಿನ್ನಿ'ನ ಪ್ರಾಕಾರದ ಗೋಡೆ ಇನ್ನೊಂದು ಮೂಲೆಯಲ್ಲಿ 'ಸೆಂಟ್ ಬೇಸಿಲ್ ಕೇಥೆಡ್ರಿಲ್' 'ಕ್ರೆಮ್ಲಿನ್ನಿ'ನಲ್ಲಿಯೇ ಪ್ರಸಿದ್ಧವಾದ ಮಾಸ್ಕೋ ಗಂಟೆಯಿರುವುದು.' ಎತ್ತರವಾದ ಗೋಡೆಗಳಿಂದ ಗಂಭೀರವಾಗಿ ದೊಡ್ಡ ಕೋಟೆಯಂತಿದೆ. 'ಕ್ರೆಮ್ಲಿನ್'. ಈ ಮಹಾಭವನವೇ ಬೋಲ್ಷೆವಿಕ್ ಪ್ರಭುತ್ವದ ಪ್ರಧಾನ ಕಾರ್ಯಾಲಯ.

'ಕ್ರೆಮ್ಲಿನ್'ನ ಪ್ರಕಾರ ಗೋಡೆಗೆ ಹತ್ತಿ 'ಲೆನಿನ್'ನ ಸಮಾಧಿ. ಬಹು ಬೆಲೆಯುಳ್ಳ ಶಿಲೆಗಳಿಂದ ಕಟ್ಟಲ್ಪಟ್ಟಿದೆ. ಹೆಚ್ಚು ಆಡಂಬರವಾಗಲಿ, ಚಿತ್ರವಿಚಿತ್ರದ ಕೆಲಸಗಳಾಗಲಿ ಇಲ್ಲ, ಅಂದಕಾಣಿಸುವುದು. ದೊಡ್ಡ ದೊಡ್ಡ ಕೆತ್ತಿದ ಕಲ್ಲುಗಳನ್ನು ಪಿರಿಮಿಡ್ಡುಗಳಂತೆ ಒಂದರಮೇಲೊಂದನ್ನು ಹೇರಿರುವರು. ಒಳಗೆ ಹೋಗಲು ಇರುವ ಚಿಕ್ಕ ಬಾಗಿಲಲ್ಲಿ ಇಬ್ಬರು ಸಿಪಾಯಿಗಳು ಕಾಯುತ್ತಿರುವರು. ಈ ಸಮಾಧಿಯನ್ನು ನೋಡಲು, ನಿಯಮಿತವಾದ ಕಾಲಕ್ಕೆ ಮುಂಚೆಯೇ ಬಂದು, ಸಾವಿರಗಟ್ಲೆ ಜನರು ಆ ಮಂಜಿನಲ್ಲಿ ನೆನೆಯುತ್ತಾ ಹಾಗೇ ನಿಂತಿರುವರು. ಬಾಗಿಲು ತೆಗೆದ ಕೂಡಲೆ ತಮ್ಮ ಪಂಕ್ತಿದಾತನೂ ಸಮಾಜವಾದ ಸಿದ್ಧಾಂತಪ್ರವರ್ತಕನೂ ಆದ 'ಲೆನಿನ್'ನ ಮೃತಕಳೇಬರವನ್ನು ನೋಡಲು ಉತ್ಸಾಹದಿಂದ ಓಡುತ್ತಾ ಬರುವರು. ಕೈಚೀಲ, ಕೈಬೆತ್ತ, ಕೊಡೆ ಇವೆಲ್ಲವನ್ನು ಹೊರಗೆ ಬಿಟ್ಟುಬರಬೇಕು. ಉಟ್ಟ ಬಟ್ಟೆಗಳಲ್ಲದೆ ಒಳಕ್ಕೇನನ್ನೂ ತೆಗೆದುಕೊಂಡು ಹೋಗಕೂಡದು.

ನಾನೂ ಸಹ ಈ ಜನರಲ್ಲಿ ಸೇರಿ ಒಳಕ್ಕೆ ನುಗ್ಗಿದೆ. ಬಾಗಿಲು ದಾಟಿ ಬಲಗಡೆಗೆ ತಿರುಗಿ ಮೆಟ್ಟಲಿಳಿದೆ. ಅಲ್ಲಿ ಸ್ವಲ್ಪ ಕತ್ತಲು. ಎರಡು ಸುತ್ತು

ಗಳನ್ನು ಸುತ್ತಿ ನಾವು ಕೆಳಗಿನ ಅಂತಸ್ತಿಗೆ ಹೊರಟೆವು. ಅಲ್ಲಿ ಕನ್ನಡಿಯ ಪೆಟ್ಟಿಗೆಯಲ್ಲಿ ಸುರಕ್ಷಿತವಾಗಿ 'ಲೆನಿನ್ನಿ'ನ ಶವವನ್ನಿಡಲಾಗಿದೆ. ಸಿಪಾಯಿಯೊಬ್ಬನು ಜನರಾರೂ ಪೆಟ್ಟಿಗೆಯ ಮೇಲೆ ನುಗ್ಗಿಕೊಂಡು ಬಾರದಂತೆ ಕಾದುಕೊಂಡಿರುವನು. ಬಹಳ ಭಕ್ತಿಯಿಂದ ನಾವು ಅದರ ಸುತ್ತಲೂ ತಿರುಗಿದೆವು. ತರುವಾಯ ಜನಸಂದಣಿ ಹೆಚ್ಚಾದುದ ರಿಂದ ವಿಧಿಯಿಲ್ಲದೆ ಎರಡನೆಯ ಬಾಗಲಿಂದ ಹೊರಗೆ ಬಂದೆವು. ಇಷ್ಟು ಜನ ಬಂದರೂ ಗಲಾಟೆ, ಗದ್ದಲ, ಗುಸಗುಸು ಯಾವುದೂ ಇಲ್ಲ. ಪ್ರತಿಯೊಬ್ಬರೂ ಗಂಭೀರತೆಯ ಸೆಳವಿಗೆ ಸಿಗುತ್ತಿರುವರು. ನಾನು 'ಲೆನಿನ್'ನ ಪ್ರತಿಬಿಂಬವನ್ನು ನೋಡಿದ್ದೆ. ಆದರೆ, ಎಂದೂ ಆತನ ಶರೀರವನ್ನೂ-ಅಸ್ಥಿಮಾಂಸ ಪೂರಿತವಾದ ಶರೀರವನ್ನೂ-ನೋಡಬಲ್ಲೆ ನೆಂದುಕೊಂಡಿರಲಿಲ್ಲ. 'ಲೆನಿನ್' ಸತ್ತುಹೋದ ಇಷ್ಟು ವರ್ಷಗಳಾ ದರೂ ಬದುಕಿದ್ದಾಗ ಆತನ ಶರೀರವು ಹೇಗಿದ್ದಿತೋ ಹಾಗೆಯೇ ನೋಡಿದೆ. ವಿಜ್ಞಾನ ಶಾಸ್ತ್ರವು ಅಸಂಭವವನ್ನೂ ಸಂಭವವಮಾಡಿ ಹಾಕಿದೆ. ಫ್ರೆಂಚು ಜನರಂತೆ ಕತ್ತರಿಸಿದ್ದ ಗಡ್ಡವು ಇಂದಿಗೂ ಆತನ ಮುಖದಲ್ಲಿ ಶೋಭಿಸುತ್ತಿರುವುದು. ಬೋಳು ತಲೆ, ವಿಶಾಲವಾದ ಮುಖ; ಬಹುಶಃ ಹೆಚ್ಚು ಆಲೋಚನೆ ಮಾಡಿದುದರಿಂದಲೇ ಇರಬಹುದು. ಜಾರ್ಜ್ ಬರ್ನಾರ್ಡ್ಷಾ 'ನೋಡಿ, ಮಹಾರಾಜರ ಕೈಗಳಂತಿರುವುವು.' ಎಂದ ನಂತೆ. ಯಾವುದೋ ಒಂದು ದೊಡ್ಡ ಸಿಂಹವೂ ನಿದ್ರೆಮಾಡುತ್ತಿರುವಂ ತೆಯೂ ಬೇಗನೆ ಎದ್ದು, ರೆಡ್ಸ್ಕ್ವೇರ್‌ನಲ್ಲಿ ನೆರೆದ ಸಭೆಯಲ್ಲಿ ಗಂಭೀರ ಸ್ವರದಿಂದ, ಕೆಂಡಕಾರುವನೋ ಎನ್ನಿಸುವುದು. ಯಾವ ದೇವರ ಕೃಪೆ ಯಿಂದಾದರೂ 'ಲೇನಿನ್' ಕಳೇಬರಕ್ಕೆ ಜೀವ ಹಿಂದಿರುಗಿ ಬಂದರೆ ರಷ್ಯಾ ಏನು ಮಾಡಿತೋ !

ನ್ಯಾಯಾಸ್ಥಾನ

ನ್ಯಾಯಾಲಯು ಅಷ್ಟೇನೂ ದೊಡ್ಡದಲ್ಲ. ಒಂದೇ ಕ್ರಮದ ಉಡು ಪಿನ ಜವಾನರು ಅಲ್ಲಿ ಕಂಡುಬರಲಿಲ್ಲ. ದೊಡ್ಡ ದೊಡ್ಡ ಜೇಬುಗಳುಳ್ಳ ಗೌನು ಹಾಕಿಕೊಂಡಿರುವ ವಕೀಲರೂ ಕಾಣಿಸಲಿಲ್ಲ. ಆ ಕೋರ್ಟನ್ನು ನೋಡಿದರೆ ಯಾವುದೋ ಒಂದು ಪಾಠಶಾಲೆಯೋ ಸಭಾಭವನವೋ ಅನಿಸುತ್ತದೆ. ಮುಖ್ಯ ನ್ಯಾಯಾಧೀಶ, ಆತನ ಸಹಚರರಿಬ್ಬರು— ಅವರಲ್ಲೊಬ್ಬಳು ಹೆಂಗುಸು—ಎತ್ತರವಾದ ಸ್ಥಳದಲ್ಲಿ ಕುಳಿತಿರುವರು. ಅವರೆದುರಿಗೆ ಒಟ್ಟೆ ಕಾಣದ ಮೇಜು. ಫಿರ್ಯಾದಿಗಳು, ಅಪರಾಧಿಗಳು, ನೋಡಲು ಬಂದವರು, ಸಾಕ್ಷಿಗಳು, ಎಲ್ಲರೂ ಅಲ್ಲಿರುವ ಬೆಂಚಿಗಳ ಮೇಲೆ ಕುಳಿತಿರುವರು.(ಅವರಿಗೂ ಇವರಿಗೂ ಮಧ್ಯಮರದ ಕಟಾಂಜನ· ನ್ಯಾಯಾಧೀಶರದು ಸಾಧಾರಣ ಉಡುವು) ಅವರ ಚಿಕ್ಕ ಚಿಕ್ಕ ಜುಟ್ಟು, ಬಿಸಿಲಿನಲ್ಲಿ ಬಾಡಿದ ಮುಖ, ಗಾತ್ರವಾದ ಕೈ, ನೋಡಿದರೆ ಅವರಿಗೂ ಕೂಲಿಕಾರರಿಗೂ ಏನೂ ವ್ಯತ್ಯಾಸವಿಲ್ಲ. ಸ್ತ್ರೀ ನ್ಯಾಯಾಧೀಶಳು ತಲೆಗೆ ರುಮಾಲು ಸುತ್ತಿಕೊಂಡಿದ್ದಂತೆ ನನಗೆ ಜ್ಞಾಪಕ.

ಒಬ್ಬ ಹೆಂಗಸು ಕಟಾಂಜನದ ಮೇಲೆ ಬಗ್ಗಿ ಏನನ್ನೋ ಉದ್ರೇಕ ಪೂರಿತವಾಗಿ ಹೇಳುತ್ತಿರುವಳು. ಒಂದೊಂದು ಸಲ ಕೈಗಳನ್ನು ಅತ್ತಿತ್ತ ತಿರುಗಿಸುತ್ತಿರುವಳು. ಒಂದೊಂದು ಸಲ ಕಣ್ಣೀರು ಸುರಿಸುತ್ತಿರುವಳು. ಸ್ವಲ್ಪ ಹೊತ್ತಾದ ಮೇಲೆ ಅಳಲಾರಂಭಿಸಿದಳು.

'ನಡೆದ ವಿಚಾರವೇನು?' ಎಂದು ನಾನು ಮಾರ್ಗದರ್ಶಿಕೆಯನ್ನು ಕೇಳಿದೆ.

'ಮಗನ ಪೋಷಣೆಗಾಗಿ ಗಂಡನ ಮೇಲೆ ದಾವಾ ಮಾಡಿರುವಳು. ಬಹುಶಃ ತಂದೆಯು ಈ ಮಗನು ನನಗೆ ಹುಟ್ಟಲಿಲ್ಲವೆಂದು ಅನ್ನುತ್ತಿರುವ ನೇನೋ!'

ಒಳ್ಳೆ ಉತ್ಸಾಹಕರ ವ್ಯವಹಾರ! ಈ ವಿಧದ ವ್ಯವಹಾರ ಬೋಲ್ಷ

ವಿಕ್ ಪ್ರಭುತ್ವದ ನೂತನ ಸಿದ್ಧಾಂತಗಳ ಪರಿಣಾಮ. ವೈವಾಹಿಕ ವಿಧಿಯನ್ನು ಸಂಪೂರ್ಣವಾಗಿ ತೆಗೆದುಹಾಕಿ ಸ್ತ್ರೀಪುರುಷರಿಗೆ ಗಾರ್ಹಸ್ಥ್ಯ ಜೀವನದ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಕೊಟ್ಟುದರ ಫಲವಾಗಿ ಇಂತಹ ಕಷ್ಟತರವಾದ ಚಿತ್ರವಿಚಿತ್ರವಾದ ವ್ಯವಹಾರಗಳುತ್ಪನ್ನವಾಗಿರುವುವು. ಆಕೆಗೆ ಮತ್ತೊಬ್ಬ ಯುವಕನ ಸಂಗಡ ಸಂಬಂಧವಿರುವುದೆಂದೂ ಆ ಹುಡುಗನು ತನಗೆ ಹುಟ್ಟಲಿಲ್ಲವೆಂದೂ ತಂದೆ ಹೇಳಿರುವನು. ಆ ಯುವಕನ ವಾಜ್ಮೂಲ ತೆಗೆದುಕೊಳ್ಳಲಾಯಿತು.

ಎರಡನೆಯದರಲ್ಲಿಯೂ ಫಿರ್ಯಾದಿ ಸ್ತ್ರೀಯೆ. ತನ್ನ ಗಂಡನ ಸಂಗಡ ವಿವಾಹವಿಚ್ಛೇದನ ಮಾಡಿಕೊಂಡಾಗ ಆತನ ಆದಾಯದಲ್ಲಿ ಮೂರನೆಯದೊಂದು ಭಾಗವನ್ನು ಆಕೆಗೆ ಕೊಡಬೇಕೆಂದು ಡಿಕ್ರೀ ಕೊಟ್ಟರು. ಈಗ ಆತನ ಸಂಬಳ ಬಹಳ ಜಾಸ್ತಿಯಾಗಿದೆ. ಆತನು ಡಿಕ್ರೀ ದಿವಸ ಬರುತ್ತಿದ್ದ ಸಂಬಳದ ಮೂರನೆಯೊಂದು ಭಾಗವನ್ನು ಮಾತ್ರ ಕೊಡುತ್ತಿರುವನು. ಆತನ ಈಗಿನ ಸಂಪಾದನೆಯಲ್ಲಿ ಮೂರನೆಯೊಂದು ಭಾಗವನ್ನು ಕೊಡಿಸಬೇಕೆಂದು ಆಕೆಯ ವಾದ. ಈ ಕೇಸನ್ನು ವಿಚಾರ ಮಾಡಲು ಒಟ್ಟಿಗೆ ೧೫ ನಿಮಿಷ ಹಿಡಿಯಿತು. ನ್ಯಾಯಾಧಿಪತಿಗಳು ಆಲೋಚನೆಗಾಗಿ ಎದ್ದರು.

ಈ ಕೊಠಡಿ ಚಿಕ್ಕದಾಗಿದೆ. ಅದರಲ್ಲಿರುವ ಮೇಜಿನ ಮೇಲೆ ಪುಸ್ತಕಗಳೂ ಕಾಗದಪತ್ರಗಳೂ ಇವೆ. ಅಲ್ಲಿ ಒಬ್ಬ ಸ್ತ್ರೀ ಕಾರ್ಯದರ್ಶಿ.

ನಾನು ಕೇಳಿದೆ: 'ಕೋರ್ಟು ಫೀಜನ್ನು ಯಾವ ಲೆಕ್ಕದ ಮೇಲೆ ತೆಗೆದುಕೊಳ್ಳುತ್ತೀರಿ?'

'ನಮ್ಮ ದೇಶದಲ್ಲಿ ಕೋರ್ಟು ಫೀಜು ಇಲ್ಲ. ಕಡುಬಡವರೂ ಈ ಕೋರ್ಟಿನಲ್ಲಿ ನ್ಯಾಯ ಹೊಂದಬೇಕೆಂಬುದೇ ನಮ್ಮ ಆಶಯ. ಅಂತಹುದರಲ್ಲಿ ಕೋರ್ಟು ಫೀಜೆಂದಿಟ್ಟು, ಬಡವರನ್ನು ಕೋರ್ಟಿಗೆ ದೂರಮಾಡುವೆವೇ?' ಈ ಮಾತು ವಿಶ್ವಸನೀಯವಾಗಿಯೂ ಉಚಿತವಾದುದಾಗಿಯೂ ತೋರಿತು.

'ಕ್ರಿಮಿನಲು ಕೇಸುಗಳಿಗೆ ಬೇರೆ ಕೋರ್ಟಿರುವುದೇ?'

'ಇಲ್ಲ, ಎಲ್ಲಕ್ಕೂ ಒಂದೇ ಕೋರ್ಟು.'

'ನೀವು ಕೊಟ್ಟ ತೀರ್ಮಾನದ ಮೇಲೆ ಪ್ರಜೆಗಳಿಗೆ ಅಪೀಲಿಗೆ ಹೋಗಲು ಅವಕಾಶವಿದೆಯೇ?'

'ಅವರು ಮೇಲಿನ ಕೋರ್ಟಿಗೆ ಹೋಗಬಹುದು.'

'ನಿಮ್ಮ ನ್ಯಾಯವಿಧಾನದ ವಿಚಾರ ಸ್ವಲ್ಪ ಹೇಳುವಿರಾ?'

ನನ್ನ ಮಾರ್ಗದರ್ಶಿಕೆಯು ಸ್ವಲ್ಪ ಹೊತ್ತಿನವರೆಗೆ ಜಡ್ಜಿಗಳ ಸಂಗಡ ಮಾತನಾಡಿದಳು.

'ಎಲ್ಲಕ್ಕಿಂತ ಕೆಳಗಿನ ಕೋರ್ಟು ಪ್ರಜೆಗಳ ಕೋರ್ಟು (People's court). ಅದಕ್ಕೆ ಎಲ್ಲಾ ಅಧಿಕಾರಿಗಳೂ ಉಂಟು. ಅದಕ್ಕೆ ಮಿತಿಯಿದೆ. ಈ ಕೋರ್ಟಿನ ತೀರ್ಮಾನಗಳ ಮೇಲೆ ಪ್ರಾಂತೀಯ ನ್ಯಾಯಾಸ್ಥಾನಗಳಲ್ಲಿ ಅಪೀಲು ಮಾಡಿಕೊಳ್ಳಬಹುದು. ಪ್ರಾಂತೀಯ ನ್ಯಾಯಸ್ಥಾನಗಳಿಗೆ ಅಪೀಲು ಹಿಡಿಯುವುದಲ್ಲದೆ, ಕೆಳಗಿನ ಕೋರ್ಟುಗಳನ್ನು ತನಿಖೆ ಮಾಡಲು ಅಧಿಕಾರ ಉಂಟು. ಪ್ರಜಾ ನ್ಯಾಯಾಸ್ಥಾನಗಳವರು ಇವರ ಒಳಿಗೆ ತೀರ್ಮಾನಕ್ಕಾಗಿ ಕಳುಹಿಸಿದ ಕಷ್ಟವಾದ ಸಮಸ್ಯೆಗಳನ್ನು ಈ ಕೋರ್ಟು ತಮ್ಮ ಸಾಧಾರಣ ಸಭೆಯಲ್ಲಿ ವಿಚಾರಿಸುವುದು.

ಇದು ಬಹಳ ಆಶ್ಚರ್ಯಕರವಾದ ಸಂಗತಿ.

'ಹಿಂದಿನ ಕೇಸುಗಳ ಫೈಲುಗಳೊಂದೂ ನಿಮ್ಮ ಬಳಿ ಇರುವುದಿಲ್ಲವೇ?' ಪ್ರಜಾ ನ್ಯಾಯಾಸ್ಥಾನದ ಚಿಲ್ಲರೆ ವ್ಯವಹಾರಗಳನ್ನು ಇಲ್ಲಿಗೇಕೆ ಕಳುಹಿಸುತ್ತಾರೆ?'

'ಇಲ್ಲ. ಫೈಲ್ಸ್ ಇರಬೇಕೆಂಬ ನಿಯಮವಿಲ್ಲ. ಜಡ್ಜಿಗಳ ಸಹಜವಾದ ಆಲೋಚನೆಗೆ ಅವು ಅಡ್ಡಿ; ಆ ಪದ್ಧತಿಯನ್ನು ತೆಗೆದುಹಾಕಿರುವೆವು.'

'ಮುಂದಕ್ಕೇನು?'

'ಪ್ರಾಂತೀಯ ನ್ಯಾಯಾಸ್ಥಾನಕ್ಕೆ ಮೇಲ್ಪಟ್ಟು R.S.F.S.R. ರಷ್ಯನ್ ಸೋಷಲಿಸ್ಟ್ ಫೆಡರೇಷನ್ ಸೋವಿಯಟ್ ರಿಪಬ್ಲಿಕ್‌ನವೇ ಕೊನೆಯ ನ್ಯಾಯಾಸ್ಥಾನವಿರುತ್ತದೆ.'

'ಈ ದೇಶದ ಪ್ರಜಾತಂತ್ರ ಪ್ರಭುತ್ವಗಳೆಲ್ಲವೂ ಸರ್ವ ಸ್ವತಂತ್ರ್ಯವಾದುವೇನು?'

'ಆ. ಏಳು ಪ್ರಜಾಪ್ರಭುತ್ವಗಳಿಗೂ ನ್ಯಾಯ, ಶಾಸನ, ಸಂಬಂಧ

ಗಳಲ್ಲಿ ಸಂಪೂರ್ಣ ಸ್ವಾತಂತ್ರ್ಯ, ಕೆಲವು ವಿಷಯ ಕೇಂದ್ರ ಶಾಸನಾಧಿಕಾರ ದಲ್ಲಿ ಅಂದರೆ ಯು. ಯಸ್. ಎಸ್. ಆರ್. ನ ಸುಪ್ರೀಂ ಕೋರ್ಟ್ಟ ಕ್ರಿಮಿ ನಲ್ ಕೋರ್ಟ್ರ್ Gಜಿ. ಪಿ. ಯು ಗಳ ಅಧಿಕಾರದಲ್ಲಿರುವುವು.'

'ಓ! ಜಿ. ಪಿ. ಯು? ಆಗಾಗ ಕೇಳುತ್ತಿರುವ ಆ ಭಯಂಕರವಾದ ಜಿ. ಪಿ. ಯು (ಗೂಢಚಾರಿ ದಳ) ಯೇನು?'

'ಜಿ. ಪಿ. ಯು ಭಯಂಕರವಾದುದೆಂದು ನಿಮಗೆ ಹೇಗೆ ಗೊತ್ತು?' ಎಂದು ಆಕೆಯು ನಗುನಗುತ್ತ ಕೇಳಿದಳು.

'ಭಯಂಕರವಾದುದೇ? ಅದನ್ನು ಕುರಿತು ಅನೇಕ ಪುಸ್ತಕಗಳಲ್ಲಿ ಓದಿರುವೆನು. ನೀವು ಹಾಗೆ ಭಾವಿಸುವುದಿಲ್ಲವೇನು?'

'ನಿಜ ಸರಕಾರದ ವಿರೋಧಿಗಳ ವಿಷಯದಲ್ಲಿ ಇವು ಭಯಂಕರ.'

'ಯಾವುದೋ ಒಂದುಪಾಯದಿಂದ ಪ್ರಜಾಭಿಪ್ರಾಯವನ್ನು ಅಡಗಿ ಸುತ್ತಿರುವುದು ನಿಜವೇ ಅಲ್ಲವೇ?'

'ಅದು ಹೇಗೆ? ಸೋಷಲಿಸ್ಟ್ ಸರಕಾರಕ್ಕೆ ವಿರೋಧವಾಗಿ ಕೃತ್ರಿಮ ಕಾರ್ಯ ನಡೆಯಿಸಲು ನಾವು ಅವಕಾಶ ಕೊಡಲಾರೆವು. ಈ ಯೂನಿಯನ್ನಿನ ಒಳಗೂ ಹೊರಗೂ, ಈ ಜನಸಾಮಾನ್ಯರ ಅಧಿಕಾರ ವನ್ನು ಧ್ವಂಸ ಮಾಡಬೇಕೆಂದು ಪ್ರಯತ್ನಿಸುತ್ತಿರುವವರಿರುವರೆಂದು ನೀವು ಬಲ್ಲಿರಾ?'

'ಹಾಗಾದರೆ ಕ್ರಾಂತಿಕಾರರನ್ನು ಪೀಡಿಸಿದನೆಂದು ಆ ಝಾರ ನನ್ನು ನಿಂದಿಸಲೇಕೆ? ಆ ಝಾರನ ಸರಕಾರಕ್ಕೂ ಈ ಸೋವಿಯಟ್ ಪ್ರಭುತ್ವಕ್ಕೂ ವ್ಯತ್ಯಾಸವೇನಿದೆ? ಈ ಎರಡು ಸರಕಾರಗಳೂ ಆಲೋ ಚನಾಪರರನ್ನು ಅಡಗಿಸುತ್ತಿವೆ. ಇನ್ನು ನೀವು ವ್ಯಕ್ತಿ ಸ್ವಾತಂತ್ರ್ಯ ವನ್ನು ಕುರಿತು ಹೇಳಿಕೊಳ್ಳುವುದೇತಕ್ಕೆ?'

ಈ ಪ್ರಶ್ನೆಗಳಿಂದ ಆಕೆಗೆ ಬಹಳ ಉದ್ರೇಕವುಂಟಾಯಿತು. ಆಕೆಯ ಚೆಲವಾದ ಗುಲಾಬಿ ಬಣ್ಣದಕೆನ್ನೆ ಕೆಂಪೇರಿದುವು. ಕಣ್ಣು ದೊಡ್ಡವಾಗಿ ಪ್ರಜ್ವಲಿಸಿದುವು.

'ಆದರೆ, ಈಗ ಜನಸಾಮಾನ್ಯಕ್ಕೆ ತನ್ನಧಿಕಾರವನ್ನೂ ವ್ಯಕ್ತಪಡಿ ಸಲು ಅವಕಾಶವಿದೆ. ಜನಕೋಟಿಗೆ ವಿರೋಧಿಗಳಾದ ಶ್ರೀಮಂತರ

ಬಾಯಿ ಮುಚ್ಚಿದ್ದೇವೆ. ಅದರಲ್ಲಿ ನಷ್ಟವೇನೂ ಇಲ್ಲ. ಅವರು ಹೇಳ ಬೇಕಾದುದನ್ನೆಲ್ಲಾ ಈಗಾಗಲೆ ಹೇಳಿರುವರು. ಇನ್ನು ಅವರು ಬಾಯಿ ಮುಚ್ಚಿಕೊಳ್ಳಬೇಕಾದುದೇ.'

'ಪ್ರಜಾತಂತ್ರ ಪ್ರಭುತ್ವವಳ, ಸಿವಿಲು-ಮಿಲಿಟರಿ-ಕೋರ್ಟುಗಳಿಗೇನು ಕೆಲಸ ?'

'ಪ್ರಜಾತಂತ್ರ ಪ್ರಭುತ್ವವುಳ್ಳ ಸುಪ್ರೀಂ ಕೋರ್ಟಿಗೆ ಮೂರು ಕೆಲಸಗಳಿವೆ. (೧) ಅಪೀಲು ಕೇಳುವುದು. (೨) ಕೆಲವು ಮುಖ್ಯವಾದ ಹೊಸ ಕೇಸುಗಳನ್ನು ವಿಚಾರಿಸುವುದು. (೩) ನ್ಯಾಯಶಾಸನಗಳಿಗೆ ಅರ್ಥವಿವರಣೆ ಮಾಡುವುದು. ಪ್ರಾಂತೀಯ ನ್ಯಾಯಾಸ್ಥಾನಗಳ ತೀರ್ಪಿನ ಮೇಲೆ ಸುಪ್ರೀಂ ಕೋರ್ಟು ಪುನರ್ವಿಚಾರಣೆಮಾಡಿ ತೀರ್ಮಾನಕೊಡುತ್ತದೆ. ಈ ತೀರ್ಮಾನಕ್ಕೆ ಅಪೀಲಿಲ್ಲ. ಸುಪ್ರೀಂ ಕೋರ್ಟಿನ ಸಭಾಪತಿಗಳಲ್ಲಿ ಕೆಲವರು ವ್ಯತಿರೇಕಾಭಿಪ್ರಾಯ ಪಟ್ಟಾಗ ಮತ್ತೆ ವಿಚಾರಣೆ ನಡೆಸುವರು. ಅಂತಹ ಸಮಯದಲ್ಲಿ ಕೋರ್ಟಿನ ಸಾಧಾರಣ ಸಮಾವೇಶದಲ್ಲಿ ಇದನ್ನು ವಿಚಾರಣೆಗೆ ತಂದು ತೀರ್ಮಾನ ಮಾಡುತ್ತಾರೆ. ಪ್ರತಿಯೊಬ್ಬನೂ ಎಂದಿಗೂ ಆ ಕೋರ್ಟಿಗೆ ಅಪೀಲ ಮಾಡಲಾರ. ಸುಪ್ರೀಂ ಕೋರ್ಟು ತಾನೇ ಇಷ್ಟಪಟ್ಟಾಗ, ಪ್ರಜಾತಂತ್ರಾಧ್ಯಕ್ಷನು ಯಾವುದಾದರೂ ಪ್ರತ್ಯೇಕ ವಾಜ್ಯವನ್ನೂ ಕಳುಹಿಸಿದಾಗ ಮಾತ್ರವೇ ಈ ಕೋರ್ಟು ಸಮಾವೇಶವಾಗಿ ಪುನಃಪರಿಶೀಲನೆ ಮಾಡುತ್ತದೆ. ಯು. ಎಸ್. ಎಸ್. ಆರ್. ನ ಸುಪ್ರೀಂ ಕೋರ್ಟು ಏಳು ಪ್ರಜಾತಂತ್ರಗಳ ಸುಪ್ರೀಂ ಕೋರ್ಟುಗಳ ತೀರ್ಮಾನಗಳನ್ನು ವ್ಯತ್ಯಾಸ ಮಾಡಬಲ್ಲದು. ಎರಡು ಪ್ರಜಾತಂತ್ರಗಳಿಗೆ ಯಾವ ವಿಚಾರದಲ್ಲಾಗಲೀ ಜಗಳ ಬಂದಲ್ಲಿ ಅವುಗಳನ್ನು ಈ ಕೋರ್ಟು ವಿಚಾರಿಸುತ್ತದೆ. ಪ್ರಜಾತಂತ್ರಗಳ ಕಾರ್ಯನಿರ್ವಾಹಕ ಸಭೆ ( Central Executive Committes ) ಗಳ ನಿರ್ಣಯಗಳನ್ನೂ ಸಹ ವ್ಯತ್ಯಾಸ ಪಡಿಸಲು ಈ ಕೋರ್ಟಿನ ಸಾಮಾನ್ಯ ಸಮಾವೇಶಕ್ಕೆ ಅಧಿಕಾರವುಂಟು.'

ಈ ದೀರ್ಘೋಪನ್ಯಾಸದ ತರುವಾಯ ಆಕೆಯು ಸ್ವಲ್ಪ ಸುಮ್ಮನಿದ್ದಳು. ಆಕೆಯು ಆಯಾಸ ಪರಿಹಾರ ಮಾಡಿಕೊಳ್ಳಲೆಂದು ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಕೇಳಿದೆ.

'ಕೇಂದ್ರಕಾರ್ಯ ನಿರ್ವಾಹಕ ಸಭೆಗಳೆಂದರೆ ?'

'ಪ್ರಭುತ್ವದ ನಿಯಮ, ಶಾಸನ ಮಾಡುವ, ಕಾನೂನು ಏರ್ಪಡಿಸುವ ಸಂಸ್ಥೆ.'

'ಸಂಬಳಗಳು ಹೇಗಿರುತ್ತವೆ? ಮಾಮೂಲು ಕೂಲಿಗಳಿಗಿಂತಲೂ ನ್ಯಾಯಾಧಿಶರಿಗೆ ಸಂಬಳ ಹೆಚ್ಚೋ?'

(ಪ್ರಧಾನ ನ್ಯಾಯಾಧಿಪತಿಯನ್ನು ತೋರಿಸಿ 'ಆತನು ಸ್ವಯಂ ಕೆಲಸಗಾರ, ಒಂದು ಕಾರಖಾನೆಯಲ್ಲಿ ಕೆಲಸ ಮಾಡುತ್ತಿದ್ದ. ಅಲ್ಲಿರುವಾಗ ಸ್ವತಂತ್ರಾಲೋಚನೆ ವ್ಯಕ್ತಪಡಿಸಿದುದರಿಂದ ಆತನಿಗೆ ನ್ಯಾಯಶಾಸ್ತ್ರ ಹೇಳಿಕೊಟ್ಟರು.) (ಸಹಾಯ ನ್ಯಾಯಾಧಿಪತಿಯನ್ನು ತೋರಿಸುತ್ತಾ) ಇವರಿಬ್ಬರೂ ರೇಷ್ಮೆ ಯಂತ್ರಗಳಲ್ಲಿ ದುಡಿದವರು. ಆರು ದಿನಗಳಿಗಾಗಿ ಇವರನ್ನು ತೆಗೆದುಕೊಂಡಿರುವರು. ಆರು ದಿನಗಳಾದ ಮೇಲೆ ಮತ್ತೆ ಗಿರಣಿಗೆ ಹೊರಟು ಹೋಗುವರು. ತೀರ್ಮಾನಗಳಲ್ಲಿ ಸ್ವತಂತ್ರಾಲೋಚನೆಯನ್ನು ತೋರ್ಪಡಿಸಿದರೆ ಇವರಿಗೆ ಅಗತ್ಯವಾದ ವಿದ್ಯೆಯನ್ನು ಕಲಿಸುವರು. (ಕಾರಖಾನೆಗಳಲ್ಲ ನಿಪುಣರಾದ ಕೂಲಿಯವರಿಗೆ ಕೊಡುವ ಸಂಬಳವನ್ನೇ ಕೊಡುವರು) ನ್ಯಾಯಾಧೀಶರಾದ ಮಾತ್ರಕ್ಕೆ ಹೊರಗಿನ ಕೂಲಿಯವರಿಗಿಂತ ಹೆಚ್ಚಿಗೆ ಏನೂ ಇಲ್ಲ. ಇವರು ಯಾವಾಗಲೂ ಕೂಲಿಯವರೊಡನೆ ಬೆರೆತು ಇರಬೇಕಾದುದೇ, ಹಾಗೆ ಸೇರದೆ ಶ್ರೀಮಂತಿಕೆ ತೋರ್ಪಡಿಸಿದರೆ ಕೆಲಸದಿಂದ ತೆಗೆದುಹಾಕಿ ಮತ್ತೆ ಗಿರಣಿಗೋ ಹೊಲಕ್ಕೋ ಕಳುಹಿಸಿಬಿಡುತ್ತಾರೆ.

'ನ್ಯಾಯಶಾಸ್ತ್ರಗ್ರಂಥ ಉಂಟೋ? ಇಲ್ಲ ಇವರ ಮನಸ್ಸಿಗೆ ಬಂದಂತೆ ಸ್ವೇಚ್ಛಾರಾಜ್ಯವೇ?'

ಮೇಜಿನ ಮೇಲಿದ್ದ ಪುಸ್ತಕಗಳನ್ನು ತೋರಿಸಿದಳು.

'ಆದರೆ, ಪ್ರತಿಯೊಂದು ವಿಚಾರವನ್ನು ಸ್ವತಂತ್ರ ಬುದ್ಧಿಯಿಂದ ಆಲೋಚನೆ ಮಾಡಿ ತೀರ್ಮಾನಿಸುವರು. ಶಿಕ್ಷೆಯನ್ನು ಮಾತ್ರ ಕಾನೂನಿನ ಗನುಸಾರವಾಗಿ ವಿಧಿಸುವರು.'

'ಗಂಡಸರಂತೆ ಅಷ್ಟು ಸಮರ್ಥತೆಯಿಂದ ಆ ಸ್ತ್ರೀ ನ್ಯಾಯಾಧಿಪತಿ ವ್ಯವಹಾರ ನಿರ್ವಹಣ ಮಾಡಬಲ್ಲಳೇ?'

ಮಾರ್ಗದರ್ಶಿಕೆ ಹೇಳಿದಳು: 'ಏಕೆ ಮಾಡಲಾರಳು? ಆಕೆಗೆ ತಲೆಯಿಲ್ಲವೇ? ಬುದ್ಧಿಯಿಲ್ಲವೇ? ಸ್ವತಂತ್ರವಾಗಿ ಆಲೋಚಿಸುವ ಶಕ್ತಿ ಇಲ್ಲವೇ?'

ಈ ಮಾತು ಆಕೆಯು ನಗುತ್ತ ಹೇಳಿದಳು. ಆ ನಗುವಿನ ಹಿಂದೆ ಆತ್ಮಾಭಿಮಾನವು ಚೆನ್ನಾಗಿ ಕಂಡುಬಂದಿತು. ನಾನು ಮಾತು ಹೊರಳಿಸಿದೆನು.

'ಸ್ಥಾಯೀ ನ್ಯಾಯಾಧೀಶರನ್ನು ಎಷ್ಟು ಕಾಲಕ್ಕೊಂದು ಸಲ ಚುನಾಯಿಸುವಿರಿ?'

'ಪ್ರಾಂತೀಯ ಕಾರ್ಯನಿರ್ವಾಹಕ ಸಮಿತಿ ಅವರನ್ನು ವರ್ಷಕ್ಕೊಂದು ಸಲ ನಿಯಮಿಸುತ್ತದೆ. ಆದರೆ, ಹಿಂದಿನವರನ್ನೇ ಮತ್ತೆ ಚುನಾಯಿಸುತ್ತಿರುವರು.'

'ಇವರೇನಾದರೂ ಪ್ರತ್ಯೇಕವಾಗಿ ಓದಬೇಕಾಗಿದೆಯೆ?'

'ಇಲ್ಲ. 'ಸೋವಿಯಟ್ ನ್ಯಾಯ ಪಾಠಶಾಲೆ' ಇದೆ. ಅಲ್ಲಿ ಕಾನೂನು ಮಾತ್ರವಲ್ಲದೆ, ಅರ್ಥಶಾಸ್ತ್ರ, ಮನಶ್ಶಾಸ್ತ್ರ, ಸಮಾಜಶಾಸ್ತ್ರ ಕಲಿಸುತ್ತಾರೆ.'

'ಕಾರಖಾನೆಗಳಲ್ಲಿ ಕೆಲಸ ಮಾಡಬೇಕಾಗಿರುವುದರಿಂದ ನ್ಯಾಯಾಧಿಪತಿಗಳು ಕಾನೂನು ಓದಬೇಕಾಗಿಲ್ಲ ತಾನೆ?'

'ಇಲ್ಲ, ಅವರು ಓದಬೇಕಾದ ಅಗತ್ಯವಿಲ್ಲ. ಸ್ಥಾಯೀ ನ್ಯಾಯಾಧೀಶ, ಅವರಿಗೆ ಕಾನೂನು ಶಿಕ್ಷಾಕ್ರಮ ತಿಳಿಸಬೇಕು. ಕಾನೂನಿನ ವಿಚಾರವಾಗಿ ಉಪನ್ಯಾಸ ಕೊಡಿಸಲೂ ಏರ್ಪಾಡುಗಳಿರುತ್ತವೆ.'

'ಹೀಗಿದ್ದರೆ ಸಹಾಯ ನ್ಯಾಯಾಧಿಪತಿಗಳ ತೀರ್ಮಾನದಲ್ಲೇನೂ ಸ್ವಾತಂತ್ರ್ಯವಿರಲಿಕ್ಕಿಲ್ಲ.'

'ಏಕಿಲ್ಲ? ಸಹಾಯ ನ್ಯಾಯಾಧಿಪತಿಗಳ ಮಾತು ಸ್ಥಾಯೀ ನ್ಯಾಯಾಧಿಪತಿಯ ಆಲೋಚನೆಯೊಡನೆ ಸರಿಹೋಗದಿದ್ದರೆ ಅವರದೇ ಮೇಲುಗೈ. ಅವರ ತೀರ್ಮಾನವೇ ಕೊನೆಯದು; ಅದು ಅಧಿಕ ಸಂಖ್ಯಾಕರ ಅಭಿಪ್ರಾಯ.'

'ಆದರೆ ಅವರು ಸಾಧಾರಣ ವ್ಯಕ್ತಿಗಳಲ್ಲವೇ?'

‘ ಆದರೇನು ? ಅವರಿಗೆ ಸ್ವತಂತ್ರಾಲೋಚನೆಯ ಶಕ್ತಿಯಿದೆ. ಶಾಸನದಲ್ಲಿರುವ ಶಬ್ದಜಾಲಕ್ಕಿಂತಲೂ ಅದು ಉತ್ತಮ. ’

‘ ಕೋರ್ಟಿನಲ್ಲಿ ವಕೀಲರಾಗಲಿ, ಅಡ್ವೊಕೇಟರಾಗಲಿ ಕಂಡಂತೆ ತೋರಲಿಲ್ಲ. ಇಲ್ಲಿ ವಕೀಲರಿಲ್ಲವೇ ? ’

‘ ವಕೀಲರಿದ್ದೇ ಇರಬೇಕೆಂಬ ನಿರ್ಬಂಧವಿಲ್ಲ ನಮ್ಮ ಕಾನೂನಿನಲ್ಲಿ. ನಮ್ಮ ಕಷ್ಟಕ್ಕೆ ನಾವೇ ವಾದಿಸಿಕೊಳ್ಳಬಹುದು. ಹಿಂದಿನ ಕಾಗದಗಳನ್ನು ನೋಡಿಕೊಳ್ಳಬಹುದು. ಅದಕ್ಕೆ ನಕಲನ್ನು ತೆಗೆದುಕೊಳ್ಳಬಹುದು. ವ್ಯಾಜ್ಯದ ವಿಷಯದಲ್ಲಿ ಮನಸ್ಸಿಗೆ ಹೊಳೆದಾಗೆಲ್ಲಾ ಜ್ಞಾಪಕ ಬಂದಾಗೆಲ್ಲಾ ಹೇಳಿಕೊಳ್ಳಬಹುದು. ಅಂತಹುದರಲ್ಲಿ ವಕೀಲರನ್ನು ಕರೆದು ಹಣವನ್ನೇಕೆ ಹಾಳುಮಾಡಿಕೊಳ್ಳಬೇಕು ? ’

‘ ಹಣ ಕಳೆದುಕೊಳ್ಳುವುದೇ ? ಇಲ್ಲಿಯ ವಕೀಲರಿಗೆ ಫೀಜು ಸೇರುತ್ತದೇನು ? ’

‘ ಯಾವ ಯಾವ ರೀತಿಯನ್ನು ಹಿಡಿದು ಅವರಿಗೆ ಫೀಜು ಮುಟ್ಟುತ್ತದೆ. ’

ನಾನು ಮೆಲ್ಲಗೆ ನಕ್ಕೆನು. ಮಾರ್ಗದರ್ಶಿಕೆಯು ಬಹಳ ತಿಳುವಳಿಕೆಯುಳ್ಳವಳು. ನನ್ನ ನಗುವಿನಲ್ಲಡಕವಾಗಿರುವ ಅರ್ಥವನ್ನು ಕಂಡುಹಿಡಿದಳು.

‘ ಈ ವಕೀಲರ ಫೀಜಿನಲ್ಲಿ ಬಹಳ ಅಂತರವಿರುವುದೆಂದು ನೀವೆಂದುಕೊಳ್ಳಬೇಡಿ. ಇಂತಹ ವಕೀಲರಿಗೆ ಇಷ್ಟೇ ಫೀಜೆಂದು ನಿರ್ಣಯವಿಲ್ಲ. ಫೀಜನ್ನೆಲ್ಲ ವಕೀಲರ ಸಂಘವು ತೆಗೆದುಕೊಂಡು ಪ್ರತಿಯೊಬ್ಬ ವಕೀಲನಿಗೂ ಆತನ ಅರ್ಹತೆಯ ಮೇರೆಗೆ ತಿಂಗಳ ಸಂಬಳ ಕೊಡುತ್ತದೆ. ’

‘ ಆದರೆ ಬಡ ಕೂಲಿಕಾರನು ವಕೀಲರ ಸಹಾಯವನ್ನು ಹೊಂದಲಾರನಲ್ಲವೇ ? ’

‘ ಏಕೆ ?— ’

‘ ಒಬ್ಬನು ಅವನ ಸಂಪಾದನೆಯಿಂದ ಹೊಟ್ಟೆ ಹೊರೆದುಕೊಳ್ಳುವುದೇ ಕಷ್ಟವಾಗಿದೆಯೆನ್ನಿ. ಅವನಿಗೆ ವಕೀಲರಿಗೆ ಕೊಡಲು ಹಣವೆಲ್ಲಿಯದು ? ’ ಆತನು ಸಲಹಾ ಸಮಿತಿಗೆ ಅರ್ಜಿ ಹಾಕಿಕೊಂಡರೆ ಸಾಕು.

ಅವನು ಫೀಜನ್ನು ಕೊಡಲಾರನೆಂದು ಅವರಿಗನಿಸಿದರೆ ಉಚಿತವಾಗಿಯೇ ಕಾನೂನಿನ ಸಲಹೆ ಕೊಡುವರು.’

‘ಆದರೆ ನಿಮ್ಮ ದೇಶದಲ್ಲಿ ನ್ಯಾಯಶಾಖೆ, ಶಾಸನಶಾಖೆ ಒಂದಕ್ಕೊಂದು ಸೇರಿಕೊಂಡಿಲ್ಲ.’

‘ಹೌದು. ಅದರಲ್ಲಿ ತೊಂದರೆಯೇನು ?’

‘ಈ ಪದ್ಧತಿಯಲ್ಲಿ ತೊಂದರೆಗಳೇನಾದರೂ ಇವೆಯೇನೊ ನ್ಯಾಯಾಧೀಶನನ್ನು ಸ್ವಲ್ಪ ಕೇಳಿ ತಿಳಿದುಕೊಳ್ಳಿ.’

ಮಾರ್ಗದರ್ಶಿಕೆ ಕೇಳಿದಳು. ಅವರು ನಗಲಾರಂಭಿಸಿದರು. ಮಾರ್ಗದರ್ಶಿಕೆ ಅವರು ಹೇಳಿದುದನ್ನು ಅನುವಾದ ಮಾಡಿ ಹೇಳಿದಳು.

‘ನ್ಯಾಯಾಂಗಶಾಖೆಯನ್ನು — ಶಾಸನಶಾಖೆಯನ್ನು ಪ್ರತ್ಯೇಕ ಪ್ರತ್ಯೇಕವಾಗಿಟ್ಟಿರುವೆವೆಂದು ಹೇಳುವ ದೇಶಗಳೂ ಕಾರ್ಯದಲ್ಲಿ ತಲೆ ಕೆಳಗಾಗುತ್ತಿರುವುವು. ಸಿದ್ಧಾಂತ ಬೋಧಿಸುವಾಗ ಇವೆರಡೂ ಬೇರೆ ಬೇರೆ ಇರುವುದೇ ಚೆನ್ನಾಗಿ ಕಾಣುವುದು. ಆದರೆ ಕಾರ್ಯರೂಪದಲ್ಲಿ ಅದು ಸಾಧ್ಯವಾಗುತ್ತಿಲ್ಲ. ಇತರ ದೇಶೀಯರು ಕಳ್ಳರು. ಆದುದರಿಂದ ತಮ್ಮ ಪರಾಜಯವನ್ನು ಅಂಗೀಕರಿಸರು. ನೀವು ಯಾವ ದೇಶದಲ್ಲಿಯಾದರೂ ಸರಿಯೆ, ರಾಜಕೀಯ ವ್ಯವಹಾರಗಳನ್ನು ಪರಿಶೀಲಿಸಿರಿ. ಈ ವಿಷಯವು ನಿಮಗೇ ಅರ್ಥವಾಗುವುದು. ನಾವು ಮೋಸಗಾರರಲ್ಲ.’

ನ್ಯಾಯಾಧಿಪತಿಗಳ ಅಮೂಲ್ಯ ಸಮಯವನ್ನು ನಾನು ಬಹಳ ಹೊತ್ತು ಉಪಯೋಗಿಸಿಕೊಂಡೆ. ಆಲೋಚನಾ ಮಂದಿರದ ಹೊರಗಡೆ ಜನರು ತೀರ್ಮಾನಗಳಿಗಾಗಿ ಎದುರು ನೋಡುತ್ತಿರುವುದನ್ನು ನೋಡಿ ನನ್ನ ಹೃದಯಪೂರ್ವಕ ಧನ್ಯವಾದಗಳನ್ನು ಅವರಿಗರ್ಪಿಸಿ ಹೊರಗಡೆ ಬಂದೆನು.

ಕೆಲವು ನಿಮಿಷಗಳಲ್ಲಿ ನ್ಯಾಯಾಧೀಶರು ಹೊರಕ್ಕೆ ಬಂದರು. ಸ್ಥಾಯೀ ನ್ಯಾಯಾಧಿಪತಿಯು ತೀರ್ಮಾನ ಹೇಳಿದ. ಮೊದಲನೆಯದರಲ್ಲಿ ಮಗುವಿನ ತಂದೆ ಯಾರೆಂಬುದನ್ನು ತಿಳಿದುಕೊಳ್ಳುವುದು ಸಾಧ್ಯವಲ್ಲವಾದುದರಿಂದ, ಆ ಸ್ತ್ರೀಯೊಡನೆ ಸಂಬಂಧವಿದ್ದ ಇಬ್ಬರು ಗಂಡಸರೂ ಮಗುವಿನ ಪೋಷಣೆಯ ಭಾರ ವಹಿಸಬೇಕು; ಎರಡನೆಯದರಲ್ಲಿ ಆ ಸ್ತ್ರೀಗೆ

ಈಗಿನ ಆದಾಯದಲ್ಲಿ ಮೂರನೆಯೊಂದು ಭಾಗವನ್ನು ಕೊಡಬೇಕೆಂದು ಆಜ್ಞೆ ಮಾಡಿದರು.

ರಷ್ಯದ ಕೋರ್ಟುಗಳ ಸಾದಾ ಜೀವನ ನೋಡಿ ನನಗೆ ಆಶ್ಚರ್ಯ ವಾಯಿತು. ದೋಷಿಗಳಿಗೆ ಎಷ್ಟು ಸ್ವಾತಂತ್ರ್ಯ! ಜಾಮೀನಂತೂ ಬಹು ಸುಲಭ. ಅಪೀಲು ಖರ್ಚೀನು ಇಲ್ಲವಾದುದರಿಂದ ಪ್ರತಿಯೊಂದು ತೀರ್ಮಾನವೂ ನ್ಯಾಯೋಚಿತವಾಗಿ ಇರುವುದು. ಅದೂ ಅಲ್ಲದೆ ನ್ಯಾಯಾಧೀಶರು ಸಾಮಾನ್ಯ ಪ್ರಜೆಗಳಿಂದ ಚುನಾಯಿತರಾದವರು. ಅಪರಾಧಿಗಳ ಸ್ಥಿತಿಗತಿ, ಮಾನಸಿಕ ಪ್ರವೃತ್ತಿ, ಆಚಾರವ್ಯವಹಾರ, ಕಷ್ಟಸುಖ ಎಲ್ಲಾ ಅವರಿಗೆ ಗೊತ್ತು. ಬಂಡವಾಳಶಾಹೀ ರಾಜ್ಯಗಳಂತಲ್ಲ. ರಷ್ಯಾದಲ್ಲಿ ಅಪ ರಾಧಿಗಳಿಗೆ ಸಹಾನುಭೂತಿಯ ನ್ಯಾಯವು ಸಿಗುತ್ತಿದೆ. ಬಂಡವಾಳಶಾಹಿ ದೇಶಗಳೊಳಗಿನ ನ್ಯಾಯಾಧಿಕಾರಿಗಳು, ವಿಶಿಷ್ಟ ಗುಂಪಿಗೆ ಸೇರಿದವರಾಗಿ ರುವರು. ಜನಸಾಮಾನ್ಯರ ಭಾವ, ಜೀವನ ಅವರಿಗೆ ಸಂಬಂಧವಿಲ್ಲ. ಕಣ್ಣು ಮುಚ್ಚಿಕೊಂಡು ಜನರ ಜೀವನದ ಮೇಲೆ, ಅವರ ಸಂಪತ್ತಿನ ಮೇಲೆ ದಾಳಿ ಮಾಡುವರು. ಇತರ ದೇಶದ ನ್ಯಾಯಾಧೀಶರು ಜನ ಸಾಮಾನ್ಯರೊಡನೆ ಸೇರುವುದೇ ಇಲ್ಲ. ಅವರ ಆಡಂಬರ, ಗಾಂಭೀರ್ಯ ವನ್ನು ನೋಡಿದೊಡನೆಯೇ ಅಪಾದಿತರು ಸ್ತಂಭೀಭೂತರಾಗಿ ಹೇಳ ಬೇಕಾದ ವಿಷಯಗಳನ್ನೇ ಹೇಳಲಾರರು. ರಷ್ಯದ ಕೋರ್ಟುಗಳ ನಿರಾ ಡಂಬರತೆ ಪ್ರಜೆಗಳಿಗೆ ಬಹಳ ಸೌಕರ್ಯವಾಗಿದೆ.

ಚಾಕ್ಕೆ ಹೊತ್ತಾದುದರಿಂದ ಹೋಟಲಿಗೆ ಹೊರಟೆವು. ಮೂರು ಝಾಮವಾದರೂ ಚಳಿ ಬಹಳ. ಎಲ್ಲ ಮೂಲೆಗಳಲ್ಲಿ ಎಡಬಿಡದೆ ಮಂಜು ಸುರಿಯುತ್ತಿದೆ. ಮಂಜಿನ ಮೇಲೆಯೆ ನಾವು ನಡೆಯುತ್ತಿರುವುದು. ಬೂಟು, ಕಾಲುಚೀಲಗಳೊಳಗೆಲ್ಲಾ ಚಳಿ ನುಗ್ಗುತ್ತಿದೆ. ಚಳಿಗಾಳಿಯು ಶ್ವಾಸನಾಳದ ಮೂಲಕ ಒಳಹೊಕ್ಕು ಬುದ್ಧಿಯನ್ನು ಕಟ್ಟಿಗೆಯಂತೆ ಮಾಡುತ್ತಿದೆ. ಇಲ್ಲೇ ಹುಟ್ಟಿ ಇಲ್ಲೇ ಬೆಳೆದಿದ್ದರೂ ಈ ವಿಚಾರದಲ್ಲಿ ರಷ್ಯನರು ನಮಗಿಂತಲೂ ಬಲಿಷ್ಠರೆಂದು ಅನಿಸದು. ಅವರು ಹಾಕಿಕೊಳ್ಳುವ ಮೇಣದ ಬಟ್ಟೆ ಅಂಗಿಗಳು ಅವರನ್ನಿಲ್ಲಿ ನಿಲ್ಲುವಂತೆ ಮಾಡುತ್ತವೆ. ಬಡವರು ಕುರಿಯ ಚರ್ಮದ ಉಡುಪನ್ನು ಹಾಕಿಕೊಳ್ಳುವರು. ರಷ್ಯನರು ಉಡುಪ

ಬಟ್ಟೆ ಟೋಪಿಯನ್ನು ಧರಿಸಿದರೆ ಯಾವ ಭಾರತೀಯನಾದರೂ ಅಲ್ಲಿಯ ಚಳಿಯನ್ನು ಸಹಿಸಬಲ್ಲನೆಂದು ನನ್ನ ನಂಬುಗೆ.

ಸಾಯಂಕಾಲ ಬಂದು ರೈತರ ಭವನವನ್ನು ತೋರಿಸುವೆನೆಂದು ಹೇಳಿ ಮಾರ್ಗದರ್ಶಿಕೆಯು ಹೋದಳು. ಇಲ್ಲಿಯ ರೈತರಿಗೆ 'ಕ್ಲಬ್ಬು' ಸಂಸ್ಕಾರಗೃಹ, ಉದ್ಯಾನ ಮೊದಲಾದುವೆಷ್ಟೋ ಇರುವುವೆಂದೂ ಅದರಲ್ಲಿ ಸೇರಿ ರೈತರು ಓದಿಕೊಳ್ಳುತ್ತಲೊ, ಉಪನ್ಯಾಸ ಕೇಳುತ್ತಲೊ, ನಾಟಕ ಆಡುತ್ತಲೊ, ಸಿನಿಮಾ ನೋಡುತ್ತಲೊ ಕಾಲ ಕಳೆಯುವರೆಂದೂ ಆಕೆ ಹೇಳಿದಳು. ಈಗ ಮಂಜು ಸುರಿಯುವ ದಿನಗಳಾದುದರಿಂದ ಉದ್ಯಾನ ಮೊದಲಾದವು ಮುಚ್ಚಲ್ಪಟ್ಟಿವೆ. ನಾವು ರೈತರ ಭವನ ನೋಡಲು ನಿಶ್ಚಯಿಸಿಕೊಂಡೆವು.

'ಲೆನಿನ್ ಗ್ರಾಡಿ'ನಲ್ಲಿದ್ದಂತೆ ಇಲ್ಲೂ ಚಾ ಅಂಗಡಿ ಹಾಳುಹಾಳು. ಒಂದು ದಿನ ಒಂದು ಸೀಮೆ ಬೋರೆ ಹಣ್ಣಿಗಾಗಿ ಹತ್ತು ಶಿಲಿಂಗು ಕೊಟ್ಟೆ; ಇನ್ನೊಂದು ಸಲ ಕೋಳಿ ಮಾಂಸದ ಒಂದು ಪೂರಾ ಪೌಂಡಿಗೆ ಪೌಂಡು ಕೊಟ್ಟೆ. ಈ ಹಾಳು ಹೊಟ್ಟೆ ಇಷ್ಟು ಬೆಲೆ ಕೊಟ್ಟು ತುಂಬಿಸು ವುದಕ್ಕಿಂತ ಉಪವಾಸವಿರುವುದೇ ಉತ್ತಮವೆಂದು ಊಹಿಸಿದೆ. ಒಮ್ಮೆ ನನ್ನ ಮಾರ್ಗದರ್ಶಿಕೆಯ ಸಂಗಡ ಈ ವಿಷಯ ಮಾತಾಡಿದೆ.

'ಸಾಮಾನ್ಯ ಜನರಿಗೆ ನಿಮ್ಮ ದೇಶಕ್ಕೆ ಬರುವುದು ಬಹು ಕಷ್ಟ.'

'ಅಷ್ಟು ತೆಯಿಟ್ಟು ನಾವೇನು ಕರೆಯುತ್ತೇವೆಯೆ? ನಮಗೆ ಪೌಂಡು ಡಾಲರುಗಳ ಅಗತ್ಯ ಹೆಚ್ಚಾಗಿದೆ. ಸಾಧ್ಯವಾದಷ್ಟರ ಮಟ್ಟಿಗೂ ಅವನ್ನು ವಿದೇಶೀಯರಿಂದ ವಸೂಲು ಮಾಡಬೇಕು. ವಿದೇಶೀ ಪ್ರವಾಸಿಗಳು ಹಣ ಯಥೇಷ್ಟವಾಗಿ ಕೊಡಬಲ್ಲರೆಂದು ನಮಗೆ ಗೊತ್ತು.'

ಈ ಮಾತು ಹದಿನಾರಾಣೆಯೂ ನಿಜ. ರಷ್ಯಾದೊಳಗೆ ಬಂದವರು ತಮ್ಮ ನಾಣ್ಯವನ್ನು ರೂಬಲ್ಲುಗಳನ್ನಾಗಿ ಮಾರ್ಪಡಿಸಿಕೊಂಡರೆ, ಅವನ್ನು ಖರ್ಚು ಮಾಡಬಹುದು. ಆದರೆ, ಆ ದೇಶದ ನಾಣ್ಯಗಳು ಉಳಿದರೆ ಮರಳಿ ನಮ್ಮ ದೇಶದ ನಾಣ್ಯಗಳು ದೊರೆಯಲಾರವು. ತಿರುಗಿ ಕೊಡಲಾಗದೆಂದು ಸೋವಿಯಟ್ ಸರಕಾರವು ಶಾಸನ ಮಾಡಿದೆ. ಈ ಶಾಸನವನ್ನು ಏಕೆ ಮಾಡಿದಾರೋ ಈಗ ಅರ್ಥವಾಯಿತು.

ಸಾಯಂಕಾಲ ಮಾರ್ಗದರ್ಶಿಕೆ ಬರುವ ವೇಳೆಗೆ ಕತ್ತಲಾಯಿತು. ನಾವಿಬ್ಬರೂ 'ಮಾಸ್ಕೋವಾ' ದಾಟಿ 'ಕ್ರೆಮ್ಲಿನ್ನಿ'ನ ಗೋಡೆಯ ಹತ್ತಿರ ಟ್ರಾಂ ಗಾಡಿಗಾಗಿ ನಿಂತೆವು. ಎಷ್ಟು ಹೊತ್ತಾದರೂ ಟ್ರಾಂ ಬಾರದು. ಮೋಟಾರು, ಬಸ್ಸು, ಗಾಡಿ ಯಾವುದೂ ಇಲ್ಲವೇ ಇಲ್ಲವಲ್ಲ! ಚಳಿಯು ಸಾಯಿಸುತ್ತಿದೆ. ಸ್ವಲ್ಪ ಹಾಗೂ ಹೀಗೂ ತಿರುಗಾಡಿದರೆ ಮೈ ಬಿಸಿಯೇರುವುದೆಂದು ಓಡಾಡಿದೆ. ಕಡೆಗೆ ಟ್ರಾಂ ಬಂತು. ನಾವು ಓಡೋಡಿ ಗಾಡಿಯಲ್ಲಿ ನುಸುಳಿಕೊಂಡೆವು. ಆ ಗುಂಪಿನಲ್ಲಿ ಸ್ವಲ್ಪ ಬಿಸಿ ಯೇರಿತು. ಆದರೆ ಜನರ ಬೆವರು, ಕೊಳಕು ಬಟ್ಟೆಯ ದುರ್ವಾಸನೆಯಿಂದ ಮೂಗು ಒಡೆದುಹೋದಂತಿತ್ತು.

---

೯

## ರೈತರ ಭವನ

ಟ್ರಾಂಗಾಡಿಗೆ ಕಿಟಿಕಿ ಒಳಗೂ ಹೊರಗೂ ಹೆಪ್ಪುಕಟ್ಟಿದ ಮಂಜು. ರಷ್ಯ ಟ್ರಾಮಿನಲ್ಲಿ ಜನರು ಹಿಂದಿನಿಂದ ಹತ್ತುವರು. ಮುದುಕರು, ಹುಡುಗರನ್ನೆತ್ತಿಕೊಂಡ ಹೆಂಗಸರು ಮಾತ್ರ ಡ್ರೈವರು ಪಕ್ಕದಲ್ಲಿರುವ ದಾರಿಯಿಂದ ಒಳಗೆ ಬರಬಹುದು. ಸಾಮಾನ್ಯವಾಗಿ ಈ ಬಾಗಿಲು ಇಳಿಯು ವುದಕ್ಕೆ ಮಾತ್ರ.

'ರೈತರ ಭವನ'ದ ಹತ್ತಿರ ಇಳಿದೆವು. ಬಹಳ ದೊಡ್ಡ ಕಟ್ಟಡ. ಮಾರ್ಗದರ್ಶಿಕೆಗೆ ಈ ಭವನದ ಪರಿಚಯವಿಲ್ಲದಂತೆ ತೋರಿತು. ಮುಂಚೆ ರೈತರ ಭೋಜನಶಾಲೆಗೆ ಹೋದೆವು. ಆಗಲೇ ಗ್ರಾಮಾಂತರಗಳಿಂದ ಬಂದ ರೈತರು, ಅವರ ಮೂಟೆ ಕಂಡುಬಂದವು. ಅವರು ನಮಗೆ ಸೂಪರಿಂಟೆಂ ಡೆಂಟರ ಕಚೇರಿ ದಾರಿ ತೋರಿಸಿದರು.

ಆತ ಒಬ್ಬ ವಕೀಲ. ಇಂಗ್ಲಿಷು ಬಾರದು. ನನ್ನ ಮಾರ್ಗದರ್ಶಿಕೆ ದುಭಾಷಿ ಕೆಲಸ ಮಾಡಿ ವ್ಯವಹಾರ ನಡೆಸಿದಳು. 'ನಾನೇನಾದರೂ ಕೇಳಬಹುದೇ ಆತನನ್ನು ಕೇಳಿ' ಎಂದು ಮಾರ್ಗದರ್ಶಿಕೆಯನ್ನು ಕೇಳಿದೆನು.

'ನಿಸ್ಸಂಕೋಚವಾಗಿ ಕೇಳಿ. ಆದರೆ, ಜಾಗ್ರತೆ ಮುಗಿಸಿ. ಇಲ್ಲದಿದ್ದರೆ ನಾವು ಹೊರಡುವ ವೇಳೆಗೆ ಹೊತ್ತಾಗುತ್ತೆ. ಅಬ್ಬ! ಏನು ಕೆದರಿ ಕೆದರಿ ಕೇಳುತ್ತೀರಿ?'

'ನೋಡಿ. ಇಷ್ಟು ಸ್ವಲ್ಪ ಕಾಲದಲ್ಲಿ ರಷ್ಯಾವನ್ನೆಲ್ಲಾ ನೋಡುವುದು ಯಾವ ವಿದೇಶೀಯನಿಗೂ ಸಾಧ್ಯವಲ್ಲ. ಒಂದು ತಿಂಗಳಾದರೂ ಸಾಲದು. ಆದುದರಿಂದ ರಷ್ಯಾ ವಿಚಾರವಾಗಿ ತಿಳಿದುಕೊಳ್ಳಬೇಕೆಂದರೆ ಹೀಗೇ ಸರಿ. ಬೇರೆ ಬೇರೆ ಶಾಖೆಗಳ ಅಧಿಕಾರಿಗಳನ್ನು ಕೇಳಿ ವಿಷಯ ತಿಳಿದುಕೊಳ್ಳುವುದು; ಸಾಧ್ಯವಾದಷ್ಟು ನೋಡಿ ಅದರ ಸತ್ಯಾಸತ್ಯ ಪರೀಕ್ಷಿಸುವುದು; ಇಷ್ಟೇ ಮಾಡಬೇಕಾದುದು.'

'ಸರಿ. ಹಾಗೆಯೇ ಆಗಲಿ.'

'ಕೊಲ್ಖೋಜೇಜ್'—'ಸಾಲ್ಖೋಜೇಜ್' ಎಂಬುವುಗಳಿಗೆ ಅರ್ಥವೇನು? ಆದರೆ ವಿದೇಶೀಯ ಗ್ರಂಥಗಳಲ್ಲಿ ಎರಡನ್ನು ಒಂದೇ ಅರ್ಥದಲ್ಲಿ ಉಪಯೋಗಿಸಿರುವರು.'

'ಎರಡೂ ಒಂದಲ್ಲ. ರೈತರೆಲ್ಲರೂ ಸೇರಿ ಏರ್ಪಡಿಸಿಕೊಂಡ ಸಮಷ್ಟಿಯ ಕೃಷಿಯ ಕ್ಷೇತ್ರಗಳಿಗೆ 'ಕೊಲ್ಖೋಜೇಜ್'—ಎನ್ನುವರು. ಸರಕಾರದ ಅಧೀನದಲ್ಲಿರುವ ದೊಡ್ಡ ದೊಡ್ಡ ಭೂಮಿಯ ಪಟ್ಟಿಗಳಿಗೆ 'ಸೊಲ್ಖೋಜೇಜ್' ಅನ್ನುವರು.

'ಈ ಭೂಮಿಗಳನ್ನು ಹೇಗೆ ಸಾಗಿಸುತ್ತಿರುವರು?'

'ಕೊಲ್ಖೋಜೇಜ್'ನಲ್ಲಿ ವ್ಯವಸಾಯಗಾರರು ಒಟ್ಟಾಗಿ ಒಂದು ಮನೆಯವರಂತೆ ನಡೆಯುವರು. ಬೆಳೆಯನ್ನು ಎಲ್ಲರೂ ಸಮವಾಗಿ ಹಂಚಿಕೊಳ್ಳುವರು.'

'ಈ ವಿಧವಾಗಿ ರೈತರಿಗೆ ಲಾಭ ಬಂದರೆ ಅವರು ಹಣ ಗಳಿಸಬಹುದಲ್ಲಾ?'

'ನಿಮ್ಮದು ಬಲು ಕೊಂಕು ಬುದ್ಧಿ. ಮಾತು ಮಾತನ್ನು ತಿರುಗಿಸಿ ಮತ್ತೆ ಅದರೊಳಕ್ಕೇ ಎಳೆದುಕೊಂಡು ಬರುವಿರಲ್ಲಾ.'

'ಈ ವಿಷಯದಲ್ಲಿ ನಿಮ್ಮ ದೇಶವು ಪ್ರಪಂಚಕ್ಕೆಲ್ಲ ವಿರುದ್ಧವಾಗಿದೆ ಎಂದು ನೀವೇ ಹೇಳುತ್ತಿರುವಿರಿ. ಆದುದರಿಂದಲೇ ಈ ವಿಷಯವನ್ನು

ಸ್ಪಷ್ಟವಾಗಿ ತಿಳಿಯಬಯಸುತ್ತೇನೆ. ನೀವು ಹರಡುತ್ತಿರುವ ಈ ನೋಷ ಲಿಸ್ಟ ಸಿದ್ಧಾಂತಗಳನ್ನು ನಿರೀಕ್ಷಿಸುವ ಪ್ರಪಂಚವೆಲ್ಲಾ ನಿಮ್ಮ ಕಡೆಗೇ ನೋಡುತ್ತಿದೆ. ಐಶ್ವರ್ಯ ವಿಭಾಗದ ವಿಚಾರವಾಗಿ ನೀವು ಯಾವ ಯಾವ ಪದ್ಧತಿಗಳನ್ನು ಅವಲಂಬಿಸುತ್ತಿರುವಿರೋ ನಾವು ತಿಳಿದುಕೊಳ್ಳಬೇಕು.'

'ಪ್ರಾರಂಭದಲ್ಲಿ ರೈತರಿಗೆ ಜೀವನ ನಡೆಸಲು ಬೇಕಾದಷ್ಟು ಬೆಳೆಯನ್ನು ಮಾತ್ರ ಬಿಟ್ಟು ಮಿಕ್ಕುದನ್ನೆಲ್ಲಾ ಸೋವಿಯಟ್ ಸರಕಾರ ತೆಗೆದು ಕೊಳ್ಳುತ್ತಿತ್ತು. ರೈತರು ಬೆಂದು ಸಾಯಬೇಕಾದ ಪರಿಸ್ಥಿತಿ ಏರ್ಪಟ್ಟಿತು. ಕೂಡಲೆ ರೈತರು ತಿರುಗಿ ಬಿದ್ದರು. ಪ್ರಭುತ್ವಕ್ಕೆ ಪಾಠ ಕಲಿಸಲು, ಸಾಧ್ಯವಾದಷ್ಟೂ ಕಡಿಮೆ ಜಮೀನನ್ನೇ ಉಳುಮೆ ಮಾಡಿದರು. ತಮ್ಮಲ್ಲಿದ್ದ ದನಕರುಗಳನ್ನು ಕೊಂದುಹಾಕಿದರು. ದೇಶದ ಎಲ್ಲ ಮೂಲೆಗಳಲ್ಲಿ ಹಬ್ಬಿದ ಈ ರಹಸ್ಯವಿದ್ರೋಹದಿಂದ ದೊಡ್ಡ ತೊಂದರೆಯಾಗಿದೆ. 'ಲೆನಿನ್' ಇದನ್ನು ತಡೆಯಲು 'ನೂತನ ಆರ್ಥಿಕ ನೀತಿ' (N. E. P.) ಯನ್ನು ಪ್ರಾರಂಭಿಸಿದನು. ಪಂಚವರ್ಷ ಪ್ರಣಾಳಿಕೆ ಪ್ರಾರಂಭವಾದ ಮೇಲೆ ಈ ಈ ನೀತಿಯು ವ್ಯತ್ಯಾಸ ಮಾಡಲ್ಪಟ್ಟಿತು. ಈಗ ಚಿಕ್ಕಪುಟ್ಟ ವ್ಯವಸಾಯಗಾರರೆಲ್ಲ ವಿಶಾಲವಾದ ಸಮಷ್ಟಿ ಕ್ಷೇತ್ರಗಳಲ್ಲಿ ಸೇರಿ ಕೆಲಸ ಮಾಡುವಂತೆ ಸರಕಾರ ಪ್ರಯತ್ನಿಸುತ್ತಿರುವುದು. 'ಟ್ರಾಕ್ಟರು'ಗಳು 'ಕಂಬೈನು' ಗಳು, ಒಳ್ಳೆಯ ಬೀಜಗಳು, ಉತ್ತಮ ಗೊಬ್ಬರಗಳನ್ನು ವ್ಯವಸಾಯಗಾರರಿಗೆ ಸಾಲವಾಗಿ ಕೊಟ್ಟು ಸರಕಾರವು ಅವರಿಗೆ ಸರ್ವ ವಿಧ ಸಹಾಯ ಮಾಡುತ್ತಿದೆ.'

'ಬಿಡಿ–ಬಿಡಿ ವ್ಯವಸಾಯವನ್ನು ಹೊಡೆದು ಹಾಕುವುದಕ್ಕೆ ಪ್ರಭುತ್ವವು ಯಾವ ಯಾವ ಪದ್ಧತಿ ಅನುಸರಿಸಿದೆ?'

'ಒಳ್ಳೆ ಜಾಣರೇ ನಮ್ಮ ಸರಕಾರದಲ್ಲಿ ತಪ್ಪುಗಳನ್ನು ಹುಡುಕಲು ಪ್ರಯತ್ನಿಸುತ್ತಿರುವರು.'

ಆ ಸಮಯದಲ್ಲಿ ಆಕೆಯ ಮುಖಕಳೆಯನ್ನು ಕಂಡು ನನಗೆ ನಗೆ ಬಂತು.

'ನನ್ನ ಪ್ರಶ್ನೆಗಳನ್ನು ಹಾಗೆ ತಿಳಿಯಬೇಡಿ. ಸದುದ್ದೇಶದಿಂದ ಕೇಳುತ್ತಿದ್ದೇನೆ.'

'ಹೌದು. ನನಗೆ ಗೊತ್ತು. ಸರಕಾರವು ಚಿಲ್ಲರೆ ವ್ಯವಸಾಯ ಗಳನ್ನು ಕಡಿಮೆ ಮಾಡಿಸಲು ದಂಡನೀತಿ ಅತ್ಯಾಚಾರ ಅವಲಂಬಿಸುತ್ತಿಲ್ಲ. ಸಮಷ್ಟಿ ವ್ಯವಸಾಯದ ಸೌಕರ್ಯ, ಬೆಳೆಯ ಅಭಿವೃದ್ಧಿಯನ್ನು ಬೋಧಿಸಿ ಪ್ರಚಾರ ಮಾಡುತ್ತಿರುವದು. ಈಗ ಕೃಷಿಕ್ಷೇತ್ರಗಳ ವೈಶಾಲ್ಯ ಹೆಚ್ಚಾಗುತ್ತಿದೆ.'

'ಇದು ಇರಲಿ. ವ್ಯವಸಾಯದಲ್ಲಿ ಉಂಟಾಗುತ್ತಿರುವ ಸೌಕರ್ಯ ಗಳೇನು ?'

'ಪ್ರಭುತ್ವವು ಟ್ರಾಕ್ಟರುಗಳನ್ನು, ಇತರ ವ್ಯವಸಾಯದ ಯಂತ್ರ ಗಳನ್ನು, ಕಡಿಮೆ ಬಾಡಿಗೆಗೆ ಈ ಸಮಷ್ಟಿ ಕ್ಷೇತ್ರಗಳಿಗೆ ಕೊಡುತ್ತಾರೆ. ಒಳ್ಳೆಯ ಬೀಜಗಳನ್ನು ಈ ಕ್ಷೇತ್ರಗಳಿಗೆ ಕೊಟ್ಟ ಮೇಲೆ ಉಳಿದುದನ್ನು ಇತರರಿಗೆ ಕೊಡುತ್ತಾರೆ. ಪಟ್ಟಣಗಳಲ್ಲಿ ಗಿರಣಿ ಕೂಲಿಗಳಿಗೆ ಕಲ್ಪಿಸುತ್ತಿರುವ ಸೌಕರ್ಯಗಳೆಲ್ಲ—ಸಾರ್ವಜನಿಕ ಭೋಜನಾಲಯಗಳು, ಕ್ಲಬ್ಬುಗಳು, ರೇಡಿಯೋಗಳು, ಸ್ಕೂಲುಗಳು, ಪುಸ್ತಕಾಲಯಗಳು, ಸ್ನಾನದ ಮನೆ ಗಳು, ಆಸ್ಪತ್ರೆಗಳು—ಈ ಕ್ಷೇತ್ರಗಳಲ್ಲಿ ಸೇರಿದ ರೈತರಿಗೆ ಸಹ ಮಾಡಲ್ಪಡುತ್ತಿವೆ.'

'ಆದರೆ ವಿಶಾಲವಾದ ಕ್ಷೇತ್ರಗಳುಳ್ಳ ದೊಡ್ಡ ದೊಡ್ಡ ರೈತರು ಈ ಕ್ಷೇತ್ರಗಳಲ್ಲಿ ವ್ಯವಸಾಯ ಮಾಡಲು ಅಂಗೀಕರಿಸುವುದಿಲ್ಲವಲ್ಲವೇ? ಹಾಗಾದರೆ ಜಮೀನುದಾರರು ಕೂಲಿಯವರಾಗಬೇಕಾಗಿ ಬಂದೀತು ?'

'ಓ. ನೀವು ಕುಲಕರನ್ನು ಕುರಿತು ಹೇಳುತ್ತಿರುವಿರಿ! ನಾವು ಅವರನ್ನೇನೂ ಲೆಕ್ಕವಿಡುವುದಿಲ್ಲ. ಅವರು ಧನಿಕರ ಜಾತಿ. ಅವರನ್ನು ಅರೆದು ಬಿಡುವೆವು.'

ಕೊಂಚ ತಡೆದು, 'ನಮಗೆ ತಡವಾಗಿ ಹೋಗುವುದು. ಭವನ ವನ್ನು ಮುಚ್ಚುವ ಹೊತ್ತಾಗುತ್ತಿದೆ, ಏಳಿ' ಎಂದಳು.

ವಸ್ತುಪ್ರದರ್ಶನಾಲಯಕ್ಕೆ ಬಂದೆವು. ಬೇರೆ ಬೇರೆ ಪೈರು ಹಾಕಿದ ಭೂಮಿಗಳನ್ನು, ಭೋಗವಾಗಿ ಬೆಳೆದ ಬೆಳೆಯನ್ನು ಚಿತ್ರಿಸಿದ ದೊಡ್ಡ ದೊಡ್ಡ ಪಟಗಳು ಗೋಡೆಯ ಮೇಲೆ ತೂಗಾಡುತ್ತಿವೆ. ವೈಜ್ಞಾನಿಕ ಪದ್ಧತಿಯ ಪ್ರಕಾರ ಕಟ್ಟಲ್ಪಟ್ಟ ಪಶುಶಾಲೆ, ಗೊಬ್ಬರದ ಗುಂಡಿ, ರೈತರ

ಮನೆಗಳು, ಬೀಜಗಳನ್ನು ಕೆಡದಂತೆ ಇಡುವ ಪದ್ಧತಿ, ಇಂತಹ ಅನೇಕ ವಸ್ತುಗಳ ಸಮೂನೆಗಳಿಂದ ತುಂಬಿತ್ತು. ಕನ್ನಡಿಯ ಪೆಟ್ಟಿಗೆಗಳಲ್ಲಿ ವಿಧ ವಿಧದ ಧಾನ್ಯಗಳು, ಟೀ ಸೊಪ್ಪು, ಹತ್ತಿ, ಗೋದಿ, ಸನ್ ಫ್ಲವರ್, ಆಲೂ ಗಡ್ಡೆ, ಸೌತೆಕಾಯಿ, ಇನ್ನೂ ನಾನಾ ವಿಧದ ಪೈರು ತರಕಾರಿಯನ್ನು ಜಾಗರೂಕತೆಯಿಂದಿಟ್ಟಿರುವರು. ಅಲ್ಲಿರುವ ಪ್ರದರ್ಶಕನು ಎಲ್ಲವನ್ನು ಬೋಧಿಸುತ್ತಿರುವನು.

ಐದು ವರುಷಗಳೊಳಗೆ ಜಮಿನುದಾರರೆಲ್ಲರನ್ನು ನಿರ್ಮೂಲ ಮಾಡಿಬಿಡಬೇಕೆಂದು, ಪೂರ್ತಿಶಕ್ತಿ ಮುಂದಿಗೆ ಕಡಿಮೆಯಿಲ್ಲದಂತೆ ಸಂಯುಕ್ತಕೃಷಿಕ್ಷೇತ್ರವ ಆಕರ್ಷಿಸಬೇಕೆಂದೂ, ಪ್ರಥಮ ಪಂಚವರ್ಷ ಪ್ರಣಾಳಿಕೆಯಲ್ಲಿ ಏರ್ಪಾಟು ಮಾಡಿಕೊಂಡಿರುವರು. ೧೯೩೦ರಲ್ಲಿ ನೂರಕ್ಕೆ ೨೨·೪ ಮಂದಿ, ೧೯೩೧ರಲ್ಲಿ ನೂರಕ್ಕೆ ೬೨·೨ ಮಂದಿ, ೧೯೩೨ರಲ್ಲಿ ನೂರಕ್ಕೆ ೬೨ ೫ ಮಂದಿ ಸಂಯುಕ್ತ ಕೃಷಿಕ್ಷೇತ್ರಗಳಿಗೆ ಸೇರಿ ದರು. ೧೯೩೩ರಲ್ಲಿ ನೂರಕ್ಕೆ ೨೦ರಷ್ಟು ಭೂಮಿಯು ಮಾತ್ರ ಚಿಲ್ಲರೆ ವ್ಯವಸಾಯಗಾರರ ಕೈಲಿರುವುದಂತೆ. ಕಾರ್ಯಕ್ರಮದ ಪ್ರಕಾರ ೧೯೩೩ರಲ್ಲಿ ೧೪ ಕೋಟಿ ೧೦ ಲಕ್ಷ ಹೆಕ್ಟರ ಭೂಮಿಯನ್ನು ಉಳಿಮೆ ಮಾಡಿ ಬೆಳೆಸ ಬೇಕೆಂದು ನಿಶ್ಚಯಿಸಿರಲು ೧೯೩೧ರಲ್ಲಿಯೇ ಅಷ್ಟು ಕೆಲಸವನ್ನೂ ಮಾಡ ಬಲ್ಲವರಾದರು.

ಆ ಮೇಲೆ ನಾವೊಂದು ನೆಲಸಾಳಿಗೆಗೆ ಹೋದೆವು. ಅಲ್ಲಿ ವ್ಯವ ಸಾಯದ ಉಪಕರಣಗಳೆಷ್ಟೋ ವಿಧವಾದುವು. ಟ್ರಾಕ್ಟರುಗಳು, ಮರು ಸುತ್ತಿನ ನೇಗಿಲುಗಳು, ಬೀಜ ಬಿತ್ತುವ ಯಂತ್ರಗಳು, ದೊಡ್ಡ ದೊಡ್ಡ ಕಂಬೈನುಗಳು (ಕೊಯ್ದು ತುಳಿಸುವ ಯಂತ್ರಗಳು), ಎಲ್ಲವೂ ಶೇಖರಿಸಿ ಡಲ್ಪಟ್ಟಿವೆ. ಪ್ರತಿಯೊಂದು ಭಾಗವೂ ವಿವರವಾಗಿ ತೋರಲ್ಪಡು ತ್ತಿರುವುದು. ಗೋಡೆಗಳ ಮೇಲೆ ಪಂಚವರ್ಷ ಪ್ರಣಾಳಿಕೆಗೆ ಸಂಬಂಧಿಸಿದ ಆದರ್ಶಗಳು ಬರೆಯಲ್ಪಟ್ಟ ರಟ್ಟುಗಳು ಹಾಕಲ್ಪಟ್ಟಿರುವುವು. ಯಾವ ಯಾವ ಪ್ರದೇಶಗಳಲ್ಲಿ ಟ್ರಾಕ್ಟರು ಸ್ಟೇಷನುಗಳು ಹೆಚ್ಚಿರುವುವೋ ಆಯಾ ಪ್ರಾಂತ್ಯಗಳಲ್ಲಿ ಸಮಷ್ಟಿ ಕೃಷಿಕ್ಷೇತ್ರಗಳು ಹೆಚ್ಚಿದಂತೆ ತಿಳಿಯಿತು. ರಷ್ಯಾ-ದೇಶವನ್ನೆಲ್ಲಾ ವ್ಯವಸಾಯದಲ್ಲಿಡಬೇಕಾದರೆ ಹತ್ತು ಲಕ್ಷ

ಟ್ರ್ಯಾಕ್ಟರುಗಳಾದರೂ ಅಗತ್ಯವೆಂದು ಪ್ರಭುತ್ವವು ಲೆಕ್ಕಹಾಕಿ ಸ್ಟ್ಯಾಲಿನ್ ಗ್ರಾಡ್—ಖಾರಕೋವ್ ನಗರಗಳಲ್ಲಿ ಯಂತ್ರಶಾಖೆಗಳನ್ನು ಸ್ಥಾಪಿಸಿರುವದು. ಈ ಎರಡು ಯಂತ್ರಶಾಲೆಗಳೂ ವರುಷಕ್ಕೊಂದು ಲಕ್ಷ ಟ್ರ್ಯಾಕ್ಟರುಗಳನ್ನು ತಯಾರಿಸುವವಂತೆ. ೧೯೩೨ರಲ್ಲಿ 'ಚೆಲಾಂಬಿನ್ಸ್ಕ' ನಗರದಲ್ಲಿ ಸಹ ವರುಷಕ್ಕೆ ೫೦,೦೦೦ ಟ್ರ್ಯಾಕ್ಟರುಗಳನ್ನು ತಯಾರಿಸುವ ದೊಡ್ಡ ಕರ್ಮಾಗಾರವೊಂದನ್ನು ಕಟ್ಟಿರುವರು. ಲೆನಿನ್‌ಗ್ರಾಡಿನ 'ಪ್ಯುಟಿಲೋವ್' ಯಂತ್ರಶಾಲೆಯೂ ಇದೇ ಕೆಲಸವನ್ನೇ ಮೊದಲುಮಾಡಿದೆ. ಬೇಗಬೇಗನೆ ಬಹಳ ಕಡೆಗಳಲ್ಲಿ ಯಂತ್ರಶಾಲೆಗಳು ಕಟ್ಟಲ್ಪಡುತ್ತಿರುವುವಂತೆ.

ಈ ರೈತರ ಭವನವು ಬಹಳ ಕೆಲಸ ಮಾಡುತ್ತಿದೆ. ಇಲ್ಲಿಯು ಪ್ರದರ್ಶನಗಳು, ಟ್ರ್ಯಾಕ್ಟರುಗಳು ಮಾಡುತ್ತಿರುವ ಕೆಲಸದ ವಿವರಗಳು, ಸಮಷ್ಟಿ ಕೃಷಿಕ್ಷೇತ್ರಗಳ ಕ್ರಮಾಭಿವೃದ್ಧಿ ರಷ್ಯಾ ವ್ಯವಸಾಯವು ಉದ್ಯೋಗದ ರೂಪವನ್ನು ಗ್ರಹಿಸುತ್ತಿರುವುದೆಂಗು ಸ್ಪಷ್ಟಪಡಿಸುತ್ತಿರುವುದು. ಜೀವನ ವ್ಯಯ ಪ್ರಮಾಣವನ್ನು, ಆಹಾರ ಪದಾರ್ಥಗಳ ಅಭಾವವನ್ನು ನೋಡಿದರೆ ಎಷ್ಟು ವ್ಯವಸಾಯಪ್ರಧಾನವಾದ ದೇಶವಾದರೂ ರಷ್ಯಾದಲ್ಲಿ ಅಗತ್ಯವಾದಷ್ಟು ಧಾನ್ಯ ಉತ್ಪತ್ತಿಯಾಗುತ್ತಿಲ್ಲೆಂದು ತಿಳಿದುಬರುತ್ತಿದೆ. ವ್ಯವಸಾಯಕ್ಕೆ ಉಪಯೋಗಿಸುವ ಯಂತ್ರಗಳನ್ನು ಕೊಳ್ಳಲು ಯೂರೋಪಿಯನ್ ದೇಶಗಳಿಗೆ ಧಾನ್ಯವನ್ನೇ ಕೊಡಬೇಕಾಗಿರುವುದು. ಆದುದರಿಂದಲೇ ಪ್ರಭುತ್ವವು ಪ್ರಜೆಗಳಿಗೆ ಪೂರ್ತಿ ಆಹಾರವನ್ನು ಕೊಡಲಾರದೆ ಇದೆಯಂತೆ.

---

೧೦

## ಹಣವಿಲ್ಲದ ಪರದೇಶಿ

ರಾತ್ರಿ ಒಂಭತ್ತುಗಂಟೆಗೆ ಹೋಟೆಲು ಸೇರಿದೆ. ರಷ್ಯಾದಲ್ಲಿ ಚಳಿಗಾಲ. ರಾತ್ರಿ ಒಂಭತ್ತು ಗಂಟೆ ಎಂದರೆ ಬಹಳ ಹೊತ್ತಾದಂತೆ. ಭೋಜನಶಾಲೆಗೆ ಹೋದೆ. ಆ ಆಸ್ಟ್ರೇಲಿಯನು ಊಟಮಾಡುತ್ತಿದ್ದ. ಆತನ ಪಕ್ಕದಲ್ಲಿದ್ದ ಕುರ್ಚಿಯಲ್ಲಿ ಕುಳಿತುಕೊಂಡೆ.

'ನಿಮ್ಮ ಸ್ನೇಹಿತರು ಕಾಗದವನ್ನೂ ಹಣವನ್ನೂ ಕಳುಹಿಸಿದರೇ?'

'ಇಲ್ಲ, 'ಲೆನಿನ್‌ಗ್ರಾಡಿ'ನಲ್ಲಿ ಏನಾದರೂ ಸಹಾಯ ಸಿಕ್ಕಬಹುದೆಂದು ಆಶೆಯಿಂದಿರುವೆನು. ಇಲ್ಲಿಂದ ನಾಳೆ ಬೆಳಿಗ್ಗೆ ಹೊರಟು ಹೋಗುತ್ತೇನೆ. ಆದುದರಿಂದ ಅಲ್ಲಿಯ ವಿಳಾಸವನ್ನೇ ಕೊಟ್ಟಿರುವೆನು.'

'ಅಲ್ಲಿ ನಿಲ್ಲುವಿರಾ? ಹಣವಿಲ್ಲದೆ ಹೋಟೆಲಿನವರು ಊಟಹಾಕುವುದಿಲ್ಲವಲ್ಲ?'

'ಆ ಮಾರ್ಗದರ್ಶಿಕೆಯ ಸಹಾಯವನ್ನು ತೆಗೆದುಕೊಳ್ಳುವೆನು. ಆಕೆಯ ವಿಳಾಸ ನನ್ನಲ್ಲಿದೆ. ಆಕೆಯು ಬಲು ಒಳ್ಳೆಯವಳು.'

'ಹೌದು. ಬಹಳ ವಿನೋದಿ' ಎಂದು ಅಲ್ಲಿ ನಡೆದ ಮಾತು ಕತೆ, ಹಾಸ್ಯಕ್ಕಾಗಿ ನನ್ನನ್ನು ಮದುವೆ ಮಾಡಿಕೊಳ್ಳುವೆನೆಂದುದು ಎಲ್ಲವನ್ನೂ, ಹೇಳಿದೆ.

ಈ ಮಾತು ಹೇಳಿದ ಆ ಕೂಡಲೆ ಮನುಷ್ಯನು ಕೇಕೆ ಹಾಕಲಾರಂಭಿಸಿದನು.

'ಏನು ಹೀಗೆ ನಡೆಯಿತೇ? ಆದರೆ ಮೆಲ್ಲಗೆ ಆಕೆಯ ಬಳಿಗೇ ಹೋಗುವೆನು. ಆಕೆಯು ನನ್ನನ್ನು ಮದುವೆ ಯಾಗುವಳೇನೋ ಕೇಳುತ್ತೇನೆ.'

ಈ ಮಾತು ಕೇಳಿದ ಕೂಡಲೆ ನನ್ನ ಆಶ್ಚರ್ಯಕ್ಕೆ ಮಿತಿಯಿಲ್ಲವಾಯಿತು. ಅಮಿತ ಕಷ್ಟದಿಂದ ಈತನಿಗೆ ಹುಚ್ಚುಗಿಚ್ಚು ಹಿಡಿಯಲಿಲ್ಲವಲ್ಲ ಎಂದುಕೊಂಡೆ; ನಿರಾಶೆ ಈತನ ಬುದ್ಧಿಯನ್ನೇ ಕಳೆದಿರಬೇಕೆಂದುಕೊಂಡೆ.

'ನಿಮಗೆ ಮದುವೆ ಆಗಿಲ್ಲವೇ?'

'ಇನ್ನು ನಮ್ಮ ಧರ್ಮಶಾಸ್ತ್ರಗಳನ್ನೆಲ್ಲ ಕೆಸರಿನಲ್ಲಿ ತುಳಿಯಿರಿ. ಹೊಟ್ಟೆ ತುಂಬಿಸದ ಧರ್ಮ ನನಗೆ ಬೇಕಿಲ್ಲ. ಇಷ್ಟು ದಿನ ಧರ್ಮ ಧರ್ಮ ಎಂದು ನನಗೆ ಬಂದ ಲಾಭವೇನು? ನನ್ನ ಕುಟುಂಬಕ್ಕೂ, ನನಗೂ ಹಿಟ್ಟಿನಬರ ನೋಡಿ, ಆಕೆ ಮದುವೆಯಾಗಲು ಒಪ್ಪಿದರೆ ನನಗೆಲ್ಲಿಯಾದರೂ ಒಂದು ಕಡೆ ನೌಕರಿ ಸಿಗುತ್ತದೆ. ಆಗ ನನ್ನ ಸಂಬಳದಲ್ಲಿ ಸ್ವಲ್ಪ ನನ್ನ ಹೆಂಡತಿ ಮಕ್ಕಳಿಗೆ ಕಳುಹಿಸಬಹುದು. ಅವರನ್ನೆಷ್ಟು ಪ್ರೇಮದಿಂದ ನೋಡುತ್ತಿದ್ದೆನೋ!' ಎಂದು ನಡುವೇ ಮಾತನಾಡಿದ.

ಆತನ ಕಣ್ಣುಗಳಲ್ಲಿ ನೀರು ಸುರಿಯುತ್ತದೆ. ಬಡಿಸುವವನು

ನನ್ನನ್ನು ಊಟದ ತಿಕೀಟು ಕೇಳಬಂದ. ಆಗ ಆಸ್ಟ್ರೇಲಿಯನ್ನನು ತನ್ನೆದುರಿಗಿರುವ ತಟ್ಟೆಯನ್ನು ತೋರಿಸುತ್ತಾ—

'ಈ ಬೇಯಿಸಿದ ಮಾಂಸಕ್ಕೆ ಬದಲಾಗಿ ಸ್ವಲ್ಪ ರೊಟ್ಟಿಕೊಡು ವಿರಾ?' ಎಂದು ಕೇಳಿದನು.

'ಏಕೆ?'

ಬೇಯಿಸಿದ ಮಾಂಸಕ್ಕೆ ಬದಲು ರೊಟ್ಟಿ ಕೇಳುತ್ತಿರುವನೇಕೆ ಎಂದು ಆತ ಭ್ರಾಂತನಾದ. ಈತ ನನ್ನ ಕಡೆಗೆ ತಿರುಗಿದ. 'ನಾಳೆಗೆ ನನಗೆ ತಿಂಡಿಯು ಬೇಕಲ್ಲವೇ? ಈಗ, ಈ ಅವಸ್ಥೆಯಲ್ಲಿ ಮಾಂಸತಿನ್ನುವುದು ನನ್ನ ಸ್ಥಿತಿಗೆ ತಕ್ಕ ಕೆಲಸವಲ್ಲ. ನಾಳೆ ನಾನು ಉಪವಾಸ ಸಾಯಬೇಕಾದುದೇ. ಅದಕ್ಕಾಗಿ ನಾಳೆಗೆಂದು ರೊಟ್ಟಿಯನ್ನು ಕೇಳುತ್ತಿರುವೆನು.' ಹಸಿವು ಮನುಷ್ಯನ ಆತ್ಮಾಭಿಮಾನವನ್ನು ಯಾವ ವಿಧವಾಗಿ ನಾಶ ಮಾಡುವುದೋ ಈಗ ನನಗೆ ಅರ್ಥವಾಯಿತು.

ಬಡಿಸುವವನು ಬೇಯಿಸಿದ ಮಾಂಸವನ್ನು ತೆಗೆದುಕೊಂಡು ಹೋಗಿ, ಎರಡೇ ಎರಡು ಕರಿಯ ರೊಟ್ಟಿಗಳನ್ನು ತಂದು ಕೊಟ್ಟನು. ಆತನು, ಆ ರೊಟ್ಟಿಗಳನ್ನು ಜಾಗರೂಕತೆಯಿಂದ ಕಾಗದದಲ್ಲಿ ಸುತ್ತಿಕೊಂಡು ಜೇಬಿನಲ್ಲಿಟ್ಟುಕೊಂಡನು. ಆತನ ದುರವಸ್ಥೆಯನ್ನು ನೋಡಿದರೆ ನನಗೆ ರೊಟ್ಟಿಯೇ ಹೋಗಲಿಲ್ಲ. ಹಸಿದವನ ಎದುರಿನಲ್ಲಿ ತಿಂಡಿತಿನ್ನುವುದು ಪಾಪ ಅನಿಸಿತು. 'ನನಗಿದು ರುಚಿಸುತ್ತಿಲ್ಲ. ನಿಮಗೀ ರೊಟ್ಟಿಯನ್ನು ಕೊಡಲೇನು?' 'ನಿಮ್ಮ ರೊಟ್ಟಿ ಬೇಡ. ಹಗಲೆಲ್ಲಾ ತಿರುಗುವುದರಿಂದ ನಿಮಗೆ ಬಹಳ ಹಸಿವಾಗುತ್ತದೆ.' 'ಅಬ್ಬಾ? ನನಗಷ್ಟು ಹಸಿವಾಗುತ್ತಿಲ್ಲ. ಅದೂ ಅಲ್ಲದೆ ನನಗೀ ರೊಟ್ಟಿಯು ಹಿತವಾಗಿಲ್ಲ.' ಮತ್ತೆಮಾತಾಡದೆ ಆ ರೊಟ್ಟಿಯನ್ನು ಆತನ ಕೈಲಿಟ್ಟನು.

'ನಮಸ್ಕಾರ!' ಆತನ ಕಂಠವು ಗದ್ಗದಿತವಾಯಿತು.

ಆ ರಾತ್ರಿ ಒಂದು ಕಪ್ಪು ಚಾ ವಿನಾ ಮತ್ತೇನನ್ನೂ ತೆಗೆದುಕೊಳ್ಳದಿದ್ದರೂ ಮನಸ್ಸಿಗೆ ಸಂತೋಷ. ಸಂತುಷ್ಟಿಯಿಂದ ನನ್ನ ಹೊಟ್ಟೆ ತುಂಬಿತ್ತು.

---

ಧರ್ಮ

ಮರುದಿನ ನಾವು ಮಾಸ್ಕೋ ನಗರದಲ್ಲಿ, ಸುಪ್ರಸಿದ್ಧವಾದ ಚೀನಾ ಗೋಡೆ, ಟ್ರೇಡ್ ಯೂನಿಯನ್ ಭವನ, ಪಾರಿಶ್ರಾಮಿಕ ಭವನ, ವಿದೇಶಾಂಗ ಶಾಖಾ ಭವನ, ಮೊದಲಾದುವೆಷ್ಟನ್ನೋ ನೋಡಿದೆವು. ಚೀನಾ ಗೋಡೆ ನಗರದಲ್ಲಿರುವ ಪುರಾತನ ಕೋಟೆಯ ಗೋಡೆ. ಪ್ರಭುತ್ವ ಭವನಗಳೆಲ್ಲವೂ ದೊಡ್ಡವಾಗಿಯೂ, ಪರಿಶುಭ್ರವಾಗಿಯೂ ಇವೆ.

ನಮ್ಮ ಮೋಟಾರು ತಿರುಗಿ ತಿರುಗಿ 'ಸೋವಿಯಟ್ ಸ್ಕ್ವೇರ್' ನೊಳಕ್ಕೆ ಬಂದಿತು. ಲೆನಿನ್ ಸಂಸ್ಥೆ, ಸ್ವಾತಂತ್ರ್ಯ ಸ್ತಂಭಗಳು ಈ ಕೂಟ ದಲ್ಲಿ ಇವೆ. ಅಲ್ಲಿಂದ ವಿಪ್ಲವ ವಸ್ತುಪ್ರದರ್ಶನ ಶಾಲೆ, ಇಜ್ವೆಸ್ತಾ ಮೊದ ಲಾದ ಪತ್ರಿಕಾಲಯಗಳೂ, ಶಕ್ತಿಸಂಗ್ರಹಾಲಯ, ಶಾಸ್ತ್ರೀಯ ಕಲಾರಂಗ, ಗ್ರಾಂಡ್ ನಾಟಕ ಶಾಲೆ ಮುಂತಾದ ದರ್ಶನೀಯ ಸ್ಥಾನಗಳೆಷ್ಟನ್ನೋ ನೋಡುತ್ತಾ ಮುಂದಕ್ಕೆ ನಡೆದೆವು.

ಮಾಸ್ಕೋ ನಗರದ ಬೀದಿಗಳು ಎತ್ತರ, ತಗ್ಗು ಗುಡ್ಡದ ಮೇಲೆ ಇದ್ದಂತೆ ಕಂಡುಬರುವುದು. ಬೂದಿ ಬಣ್ಣದ ಕೋಟುಗಳನ್ನು ಹಾಕಿ ಕೊಂಡ ಪೋಲೀಸರು ಅಲ್ಲಲ್ಲಿ ನಿಂತು ದಾರಿಗರನ್ನು ನೋಡಿಕೊಳ್ಳುತ್ತಿರು ವರು. ಯೂರೋಪಿನ ದೇಶದ ಪೋಲೀಸಿನವರಂತೆ ಇವರು ಆಡಂಬರ ವಾಗಿಲ್ಲ; ಪೋಲೀಸಿನವರಲ್ಲಿ ಸ್ತ್ರೀಯರೇ ಹೆಚ್ಚು.

ನಮ್ಮ ಮೋಟಾರು ಹೋಗಿ ಪುಷ್ಕಿನ್ ಸ್ಕ್ವೇರಿನಲ್ಲೊಂದು ಚರ್ಚಿನ ಮುಂದೆ ನಿಂತಿತು. ಉಳಿದ ಎಲ್ಲಾ ಚರ್ಚುಗಳಂತೆ ಇದೂ ಸಹ ಮತವಿರುದ್ಧ ಪ್ರದರ್ಶನ ಶಾಲೆಯಾಗಿರುವುದು. ನಾವು ಒಳಗೆ ಹೋದೆವು. ಅಲ್ಲಿನ ಪ್ರದರ್ಶಕಳು ಬಹಳ ಅಸಹ್ಯವಾಗಿದ್ದಳು. ಆಕೆಯು ಹುಟ್ಟಿದ ಮೇಲೆ ಎಂದೂ ಸ್ನಾನ ಮಾಡಲಿಲ್ಲವೆಂದೂ, ಮುಖವನ್ನಾದರೂ ತೊಳೆದು ಕೊಳ್ಳಲಿಲ್ಲವೆಂದೂ ತೋರುತ್ತದೆ. ಆ ಸ್ವರೂಪವನ್ನು ನೆನೆದರೆ ಅಸಹ್ಯ ವಾಗುತ್ತದೆ. ನಾನಾಕೆಯ ಹತ್ತಿರ ಸಹ ನಿಲ್ಲಲಾರದೆ ಹೋದೆ. ಮುಂದೆ

ನೋಡಲು ನನ್ನ ಮಾರ್ಗದರ್ಶಿಕೆಯೊಡನೆ ಬೇರೆ ಕಡೆಗೆ ಹೊರಟೆನು. ಮ್ಯೂಜಿಯಂ ಅಷ್ಟು ದೊಡ್ಡದಲ್ಲದಿದ್ದರೂ, ಬೆಲೆ ಬಾಳುವ ವಸ್ತುಗಳು ಬಹಳವಿವೆ. ನಿದರ್ಶನಗಳಿಂದಲೂ ಪ್ರತಿಬಿಂಬಗಳಿಂದಲೂ ಡಾರ್ವಿನ್ ಪರಿವರ್ತನವಾದವು ಬೋಧಿಸಲ್ಪಡುತ್ತಿದೆ. ಸುತ್ತುತ್ತ ಸುತ್ತುತ್ತ, ಒಂದಾನೊಂದು ಕಾಲದಲ್ಲಿ ಅತ್ಯಂತ ಪವಿತ್ರವೆಂದು ಪೂಜಿಸಲ್ಪಟ್ಟ ವಸ್ತುಗಳಿದ್ದ ಸ್ಥಳಕ್ಕೆ ಬಂದೆವು. ಅನೇಕ ಮೂರ್ತಿಗಳು,—ಬಂಗಾರದ ರಟ್ಟಿನಿಂದ ಭದ್ರವಾಗಿರಿಸಲ್ಪಟ್ಟ ಬೈಬಲುಗಳು—ಇಂತಹವುಗಳೇ ಎಷ್ಟೋ—ಅಲ್ಲಿರುವುವು. ಅವುಗಳನ್ನು ಮುಟ್ಟದಿದ್ದರೂ, ಪೂಜಿಸದಿದ್ದರೂ, ಯಾವ ಪ್ರಮಾದವೂ ಇಲ್ಲವೆಂದೂ ಸರ್ವಶಕ್ತಿಯುತವಾದವೆಂದು ಹೇಳಲ್ಪಡುತ್ತಿರುವ ಪ್ರತಿಯೊಂದೂ, ನಿಜವಾಗಿ ನಿರ್ಜೀವವಾದವುಗಳೆಂದೂ, ಶಕ್ತಿಹೀನವಾದುವೆಂದೂ ಪ್ರಜೆಗಳಿಗೆ ಸ್ಪಷ್ಟವಾಗಿ ತಿಳಿಸುತ್ತಿರುವುವು. ರೈತರು ಬೈಬಲನ್ನು ಬೊಂಬೆಗಳನ್ನು ಬೀಸಾಡಿರುವರಂತೆ. ಧರ್ಮಗ್ರಂಥದ ಕಾಗದಗಳನ್ನು ಹರಿದುಹಾಕಿ ಸಿಗರೇಟುಗಳಿಗಾಗಿ ಸುತ್ತಿ ಸುಟ್ಟುಹಾಕಿದರಂತೆ. ಸಮಾಧಿ ಸ್ಥಳಗಳಲ್ಲಿರುವ ಕಲ್ಲುಗಳನ್ನೂ ಸಹ ಕಿತ್ತುಕೊಂಡು ಬಂದು, ಮನೆಗಳಿಗುಪಯೋಗಿಸಿಕೊಂಡರಂತೆ.

ಬೈಬಲಿನಲ್ಲಿ ಸೂರ್ಯನು ಭೂಮಿಯ ಸುತ್ತು ತಿರುಗುತ್ತಿರುವನೆಂಬ ಮಾತನ್ನು ಉದಾಹರಿಸಿ, ಅದು ಬರಿಯ ಸುಳ್ಳೆಂದು ನಿರೂಪಿಸುತ್ತ, ಹಾಗೇ ಅಸಂಬದ್ಧ ವಾಕ್ಯ ಕೆಲವನ್ನು ಉದಾಹರಣೆಯಾಗಿ ತೋರಿಸಿ, ಬೈಬಲು ಬರಿಯ ಸುಳ್ಳಿನ ಸಂತೆಯೆಂದು ನಿರೂಪಿಸಿರುವರು. ಮನುಷ್ಯರಲ್ಲಿ ವರ್ಗಗಳನ್ನು ದೇವರು ಸೃಷ್ಟಿಸಿರುವನೆಂದು ಬೈಬಲು ಹೇಳುತ್ತಿರುವುದು. ಅದನ್ನು ತೋರಿಸಿ, ಕೆಲವು ವರ್ಗಗಳನ್ನು ಶಾಶ್ವತವಾಗಿ ಉನ್ನತ ವರ್ಗದವರ ಕೆಳಗೆ ಗುಲಾಮಗಿರಿಯಲ್ಲಿಡುವುದಕ್ಕಾಗಿಯೇ ಈ ಗ್ರಂಥಗಳನ್ನು ಉಪಯೋಗಿಸುತ್ತಿರುವರೆಂದೂ ಅವಕ್ಕೆ ಬೆಲೆಯೇನೂ ಇಲ್ಲವೆಂದೂ ಪ್ರಜೆಗಳಿಗೆ ಉಪದೇಶ ಮಾಡಿರುವರು. ಇಲ್ಲಿ ಬೈಬಲಿನಲ್ಲಿರುವ ಧಾರ್ಮಿಕ ಸಿದ್ಧಾಂತಗಳನ್ನು ಬರೆದ ರಟ್ಟುಗಳೂ, ಅದರ ಪಕ್ಕದಲ್ಲಿಯೇ ವಿಜ್ಞಾನ ಶಾಸ್ತ್ರದ ರೀತಿಯಾಗಿ ಅದರ ಅಸಂಬದ್ಧತೆಯನ್ನು ನಿರೂಪಿಸುತ್ತ ಬರೆಯಲ್ಪಟ್ಟ ರಟ್ಟುಗಳೂ ತೂಗುಹಾಕಲ್ಪಟ್ಟಿರುವುವು. 'ಈಪಾದರಿ

ಗಳು ಜನಸಾಮಾನ್ಯರ ಹಿತಚಿಂತನೆಯನ್ನೂ ಶುಭವನ್ನೂ ಬಯಸಲಿಲ್ಲ ವೆಂದೂ ಇವರೆಲ್ಲ 'ಝಾರ'ರ ಏಜೆಂಟರೆಂದೂ, ನಿರೂಪಿಸುತ್ತ, ಆವರವರಿಗೆ ನಡೆದ ಉತ್ತರ ಪ್ರತ್ಯುತ್ತರಗಳ ನಕಲುಗಳನ್ನು ಪ್ರತಿಯೊಂದು ಸ್ಥಳದ ಲ್ಲಿಯೂ ತೂಗುಹಾಕಿರುವರು. ಸೋವಿಯಟ್ ಪ್ರಭುತ್ವವು, ೧೯೨೯ ಏಪ್ರಿಲ್ ತಿಂಗಳಲ್ಲಿ, ಧರ್ಮೋಪನ್ಯಾಸಗಳನ್ನು ಮಾಡಕೂಡದೆಂದೂ ಧಾರ್ಮಿಕ ಸಂಸ್ಥೆಗಳಿಗೆ ಸಹಾಯ ಕೊಡಕೂಡದೆಂದೂ ಶಾಸನಗಳನ್ನು ಮಾಡಿ ಮತ ಧರ್ಮಗಳಿಗೆ ತಡೆಹಾಕಿರುವರು. ಹದಿನೆಂಟು ವರ್ಷಕ್ಕೆ ಕಡಿಮೆಯ ವಯಸ್ಸಿನವರು ಯಾರೂ ಧಾರ್ಮಿಕ ಗ್ರಂಥಗಳನ್ನು ಓದಲಾಗ ದೆಂದು ಕಾನೂನು. ಅದಕ್ಕಿಂತಲೂ ಹೆಚ್ಚಿನ ವಯಸ್ಸಿನವರು ಪ್ರತ್ಯೇಕ ವಾಗಿ ಮತಗ್ರಂಥಗಳನ್ನು ಓದಿಕೊಳ್ಳಬಹುದು.

ಧಾರ್ಮಿಕ ಪುರುಷರನ್ನು ಪ್ರಭುತ್ವವು ಶತ್ರುಸಮಾನವಾಗಿ ನೋಡು ವುದೆಂದೂ, ಚರ್ಚುಗಳೆಲ್ಲಾ ನೆಲಸಮವಾಗಿರುವುವೆಂದೂ, 'ಜೀ. ಪಿ. ಯು' ಗೂಢಚಾರರು ಧಾರ್ಮಿಕಾಭಿಪ್ರಾಯವುಳ್ಳವರನ್ನು ನೆರಳಂತೆ ಹಿಂಬಾಲಿಸುವರೆಂದೂ, ವಿದೇಶೀಯರು ಬಹಳ ಮಂದಿ ಬರೆಯುತ್ತಿರು ವರು. ಆ ಮಾತು ಸರಿಯೆಂದು ಕಂಡುಬರಲಿಲ್ಲ. ಅವೆಲ್ಲಾ ಸೋವಿಯೆಟ್ ಶತ್ರುಗಳ ದೂರು. ಮಾಸ್ಕೋದಲ್ಲಿ 'ರೆಡ್ ಸ್ಕ್ವೇರಿ' ನಲ್ಲಿ 'ಕ್ರೆಮ್ಲಿನ್' ಗೆ ಎದುರಿಗೆ ಈಗ ಮ್ಯೂಜಿಯಂ ಇರುವ 'ಸೆಂಟ್ ಬೇಸಿಲ್ ಚರ್ಚಿ' ಗೆ ಪಕ್ಕದಲ್ಲಿ ಒಂದು ಚರ್ಚನ್ನು ನೋಡಿದೆನು. ಈ ಚರ್ಚಿನಲ್ಲಿ ಎಷ್ಟೋ ಮಂದಿ ಮುದುಕರು ಮೊಣಕಾಲೂರಿ ಪ್ರಾರ್ಥಿಸುತ್ತಿರುವುದನ್ನೂ ನನ್ನ ಕಣ್ಣಿಂದ ನೋಡಿದೆ. ಈ ಚರ್ಚುಗಳಿಗೆ ಪ್ರಭುತ್ವವು ಯಾವ ಸೌಕರ್ಯಗ ಳನ್ನುಂಟುಮಾಡುವುದಿಲ್ಲ: ಬಾಡಿಗೆ ಕೊಡಬೇಕಾದುದೇ. ಯಾವ ಚರ್ಚ ನ್ನಾದರೂ ಅದರ ಸುತ್ತುಮುತ್ತಲಿರುವವರ ಅಭಿಪ್ರಾಯ ತಿಳಿದು ಕೊಳ್ಳದೇ ಕೆಡವಲು ಅವಕಾಶವಿಲ್ಲ. ಅದನ್ನು ಯಾವುದಾದರೂ ಪ್ರಜಾ ಸಂಸ್ಥೆಯಾಗಿ ಮಾರ್ಪಡಿಸಬೇಕಾದರೂ ಪ್ರಜೆಗಳ ಮತವನ್ನು ತೆಗೆದು ಕೊಳ್ಳಬೇಕಾದುದೇ. ಧರ್ಮಕಲಗಳೆಂದರೆ ಸರಕಾರಕ್ಕಿಷ್ಟವಿಲ್ಲದಿದ್ದರೂ ಯಾರನ್ನೂ ಮತಧರ್ಮಗಳನ್ನೂ ಬಿಟ್ಟುಬಿಡಬೇಕೆಂದು ನಿರ್ಬಂಧಿಸುವು ದಿಲ್ಲ. ಸರಕಾರವು ತನ್ನ ಆಡಳಿತದಲ್ಲಿದ್ದ ಪ್ರಚಾರ ಸಾಧನೆಗಳ ಮೂಲಕ-

ಪತ್ರಿಕೆಗಳು, ಪುಸ್ತಕಗಳು, ರೇಡಿಯೋಗಳು, ಸಿನಿಮಾಗಳು, ಮುಂತಾದ ವುಗಳ ಮೂಲಕ—ಮತಧರ್ಮಕ್ಕೆ ವಿರೋಧವಾಗಿ ಪ್ರಚಾರ ಮಾಡುತ್ತಿರುವುದು. ಮ್ಯೂಜಿಯಂಗಳಲ್ಲಿ ಅನೇಕ ಪ್ರಕಟನೆಗಳು, ಪಾದರಿಗಳು ಪ್ರಭುತ್ವ ವಿರೋಧಿಗಳೆಂದು ಪ್ರಚಾರ ಮಾಡುತ್ತಿರುವರು. ಒಂದು ಚಿತ್ರದಲ್ಲಿ ಪ್ರಭುತ್ವವು ಹಡಗಿನಂತೆಯೂ, ಜಮೀನುದಾರರು, ಬಂಡವಾಳಗಾರರು, ಪಾದರಿಗಳು, ಅದನ್ನು ಮುಳುಗಿಸಲು ಪ್ರಯತ್ನಿಸುತ್ತಿದ್ದಂತೆಯೂ, ಚಿತ್ರಿಸಲ್ಪಟ್ಟಿರುವುದು.

ನಾನು ಹೊರಗೆ ಬಂದೊಡನೆಯೇ ಮ್ಯೂಜಿಯಂ ಅಧಿಕಾರಿಯು, ಮತಧರ್ಮದ ವಿಚಾರವಾಗಿ ನನ್ನ ಅಭಿಪ್ರಾಯವೇನು ಎಂದು ಮಾರ್ಗದರ್ಶಿಕೆಯ ಸಂಗಡ ಕೇಳಿಸಿದಳು. 'ನಿಮಗೆ ಮತವೆಂದರೆ ವಿಶ್ವಾಸವಿರುವುದೇ ?'

'ಇದೆ.'

'ಇದೇಯೇ ! ಕಾರಣ? '

'ಮತದ ಮೇಲೆ ಏತಕ್ಕೆ ವಿಶ್ವಾಸವನ್ನಿಡಬಾರದೋ ನೀವು ಹೇಳಲಾರದೆ ಹೋಗಿರುವಿರಾದುದರಿಂದ.'

'ಇಲ್ಲಿಯುವರೆಗೂ ನೋಡಿದ್ದು ಸಾಲದೆ? ಮತಧರ್ಮಗಳ ಹೆಸರಿನಲ್ಲಿ ನಡೆಯುತ್ತಿರುವ ದುರಂತಗಳನ್ನು, ಮೋಸದ ಕೆಲಸಗಳನ್ನು ನೋಡಿಯೂ ನಿಮ್ಮ ಮತವಿಶ್ವಾಸವು ಕಡಿಮೆಯಾಗಿಲ್ಲವೇ? '

'ನೀವು ಮತದ ವಿಚಾರವಲ್ಲ. ಪಾದರಿಗಳ ಮೇಲೆ ದೂರು ಹೇಳುತ್ತಿರುವಿರಿ'

ಈ ಚರ್ಚುಗಳು ಆಚಾರದ ಹೆಸರು ಹೇಳಿ, ಹಬ್ಬಗಳ ಹೆಸರನ್ನು ಹೇಳಿ, ರೈತರನ್ನೂ ಬಡವರನ್ನೂ ಯಾವ ರೀತಿಯಲ್ಲಿ ಸುಲಿಯುತ್ತಿರುವದು ನಿಮಗೆ ತಿಳಿಯದೆ? ಪಾಪ ಈ ಬಡ ಪ್ರಜೆಗಳು ಎಷ್ಟು ಕಷ್ಟಪಟ್ಟು ತೀರ್ಥಯಾತ್ರೆಗೆ ಹೋಗುವರು? ಬಿಷಪ್ಪರ ಶವಗಳನ್ನು ನೆಲಮಾಳಿಗೆಗಳಲ್ಲಿಡುತ್ತಿದ್ದರು. ಪ್ರಜೆಗಳು ಅಲ್ಲಿಗೆ ಹೋಗಿ ಪ್ರಾರ್ಥನೆಗಳನ್ನು ಮಾಡುತ್ತಿದ್ದರು. ಅವರನ್ನಿಟ್ಟಿದ್ದ ಪೆಟ್ಟಿಗೆಗಳನ್ನು ಮುತ್ತಿಟ್ಟುಕೊಳ್ಳುತ್ತಿದ್ದರು. ವಿಪ್ಲವವಾದ ಮೇಲೆ ಆ ನೆಲಮಾಳಿಗೆಳನ್ನು ಅಗೆದು

ತೆಗೆದಾಗ ಪೆಟ್ಟಿಗೆಗಳಲ್ಲಿ ಶವಗಳೇ ಇರಲಿಲ್ಲ. ಹಿಟ್ಟಿನಿಂದ ಮಾಡಿದ ಬೊಂಬೆಗಳೇ. ನೀವು ಮ್ಯೂಜಿಯಂನಲ್ಲಿ ಅಂತಹ ಶರೀರವನ್ನು ನೋಡ ಲಿಲ್ಲವೆ ? '

' ನೋಡಿದೆ. ಆದರೆ ನೀವೆಷ್ಟು ದೂರು ಹೇಳಿದರೂ ಅದು ಪಾದ ರಿಗಳ ಮೇಲೆ ಮಾತ್ರ. ಮತದ ವಿಚಾರವಾಗಿ ನೀವೇನೂ ಹೇಳುತ್ತಿಲ್ಲ. '

ನನ್ನ ಈ ಪ್ರಶ್ನೆಯನ್ನು ಕೇಳಿ ಅವರು ಬಹಳ ಆಶ್ಚರ್ಯಪಟ್ಟರು. ' ಇತರರ ಬಳಿ ದಯೆಯಿಂದ ವರ್ತಿಸಿರೆಂದು ಧರ್ಮವು ಬೋಧಿಸುತ್ತದೆ ಪಾಪ ಮಾಡಬೇಡವೆಂದು—' ಮಾತಿನ ಮಧ್ಯೆ ಆಕೆಯು ಅಡ್ಡಬಂದು, ' ಪಾಪವೆಂದರೆ ಏನು ? ಧರ್ಮಾನುಸಾರವಾಗಿ ಚರ್ಚಿನಲ್ಲಿ ಮದುವೆ ಯಾಗದೆ, ಭಾರ್ಯೆಭರ್ತರಂತೆ ಜೀವನ ನಡೆಯುಸುವುದು ಪಾಪವಂತೆ. ಇತ ರರನ್ನು ದೋಚಿ ತಿನ್ನುವುದು ಪುಣ್ಯವಂತೆ. ಈಶ್ವರನ ಉಪದೇಶ ಇದೇ ಯೇನು ? '

ಅದ್ಭುತವಾದ ಪ್ರಶ್ನೆ. ಪಾಪವೆಂದರೆ ಏನೋ ಹೇಳಲಾರದ ವಿಷಯ. ಹಿಂದೂಗಳು ಪಾಪವೆನ್ನುವುದನ್ನು ಮುಹಮ್ಮದೀಯರು ಪುಣ್ಯವೆನ್ನು ತ್ತಾರೆ. ಇವರಿಬ್ಬರೂ ಹೌದೆಂದುದು ಕ್ರಿಶ್ಚಿಯನ್ನರಿಗಾಗದು. ಯಹೂ ದ್ಯರಿಗೆ ಸತ್ಕರ್ಮವಾಗಿ ಕಾಣುವುದು ಕೇಥಲಿಕ್ಕರಿಗೆ ಪಾಪಕರ್ಮ ' ಪ್ರತಿ ಧರ್ಮದಲ್ಲಿಯೂ ಕೆಲವು ವಿಶೇಷ ಆಚಾರಗಳು, ಪದ್ಧತಿಗಳು ಇರುವುವು. ಧರ್ಮವು ಸ್ವಲ್ಪ ಹಳೆಯದಾಯಿತೆಂದರೆ ಸಾಮಾಜಿಕ ಆಚಾರಗಳು ಅದರಲ್ಲಿ ಪ್ರವೇಶಿಸುವು. ಆದುದರಿಂದಲೇ ಮತದಲ್ಲಿ ಸಮಯಾನುಸಾರವಾಗಿ ವ್ಯತ್ಯಾಸವಾಗುವುದು ಅಗತ್ಯ. ಆದರೆ, ನಡೆಯುತ್ತಿರುವ ತಪ್ಪುಗಳಿಗೆಲ್ಲಾ ಧರ್ಮಸೂತ್ರಗಳನ್ನೇ ಆಧಾರವಾಗಿ ಮಾಡಕೂಡದು. '

' ಆದರೆ ಧರ್ಮದ ಮೂಲಸೂತ್ರಗಳಾವುವೆನ್ನುವಿರಿ ? ನೆರೆಹೊರೆಯವ ರನ್ನು ಪ್ರೀತಿಸುವುದು, ಅವರಿಗೆ ನೆರವಾಗುವುದು, ಇತರರಲ್ಲಿ ದಯೆ ಯಿಂದಿರುವುದು, ಇವೇಯೇನು ? '

ನಾನು ತಲೆತೂಗಿದೆ. ಆಕೆ ಉತ್ಸಾಹದಿಂದ ಕುಣಿದಳು.

' ಆದರೆ ಈ ಪ್ರಪಂಚದಲ್ಲೆಲ್ಲಾ ನಮಗಿಂತಲೂ ಧರ್ಮಿಷ್ಠರೊಬ್ಬರೂ ಇಲ್ಲ. ಬಡವರಿಗೆ ಸಹಾಯ ಮಾಡಬೇಕೆಂದೂ, ಸ್ನೇಹಿತರಿಗೆ ಸುಖ

ದುಃಖಗಳಲ್ಲಿ ಸಹಾಯವಾಗಿರೆಂದೂ, ಅವಧ್ಯರಲ್ಲಿ ದಯೆ, ತೋರಿರೆಂದೂ ನಿಮ್ಮ ಧರ್ಮವು ಪ್ರಜಾಹೃದಯಕ್ಕೆ ಅರ್ಜಿ ಹಾಕಿಕೊಳ್ಳಬೇಕು. ಆದರ ಮೇಲೆ ಸ್ಕೂಲು ಕಟ್ಟಿಸಿ ಆಸ್ಪತ್ರೆ ಇಟ್ಟು, ಭಾವಿ ಕೆರೆ ತೋಡಿಸಿ. ಅನಾಥಾಲಯ ಕಟ್ಟಿಸಿ, ನೀವು ಪರಲೋಕದ ಸುಖಕ್ಕಾಗಿ ಪುಣ್ಯವನ್ನು ವೃದ್ಧಿಮಾಡಿಕೊಳ್ಳುತ್ತಿರುವಿರಿ. ನಮ್ಮ ಮತವು ಒಳ್ಳೆಯ ಕೆಲಸಗಳನ್ನು ಮಾಡಿರೆಂದು ನಮಗ ಜನ್ಮಹ ಮಾಡಿಕೊಳ್ಳುವುದಿಲ್ಲ. ಹಾಗೆ ನಡಿಯಿರೆಂದು ವಿಧಿಸುವುದು. ನೀವು ಒಡವರಿಗೆ ಸಹಾಯ ಮಾಡುತ್ತೀರಿ, ಆದರೆ, ನಮ್ಮ ದೇಶದಲ್ಲಿ ಒಡ ಒಡತನವೆಂಬುವುದನ್ನೇ ಇಲ್ಲದಂತೆ ಮಾಡುತ್ತಿರುವೆವು. ನಮ್ಮೆಲ್ಲರದೂ ಒಂದೇ ತರಗತಿ. ನಾವೆಲ್ಲರೂ ಸಮಾನವಾಗಿ ಸುಖವನ್ನನುಭವಿಸುತ್ತಿರುವೆವು. ನಮ್ಮ ಸಮಾಜದಲ್ಲಿ ಯಾರೂ ಒಬ್ಬರೆದುರಿನಲ್ಲಿ ಅಭಿಮಾನವನ್ನೂ ತ್ಯಜಿಸಿ ಕೈಚಾಚಲಾರರು. ಅಗತ್ಯವೂ ಇಲ್ಲ. ನಾವೆಲ್ಲರೂ ಒಂದೇ. ತಿಳಿಯಿತೇ ? '

ಮಾರ್ಗದರ್ಶಿಕೆಯನ್ನು ಉದ್ರೇಕಗೊಳಿಸಬೇಕೆಂಬ ಉದ್ದೇಶ್ಯದಿಂದ, 'ಆದರೆ ನಿಮಗೂ ಒಂದು ಮತವಿದ್ದೇ ಇದೆ. ಮತವಿಲ್ಲವೆಂದು ಹೇಳಲೇಕೋ ? ' ಎಂದೆನು. ಆಕೆಯು ಉಗ್ರಮೂರ್ತಿಯಾದಳು. 'ನಾವು ಯಾವ ಮತವನ್ನೂ ಅಂಗೀಕರಿಸೆವು. ಮತವೆನ್ನುವ ಮಾತನ್ನು ನಮ್ಮ ಶಬ್ದಕೋಶದಿಂದ ತೆಗೆದುಹಾಕಲು ಯೋಚಿಸಿರುವೆವು. ನಾವು ಕಮ್ಯೂನಿಷ್ಟರು. ಅಷ್ಟೇ. '

' ನಿಮ್ಮ ಮತ ಕಮ್ಯೂನಿಜಂ ಎಂದಂತಲ್ಲವೇ ? '

' ನಿಮಗಿಷ್ಟವಿದ್ದರೆ ಹಾಗೇ ಅನ್ನಿ ? '

ಸುರಿಯುತ್ತಿದ್ದ ಮಂಜನ್ನೂ ಸೀಳಿಕೊಂಡು ನಮ್ಮ ಮೋಟಾರು ಹೊರಟಿತು. ಅಲ್ಲಿಂದ ಕೂಲಿಯವರ ವ್ಯಾಯಾಮಶಾಲೆ ನೋಡಲು ನಗರದ ಹೊರಕ್ಕೆ ಬಂದೆವು. ಪಟ್ಟಣದಲ್ಲಿ ಮಾಡಿದಂತೆ ಇಲ್ಲಿ ರಸ್ತೆಯ ಮೇಲೆ ಬಿದ್ದಿರುವ ಹಿಮವನ್ನು ತೆಗೆಯರು. ದಾರಿಯಾವುದೋ, ಹೊಲವಾವುದೋ, ತಿಳಿಯುವುದೇ ಕಷ್ಟ. ಮೋಟಾರು ಮೇಲೂ ಕೆಳಗೂ ಹಾರುತ್ತ ಹೋಗುತ್ತಿದೆ. ಹೆಜ್ಜೆಹೆಜ್ಜೆಗೆ ಎಲ್ಲಿ ಜಾರಿಬೀಳುವುದೋ ಎಂದು ಭಯ. ಒಂದು ಕಾರು ಮಂಜಿನಲ್ಲಿ ಜಾರಿ, ದಾರಿತಪ್ಪಿ, ಒಂದು

ಗಿಡಕ್ಕೆ ಹೊಡೆಯಿತು. ಪೂರಾ ಕೆಟ್ಟಿತು ಕಾರು. ಜನರು ಮಾತ್ರ ಒದು ಕಿದರು. ದಾರಿಯಲ್ಲಿ ಹಿಂದೆ ಬರುತ್ತಿದ್ದುದರಿಂದ ಆ ಮಂಜಿನಲ್ಲೊಂದು ವಿಧವಾದ ಬೂದಿ ಬಣ್ಣದ ಸಾಲು ಏರ್ಪಟ್ಟಿರುವುದು. ರಸ್ತೆಗೂ, ಮೈದಾನಕ್ಕೂ ಭೇದವನ್ನು ತೋರಿಸಲು ಉಳಿದಿರುವುದು ಈ ರೇಖೆಯೊಂದೇ.

---

## ೧೨

## ಮಲ್ಲಶಾಲೆ

ಮಲ್ಲಶಾಲೆಗೆ (ಸ್ಟೇಡಿಯಂ) ಒಂದೆವು. ಇಷ್ಟರಲ್ಲಿ ಆಕಾಶವು ಮೇಘಗಳಿಂದ ಮುಚ್ಚಲ್ಪಟ್ಟು ಬೆಳ್ಳಗೆ ಹಿಮದ ಹನಿ ಬೀಳಲಾರಂಭಿಸಿದುವು; ನೋಡುನೋಡುತ್ತಿದ್ದಂತೆಯೇ ನಮ್ಮ ಓವರುಕೋಟುಗಳು ಬೆಳ್ಳಗಾಗಿ ಹೋದುವು. ಅಂತೂ ಜಾರಿ ಕೆಳಗೆ ಬೀಳದೆಯೇ ಒಳಕ್ಕೆ ಹೋದೆವು.

ಮಲ್ಲಶಾಲೆ ಹೊಸದು. ಕೂಲಿಯವರಿಲ್ಲಿಗೆ ಆಡಲಿಕ್ಕೆ, ಆಟ ನೋಡಲಿಕ್ಕೆ ಬರುತ್ತಿರುವರು. ಪ್ರಭುತ್ವವು ಕೂಲಿಕಾರರ ಮಾನಸಿಕಾಭಿವೃದ್ಧಿಗಾಗಿ, ಕ್ಲಬ್ಬು, ಪಾಠಶಾಲೆ, ಗ್ರಂಥಾಲಯ, ರೇಡಿಯೋಗಳನ್ನು ಹೇಗೆ ತೆರೆದಿರುವರೋ ಹಾಗೆಯೇ ಅವರ ಶರೀರವೃದ್ಧಿಗೋಸ್ಕರ ತಕ್ಕ ವ್ಯವಸ್ಥೆ ಮಾಡಿರುವರು. ಪ್ರತಿಯೊಂದು ಕ್ಲಬ್ಬಿನಲ್ಲಿಯೂ ಪ್ರತಿಯೊಂದು ಕಾರಖಾನೆಯಲ್ಲಿಯೂ ವ್ಯಾಯಾಮಶಾಲೆಗಳಿದ್ದೇ ಇರುವುವು. ವಸಂತಕಾಲದಲ್ಲಿ ಬಿಸಿಲುಕಾಲದಲ್ಲಿ ಪ್ರತಿಯೊಂದು ಪಾರ್ಕಿನಲ್ಲಿಯೂ ಆಟಪಾಟಗಳು ಕುಸ್ತಿ ವಿನೋದಗಳು ಇರುವುವಂತೆ. ಜನರು ಶಾರೀರಿಕವಾಗಿಯೂ ಮಾನಸಿಕವಾಗಿಯೂ ದೃಢಕಾಯರಾಗಿರಬೇಕೆಂಬುದೇ ಸೋವಿಯಟ್ ಪ್ರಭುತ್ವದ ಆಲೋಚನೆ. ಇದರಿಂದ ನಮ್ಮ ದೇಶೀಯರೆಲ್ಲ ನಾಗರಿಕರಾಗುವರು. ಯುದ್ಧವೇನಾದರೂ ಆದರೆ, ಎಲ್ಲರೂ ಸಿದ್ಧರಾಗಬಲ್ಲರು. ರಷ್ಯಾದಲ್ಲಿರುವ ಯಂತ್ರಾಲಯಗಳೆಲ್ಲ ಪಿಸ್ತೂಲುಗಳನ್ನು ತಯಾರಿಸುತ್ತಿರುವರೆಂದೂ, ಅಲ್ಲಿ ಪ್ರತಿಯೊಬ್ಬರಿಗೂ ಅವನ್ನುಪಯೋಗಿಸುವುದನ್ನು ಕಲಿಸುವರೆಂದೂ ಸುದ್ದಿ ಇದೆ. ಬಂಡವಾಳಶಾಹೀ ರಾಜ್ಯಗಳಾದ ಜಪಾನು, ಜರ್ಮನೀ, ಆಸ್ಟ್ರಿಯಾ, ಇಂಗ್ಲೇಂಡು ಮುಂತಾದುವು ತನ್ನ

ಸುತ್ತುಮುತ್ತಲೂ ಕಾದುಕುಳಿತಿರುವುವೆಂದು ರಷ್ಯಾ ತಿಳಿದಿದೆ. ಈ ಸರಕಾರ ಗಳು ತನಗೆ ಪರಮ ಶತ್ರುಗಳೆಂದೂ ಬಲ್ಲುದು. ಈಗೀಗ ಬಂಡವಾಳಶಾಹಿ ದೇಶಗಳು ರಷ್ಯಾದೊಡನೆ ಸಂಧಿಮಾಡಿಕೊಳ್ಳುತ್ತಿರುವರು. ಆದರೆ, ರಷ್ಯಾ ತನ್ನ ಜಾಗ್ರತೆಯಲ್ಲಿ ತಾನಿದೆ. 'ನಾವು ಯಾರ ದೇಶಗಳನ್ನೂ ಆಕ್ರಮಿಸು ವುದಿಲ್ಲ'ವೆಂದು ಅವರೆಷ್ಟು ಸಲ ಘೋಷಿಸಿದರೂ ರಷ್ಯಾಕ್ಕೆ ಇವರಿಂದ ಭಯ ತಪ್ಪಿಲ್ಲ. ರಷ್ಯಾದ ಪೂರ್ವ ಪ್ರಾಂತ್ಯದಲ್ಲಿ ಜಪಾನು ನಡೆಸುತ್ತಿರುವ ಕೀಟಲೆಗೆ ರಷ್ಯನರು ಯುದ್ಧ ಪ್ರಾರಂಭಿಸಬೇಕಾದುದೇ ಆದರೆ, ಇಂದಿನ ರಷ್ಯದ ನಿಯಂತ ಬಹಳ ಜಾಣ, ಜಾಗರೂಕ. ಕೇವಲ ಆರ್ಭಟಕ್ಕೂ, ಪ್ರತಿಷ್ಠೆಗೂ ಬಿದ್ದು ಕಾರ್ಯವನ್ನು ಭಂಗಪಡಿಸಿಕೊಳ್ಳುವುದಿಲ್ಲ. ಹೀಗೆಂದು ಸುಮ್ಮನಿರುವವನೂ ಅಲ್ಲ. ಬಹು ಬೇಗ ಬೇಗ ದೂರ ಪ್ರಾಚ್ಯಖಂಡಗಳಲ್ಲಿ ತನ್ನ ಸೇನೆಗಳನ್ನು ಸಿದ್ಧಪಡಿಸಿಕೊಳ್ಳುತ್ತಿರುವನು. ಆ ಪ್ರಾಂತ್ಯವು ಸ್ವತಂತ್ರವಾಗಿ ನಿಂತುಕೊಂಡಿರಲು ಕಾರಖಾನೆಗಳನ್ನು, ಕೈಗಾರಿಕೆಗಳನ್ನು, ಹೆಚ್ಚುಹೆಚ್ಚಾಗಿ ಬೆಳಸುತ್ತಿರುವನಂತೆ. ಇವುಗಳೆಲ್ಲವನ್ನು ಸಫಲಗೊಳಿಸ ಬೇಕೆಂದರೆ ಪ್ರಜೆಗಳು ಬಲಿಷ್ಠರಾಗಿರಬೇಕು. ಕೂಲಿಯುವರೂ ರೈತರೂ ಹೀಗೆ ಬಲಿಷ್ಠರಾಗಬೇಕು ಎಂಬುದೇ.

ಹಿಮ ಸುರಿಯುವ ದಿನಗಳಾದುದರಿಂದ ಮಲ್ಲಶಾಲೆ ಜನಶೂನ್ಯ ವಾಗಿದೆ. ಅಲ್ಲಿರುವ ಭವನವಲ್ಲದೆ ನೋಡಲಿಕ್ಕೆ ಮತ್ತೇನೂ ಇಲ್ಲ. ಭವನವು ನೂತನ ವಿಧದಲ್ಲಿ ಕಟ್ಟಲ್ಪಟ್ಟಿದೆ. ನಿರಾಡಂಬರವಾಗಿದೆ. ಬಹಳ ದೊಡ್ಡದು. ಸಾವಿರಾರು ಮಂದಿ ಕುಳಿತುಕೊಂಡು ನೋಡಲು ಅವಕಾಶ ಇದೆ.

---

೧೩

## ಕೂಲಿಕಾರರ ಸಮಸ್ಯೆ

ಅಲ್ಲಿಂದ ನಮ್ಮ ಕಾರು ಬಡವರ ಕೇರಿಗೆ ಹೊರಟಿತು. ಮೊನ್ನೆ ಮೊನ್ನೆ ಕೆಡವಿದ್ದ ಗುಡಿಸಲುಗಳ ನಡುವೆ ಅಂದವಾದ ಮೂರಂತಸ್ತಿನ ಮಹಡಿಗಳು ಮೆರೆಯುತ್ತಲಿವೆ. ದೊಡ್ಡ ದೊಡ್ಡ ಕಿಡಕಿ, ವಿದ್ಯುದ್ದೀಪ,

ವಿದ್ಯುತ್ ಒಲೆ, ಹೊಸ ರೀತಿಯ ಕಕ್ಕಸ ಮೊದಲಾದ ಒಳ್ಳೇ ಸೌಕರ್ಯಗಳಿವೆ. ಇವನ್ನು ನೋಡಿದರೆ, ಕ್ರಾಂತಿಯ ಮೊದಲಿನ ಹಾಗು ಇಂದಿನ ಕೂಲಿಕಾರರ ಚಿತ್ರವು ಎದುರಿಗೆ ನಿಲ್ಲುವುದು. ಮೊದಲಿನ ಮನೆಗಳು ಎರಡು ಅಂತಸ್ತಿನವಿದ್ದರೂ, ಈಗಿನ ಒಂದಸ್ತಿನ ಮನೆಗಿಂತಲೂ ಕಿರಿದು, ಗಾಳಿ ಬೆಳಕುಗಳ ಅಭಾವ, ಹೊಗೆ ಹೋಗಲು ಕೂಡ ಸಾಧ್ಯವಿರಲಿಲ್ಲ. ಅಷ್ಟು ಚಿಕ್ಕವು. ಸುತ್ತಲೆಲ್ಲವೂ ಕೊಳಚೆ. ಪ್ರಭುತ್ವವು ಅಲ್ಲಿಯೇ ಇಂದು ಆರೋಗ್ಯಕರವಾದ ಅಂದವಾದ ಹರ್ಮ್ಯಗಳನ್ನು ನಿರ್ಮಿಸತೊಡಗಿದೆ ಕೂಲಿಗಳಿಗಾಗಿ. ಪ್ರತಿ ವ್ಯಕ್ತಿಗೂ ಆರು ಚದರ ಮೀಟರುಗಳಿಂದ ಒಂಬತ್ತು ಚದರ ಮೀಟರ ಸ್ಥಳವುಳ್ಳ ಕೊಠಡಿಗಳನ್ನು ಒದಗಿಸಲು ಯತ್ನಿಸುತ್ತಿದೆ. ಪ್ರತಿಯೊಬ್ಬರೂ ಇವಕ್ಕೆ ಬಾಡಿಗೆ ಕೊಡಲೇಬೇಕು. ಕೆಲವರು ಒಂದೇ ಕೊಠಡಿಯಲ್ಲಿ ವಾಸಮಾಡುತ್ತ ತಮ್ಮ ಆದಾಯಕ್ಕೆ ತಕ್ಕಂತೆ ಬಾಡಿಗೆ ಕೊಡುತ್ತಿರುವರಂತೆ. ಬಾಡಿಗೆಗೆ ತಕ್ಕ ಹಾಗೆ ಮನೆಯ ಅಂದಚೆಂದ. ಸರಕಾರದ ಸಹಕಾರ ಬ್ಯಾಂಕುಗಳಿಂದಾಗಲಿ, ಮುನಿಸಿಪಾಲಿಟಿಗಳ ಗೃಹ ನಿಧಿಯಿಂದಾಗಲಿ, ಸಾಲ ತೆಗೆದುಕೊಂಡು ಕಟ್ಟಿದ ಭವನ ಕೆಲವಿರುವುವು. ಇವಕ್ಕೆ ಬಾಡಿಗೆ ತೆಗೆದುಕೊಳ್ಳುವುದಿಲ್ಲ.

ಮಾತಿಗೆ ಮಾತು ಬಂದು ಮಾರ್ಗದರ್ಶಿಕೆ ಹೇಳಿದಳು: 'ಕಾರ್ಮಿಕರಿಗೆ ನಿಲ್ಲಲು ಸ್ಥಳವನ್ನು ತೋರಿಸುವುದೇ ನಮ್ಮ ಮೊದಲನೆಯ ತೊಂದರೆ. ಅದರಲ್ಲಿಯೂ ಪಟ್ಟಣಗಳಿಗೆ ಜನರು ಮಹಾಪ್ರವಾಹದಂತೆ ಬರುತ್ತಿರುವರು. ೧೯೩೯ರಲ್ಲಿ ಮಾಸ್ಕೋ ಜನಸಂಖ್ಯೆ ೨೦ ಲಕ್ಷ, ೧೯೫೧ರಲ್ಲಿ ೩೭ತ್ತಿ ಲಕ್ಷಗಳ ವರೆಗೆ ಬೆಳೆದಿದೆ. ಹೀಗೆ ಬೆಳೆಯುತ್ತಿರುವ ಜನಸಂಖ್ಯೆಗೆ ಮನೆಗಳು ಬೇಕಲ್ಲವೇ?'

'ಹಳ್ಳಿಗಳಿಂದ ಪಟ್ಟಣಗಳಿಗೆ ಇಷ್ಟು ಜನ ಬರಲು ಕಾರಣವೇನು?'

'ಪಟ್ಟಣದ ಜೀವನದಲ್ಲಿ ಸೆಳೆತವಿದೆಯೇನೊ.'

'ಹಿಂದಿನ ಕಾಲದಲ್ಲಿ ಮಾತ್ರ ಈ ಆಕರ್ಷಣವಿರಲಿಲ್ಲವೇ? ಆ ದಿನಗಳಲ್ಲಿ ನಗರಗಳಿಗಿಷ್ಟು ಜನರು ಬರಲಿಲ್ಲ.'

'ಆ ಕಾಲದಲ್ಲಿ ಬಾಳ ಸವಿ ಅನುಭವಿಸಲು ಈಗಿದ್ದಷ್ಟು ಸೌಕರ್ಯ ಇರಲಿಲ್ಲ.'

'ಕ್ಷಮಿಸಿ. ಇದರ ಕಾರಣ ಬೇರೆ. ನಿಮ್ಮ ಸರಕಾರವು ಕಾರಖಾನೆ ಕೂಲಿಯವರಿಗೆ ಹೆಚ್ಚು ಸೌಕರ್ಯಗಳನ್ನು ಕಲ್ಪಿಸುತ್ತಿದೆ. ಪ್ರಥಮ ಪಂಚ ವರ್ಷ ಪ್ರಣಾಳಿಕೆಯಲ್ಲಿ ಕೂಲಿಯವರಿಗಾಗಿ ರೈತರಿಂದ ಬಲಾತ್ಕಾರವಾಗಿ ಧಾನ್ಯವನ್ನು ವಸೂಲು ಮಾಡಿದರು. ಗಿರಣಿ ಹೆಚ್ಚಾಗಿರುವ ಪ್ರದೇಶದಲ್ಲಿ ನಿಮ್ಮ ಸರಕಾರದವರು ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸಿರುವರು.'

'ನಾವು ರಷ್ಯಾದೇಶವನ್ನು ಕೈಗಾರಿಕೆ ಕ್ಷೇತ್ರವನ್ನಾಗಿಯೂ ಮಾಡಬೇಕೆಂದಿರುವೆವು. ಕಾರಖಾನೆಗಳ ಮೇಲೆ ನಮ್ಮ ದೃಷ್ಟಿಯನ್ನು ಕೇಂದ್ರೀಕರಿಸದೆ ವಿಧಿಯಿಲ್ಲ.'

'ನೀವು ಕಾರಖಾನೆಗಳ ಗುಂಭೆಯಲ್ಲಿ ರೈತರ ವಿಚಾರವನ್ನೇ ಮರೆ ತಿರುವಿರಿ. ಪ್ರಭುತ್ವಾದರಣೆ ಹೊಂದಿ ಸುಖವಾಗಿ ಜೀವಿಸಲು ಕೂಲಿ ಕಾರರು ನಗರಗಳಲ್ಲಿ ಸೇರುತ್ತಿರುವರೆಂದು ಬಗೆಯುವೆನು.'

'ಅದೂ ಒಂದು ಕಾರಣವಾಗಬಹುದು. ಆದರೆ, ಈಗ ಸರಕಾರಕ್ಕೆ ರೈತರ ವಿಷಯದಲ್ಲಿ ಬಹಳ ಶ್ರದ್ಧೆ.'

ಆಕೆಯ ಮಾತು ನಿಜವೂ ಹೌದು. ಹೋಟಲಿಗೆ ಬರುವಾಗ ಆಕೆಯು 'ಕಾಮ್ರೇಡ್, ಕೋರ್ಟ್ ನೋಡೋಣವೇ' ಎಂದಳು.

'ಅಂದರೆ ಏನು?'

'ಕಾರಖಾನೆಗಳಲ್ಲೂ, ಇತರ ಸಾಮೂಹಿಕ ಸಂಸ್ಥೆಗಳೆಲ್ಲದರಲ್ಲೂ ಸಹ, ಕಾರ್ಮಿಕರೇ ತಮ್ಮ ನ್ಯಾಯಾಸ್ಥಾನಗಳನ್ನು ಏರ್ಪಡಿಸಿಕೊಂಡು ತಮ್ಮ 'ಕಾಮ್ರೇಡು'ಗಳು ಮಾಡಿದ ಅಪರಾಧಗಳನ್ನು ವಿಚಾರಿಸುವರು.'

'ಅದೊಂದು ಪಂಚಾಯತಿ ಮಾದರಿಯೇನೊ! ಈ ಪಂಚಾಯತಿಯ ತೀರ್ಮಾನವನ್ನು ಆತನು ಒಪ್ಪದಿದ್ದರೆ?'

'ಅವರು ಪಂಚಾಯತಿಯ ತೀರ್ಮಾನವನ್ನು ತಿರಸ್ಕರಿಸಲಾರರು.

ಈ ತೀರ್ಮಾನದ ಹಿಂದೆ ಸಾಂಘಿಕವಾದ ಏಕೀಕೃತ ಶಕ್ತಿಯು ಇದೆ ಯೆಂದು ಅವರು ಬಲ್ಲರು.'

'ನಿಮ್ಮ ಏಕತ್ವವೆಂದರೇನು? ಕಮ್ಯೂನಿಸ್ಟ ಸಮಾವೇಶಗಳೇ?'

'ಅಲ್ಲ. ಅಲ್ಲ. ಕಾಮ್ರೇಡ್ ಕೋರ್ಟುಗಳಲ್ಲಿ ಒಂದೇ ಗುಂಪಿನ ಸದಸ್ಯರ ಆರೋಪಣೆ ವಿಚಾರಿಸಲ್ಪಡುವುವು. ಪಕ್ಷಸಭೆಗಳೆಂದರೆ ಸಭ್ಯ

ರೆಲ್ಲರೂ ಸೇರಿ ವಾದ ಪ್ರತಿವಾದ ನಡೆಸುವುದು; ತಮ್ಮ ಸಭ್ಯರ ಅಪರಾಧ ವಿಚಾರಿಸುವುದು. ಕೋರ್ಟುಗಳಲ್ಲಿ ಯಾವ ಪಕ್ಷಕ್ಕೆ ಸಂಬಂಧಿಸಿದವರನ್ನು ಆದರೂ ವಿಚಾರಣೆ ಮಾಡಬಹುದು. ಅಪರಾಧ ಆರೋಪಣೆಯಾದರೆ ಅಪರಾಧಿ ಚಿಲ್ಲರೆ ಸುದ್ದಿ ಕೂಡ ಬಚ್ಚಿಡಲಾರ. ತಾನೇ ತಪ್ಪನ್ನು ಒಪ್ಪಿ ಕೊಳ್ಳುವನು.'

'ಈ ಕೋರ್ಟಿನೆದುರಿಗೆ ಯಾವ ಮಾತೂ ನಿಲ್ಲದು. ಒಂದು ವೇಳೆ ಯಾವುದಾದರೂ ವಿಷಯವನ್ನು ಮರೆಮಾಚಿದರೆ, ಮತ್ತೊಬ್ಬನಾರೋ ಅದನ್ನು ಹೊರಗೆಡಹುವನು. ಅದರಿಂದ ಅಪರಾಧಿಯು ಸುಲಭವಾಗಿ ಮುಂಚೆಯೇ ಒಪ್ಪಿಕೊಳ್ಳುತ್ತಾನೆ. ಅದೂ ಅಲ್ಲದೆ ಇಲ್ಲಿ ದೋಷಾಂಗೀ ಕಾರವು ತಪ್ಪು ಕ್ಷಮಿಸಲ್ಪಡುವುದೆಂಬ ದೃಷ್ಟಿಯಿಂದ ನಡೆಯುವುದಿಲ್ಲ. ಮಾಡಿದ ತಪ್ಪನ್ನು ಹಿಡಿದು ಪಾರ್ಟಿಯಿಂದ ಬಹಿಷ್ಕರಿಸಲ್ಪಡುವವರೆಗೆ ನಿಯಮಿತ ಕಾಲದವರೆಗೂ ಹೊರಗೆ ಹಾಕಲ್ಪಡುವವರೆಗೆ ನಡೆಯುವುದು. ಈ ಅಪರಾಧ ಸ್ವೀಕಾರವು ಬುದ್ಧಿವಂತ, ಸ್ವತಂತ್ರ ಜ್ಞಾನಿಗಳಾದ ಸತ್ಪುರುಷರ ಎದುರಿಗೆ ನಡೆಸಲ್ಪಡುವುದು.'

ಮಧ್ಯಾಹ್ನ ಊಟ ಮಾಡಿದ ಮೇಲೆ ನನ್ನ ಕೊಠಡಿಯಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳುತ್ತಾ ಕುಳಿತಿದ್ದೆ. ಕಿಟಿಕಿಗೆ ಎದುರಾಗಿ 'ಮಾಸ್ಕೊವಾ' ನದಿ. ಅದರ ಆ ದಡೆಗೇ 'ರೆಡ್‌ಸ್ಕ್ವೇರ್' ಪಟ್ಟಣ ನೋಡಿದರೆ ಬರ್ಲಿನ್—ಪ್ಯಾರಿಸ್ಸಿನಂತೆ, ಕಡೆಗೆ ಕಲಕತ್ತೆಯಂತಾದರೂ ತಯಾರಾಗಲು ಎಷ್ಟೋ ಕಾಲವಾಗುತ್ತದೆಂದು ತೋರುತ್ತದೆ. ಪಟ್ಟಣ ದಲ್ಲಿ ಅಷ್ಟು ಜನ ಸಂದಣಿಯಿಲ್ಲ. ದೊಡ್ಡ ದೊಡ್ಡ ಕಲ್ಲುಗುಂಡುಗಳಿಂದ ತುಂಬಿದ ರಸ್ತೆ; ಜನರ ಓಡಾಟ ಕಡಮೆ. ಕುದುರೆ ಗಾಡಿ, ಟ್ರಾಮು ಯಾವಾಗಲಾದರೂ ಒಂದು. ಜನ ನೋಡಿದರೆ ಕೊಳಕರು, ಬಡತನ ತಾನೇ ತಾನಾಗಿದೆ. ಬಡ ಕೂಲಿಯವರಿಗೆ ಇಲ್ಲಿ ಒದಗಿಸುತ್ತಿರುವ ಸೌಕರ್ಯಗಳು ಮತ್ತಾವ ದೇಶದಲ್ಲಿಯೂ ಇಲ್ಲ. ಈಗ ಕೂಲಿಯವರ ಸ್ಥಿತಿ ಹಿಂದಿಗಿಂತಲೂ ಚೆನ್ನಾಗಿದೆ. ಹುಳುಕು ಹಾಳುಬಿದ್ದು ಹೋದ ಕೊಂಪೆ ಗಳಿಗೆ ಬದಲಾಗಿ, ಹೊಸ ಪದ್ಧತಿಯ ಮೇರೆಗೆ ಕಟ್ಟಿದ ಸುಂದರ ಭವನ ಗಳಲ್ಲಿ ಅವರ ವಾಸ. ಅವರ ಮಕ್ಕಳನ್ನು ನೋಡಿಕೊಳ್ಳುವುದಕ್ಕೂ,

ಓದಿಸುವುದಕ್ಕೂ, 'ಕ್ರೆಚೀ'ಗಳು, 'ಕಿಂಡರ್‌ಗಾರ್ಟನ್' ಸ್ಕೂಲುಗಳು ಆಗಿವೆ. ಕೂಲಿಯ ಕೆಲಸ ಮಾಡುತ್ತಿದ್ದರೂ ಸರಕಾರದಲ್ಲಿ ದೊಡ್ಡ ದೊಡ್ಡ ಹುದ್ದೆಗಳನ್ನು ಅವರು ಪಡೆಯಬಹುದು. ಉಚಿತವಾದ ಆಸ್ಪತ್ರೆಗಳು, ಕ್ಲಬ್ಬುಗಳು, ಗ್ರಂಥಾಲಯಗಳು, ನಡೆಸಲ್ಪಡುತ್ತಿರುವುವು. ಹಸಿವಿನ ಬಾಧೆ ಅವರನ್ನೀಗ ಪೀಡಿಸುವುದಿಲ್ಲ. ಭೋಜನ ಸೌಕರ್ಯವು ಬಹು ಸುಲಭವಾಗಿ ಸಿಗುತ್ತಿದೆ. ಅವರು ಯಾವ ಕಾರಖಾನೆಗಳಲ್ಲಿ ಕೆಲಸ ಮಾಡುವರೋ ಅದರ ಮೇಲೆ ಅವರಿಗಧಿಕಾರವಿರುತ್ತದೆ. ಬಹಿರಂಗ ಸಭೆಗಳಲ್ಲಿ, ಕಾರಖಾನೆಗಳ ಗೋಡೆಯ ಪತ್ರಿಕೆಗಳಲ್ಲಿ, R. K. E. ಎದುರಿನಲ್ಲಿ ಉನ್ನತಾಧಿಕಾರಿಗಳನ್ನು ಟೀಕಿಸಬಹುದು. ಈ R. K. E. ಎನ್ನುವುದು ರಷ್ಯಾದಲ್ಲಿರುವ ಸಂಸ್ಥೆಗಳಲ್ಲೆಲ್ಲಾ ಬಹಳ ಬಲವಾದುದು. ಕಾರಖಾನೆಗಳ ಕೆಲಸ ಕಾರ್ಯಗಳನ್ನು, ಕೂಲಿಗಳ ಪರಿಸ್ಥಿತಿಗಳನ್ನು ಜಾಗರೂಕತೆಯಿಂದ ಪರಿಶೀಲನೆ ಮಾಡಲು ಈ ಸಂಸ್ಥೆಯು ಸ್ಥಾಪಿತವಾಯಿತು. ಪ್ರತಿಯೊಬ್ಬ ಕೂಲಿಯು 'ಟ್ರೇಡ್ ಯೂನಿಯನ್' ಸದಸ್ಯನಾಗಬೇಕು. ಪ್ರಪಂಚದ ಇತರ ದೇಶಗಳಲ್ಲಿ ಯಜಮಾನರೊಡನೆ ಕುಸ್ತೀ ಹಿಡಿಯುವುದು. 'ಟ್ರೇಡ್ ಯೂನಿಯನ್ನಿ' ನಕೆಲಸ. ಇಲ್ಲಿ ಯಜಮಾನರಿಲ್ಲ; ಜಗಳಕ್ಕೆ ಅವಕಾಶವಿಲ್ಲ. ಕೂಲಿಕಾರರಿಗೆ ಕೆಲಸ ಕೊಡಿಸುವುದು 'ನಿಯೋಜಕ ಸಂಸ್ಥೆ'ಗಳ ಕೆಲಸ. ಕೂಲಿಯವರ ಹಕ್ಕನ್ನು ಕಾಪಾಡುವುದು 'ನಿಯೋಜಕ ಸಂಸ್ಥೆ'ಗಳಿಗೆ ನೆರವಾಗುವುದು ರಷ್ಯಾದ 'ಟ್ರೇಡ್ ಯೂನಿಯನ್ನು'ಗಳ ಕರ್ತವ್ಯ. ಬೇರೆ ಬೇರೆಯ ಕೈಗಾರಿಕೆಗಳಿಗೆ ಬೇರೆ ಬೇರೆ ಟ್ರೇಡ್ ಯೂನಿಯನ್ನುಗಳಿರುವುವು. ನಿಯೋಜಕ ಸಂಸ್ಥೆಗಳು 'ಟ್ರೇಡ್ ಯೂನಿಯನ್ನು'ಗಳೊಡನೆ ಒಪ್ಪಂದ ಮಾಡಿಕೊಳ್ಳುತ್ತವೆ. ಕಾರ್ಮಿಕರಿಗುಂಟಾಗುವ ಬಾಧೆಗಳನ್ನು ಯಂತ್ರಾಲಯಾಧಿಕಾರಿಗಳು ನಿವಾರಿಸದಿದ್ದರೆ, ಕಾರಖಾನೆ ಕಮೀಟಿಗಳಿಗೆ ಅರ್ಜಿ ಹಾಕಿಕೊಳ್ಳಬೇಕು. ಕೂಲಿಯವರೆಲ್ಲರೂ ಸೇರಿ ಇವನ್ನು ನಡೆಸುವರು. ರಷ್ಯಾದಲ್ಲಿ ಇವೇ ಪ್ರಬಲ ಸಂಸ್ಥೆಗಳು.

ಕಾರಖಾನೆಗಳಲ್ಲಿಯೂ ಎಷ್ಟೋ ಸೌಕರ್ಯಗಳು ಆಗಿವೆ. ರೋಗಿಗಳಿಗೆ ಆಸ್ಪತ್ರೆಗಳು, ನಾಲ್ಕು ವರುಷದ ಮಕ್ಕಳಿಗೆ 'ಕ್ರೆಚೀ'ಗಳು ತಪ್ಪದೇ ಇರುತ್ತವೆ. ಕೆಲವು ಕಾರಖಾನೆಗಳಲ್ಲಿ ಕೂಲಿಯವರಿಗೆ ಓದು

ಹೇಳಿಸಿ ಮೇಸ್ತ್ರಿಗಳಾಗಿ (ಇಂಜನೀಯರುಗಳಾಗಿ, ವಕೀಲರಾಗಿ, ರಸಾಯನ ಶಾಸ್ತ್ರಜ್ಞರಾಗಿ, ಉಪಾಧ್ಯಾಯರಾಗಿ ಮಾಡಲು ಬೇಕಾದ ಸೌಕರ್ಯಗಳಿರುವುವು.) ಕಾರಖಾನೆಗಳಲ್ಲಿ ಕೆಲಸ ಮಾಡಲಿ, ಕಚೇರಿಗಳಲ್ಲಿ ಮಾಡಲಿ, ಎಲ್ಲೇ ಮಾಡಲಿ ವಾರಕ್ಕೆ ಐದೇ ದಿನ ಕೆಲಸ. ಆರು ದಿನದ ವಾರ ಅದು. ಆರನೆಯ ದಿನ ರಜ. ಎಲ್ಲರಿಗೂ ಒಂದೇ ದಿನ ರಜವಲ್ಲ; ಹೊಸದಾಗಿ ಮದುವೆ ಮಾಡಿಕೊಂಡವರಿಗೂ, ನೂತನ ಪ್ರೇಮಾವೇಶ ತಗ್ಗದವರಿಗೂ ಇದರಿಂದ ತೊಂದರೆ. ಗಂಡಸಿಗೆ ರಜಾ ಆದರೆ ಹೆಂಗಸಿಗೆ ಕೆಲಸವಿರಬಹುದು. ಸಾಲದ್ದಕ್ಕೆ ಕೂಲಿಯವರು ಬೇರೆ ಬೇರೆ ತಂಡಗಳಾಗಿ ಸರತಿಯ ಮೇಲೆ ಕೆಲಸ ಮಾಡಬೇಕಾಗಿರುತ್ತದೆ. ಆದುದರಿಂದ ಗಂಡಸಿಗೆ ಹಗಲು ರಜವಾದರೆ, ಹೆಂಗಸಿಗೆ ರಾತ್ರಿ ರಜವಾಗಬಹುದು. ಅಂತೂ ಇಂತೂ ಭಾರ್ಯಾಭರ್ತೃರು ಸೇರಲು ಸಮಯವೇ ಸಿಗದೆ ಹೋಗಬಹುದು. ಇದೆಲ್ಲ ಬೇಗ ಸರಿಯಾದೀತು. ವರುಷಕ್ಕೆ ಜಾತೀಯೋತ್ಸವಗಳು ಐದು ಮಾತ್ರ. ಹಗುರ ಕೆಲಸದವರಿಗೆ ವರುಷಕ್ಕೆ ಎರಡು ವಾರ; ಕಷ್ಟವಾದ ಕೆಲಸದವರಿಗೆ ನಾಲ್ಕು ವಾರ. ಪೂರಾ ಸಂಬಳದ ರಜ. ವಾರವೆಂದರೆ ಆರೇ ದಿನಗಳೆಂಬ ಮಾತನ್ನು ಮರೆಯಲಾಗದು. ಕಾಯಿಲೆಯಾದಾಗ, ಕೂಲಿಯ ಹೆಂಗಸರ ಹೆರಿಗೆಯ ದಿನಗಳಲ್ಲಿ, ಪೂರ್ತಿ ಸಂಬಳದ ಮೇಲೆ ವಿಶ್ರಾಂತಿ ಕೊಡುತ್ತಾರೆ. ಈ ವಿಶ್ರಾಂತಿಯ ದಿನಗಳ ಸಂಬಳವನ್ನು 'ಸಾಮಾಜಿಕ—ವಿಮಾ—ವಿಭಾಗ'ದಿಂದ ವಸೂಲು ಮಾಡುವರು. ಈ 'ವಿಮಾವಿಭಾಗ'ಕ್ಕೆ ಕೂಲಿಯವರು ತಮ್ಮ ಸಂಬಳಗಳಿಂದ 'ಪ್ರೀಮಿಯಂ' ಕೊಡಬೇಕಾದುದಿಲ್ಲ. ನಿಯೋಜಕ ಸಂಸ್ಥೆಗಳೇ ಕೂಲಿಕಾರರ ಸಂಬಳಕ್ಕೆ ಸರಿಯಾಗಿ ನೂರಕ್ಕೆ ೧೪ ರೂಬಲ್ಸುಗಳನ್ನು ವಿಮಾ ಕಂಪನಿಗೆ ಸಲ್ಲಿಸುವರು. ಈ ವಿಮಾ ಕಂಪನಿಗಳು ಪ್ರಸವ ಸಮಯಗಳಲ್ಲಿ ಸ್ತ್ರೀಯರಿಗೆ ಅವರಿಗೆ ಕೊಡುವ ಸಂಬಳದ ಜತೆಗೆ ನೂರಕ್ಕೆ ಹತ್ತು ಅಥವಾ ಹನ್ನೆರಡು ರೂಬಲ್ಸುಗಳನ್ನು ಭತ್ಯವಾಗಿ ಕೊಡುವರು. ಕಾರಖಾನೆಗಳಲ್ಲಿ ಕೆಲಸ ಮಾಡುವಾಗ ಗಾಯಗೊಂಡು ಮೂಲೆ ಹಿಡಿದ ಕೂಲಿಯವರಿಗೂ, ಅರವತ್ತು ವರುಷಕ್ಕೆ ಮೇಲ್ಪಟ್ಟ ಮುದುಕರಿಗೂ, ಈ ವಿಮಾವಿಭಾಗದಿಂದ ಜೀವಿತಾಂಶದವರೆಗೂ ಭತ್ಯವು ಸಿಗುತ್ತಲೇ ಇರುತ್ತದೆ. ಈ ವಿಮಾಶಾಖೆಯೇ ಕೂಲಿ

ಕಾರರಿಗಾಗಿ ಆರೋಗ್ಯಶಾಲೆಗಳನ್ನೂ, ವಿಶ್ರಾಂತಿನಿಲಯಗಳನ್ನೂ, ಶಿಶು ಪೋಷಣಾಲಯಗಳನ್ನೂ ನಡೆಯಿಸುವುದು.

ನನಗೆ ತಿಳಿದುದರಲ್ಲಿ ರಷ್ಯಾದಲ್ಲಿ ಸಾಮಾನ್ಯ ಕೂಲಿಕಾರರಿಗೆ ೭೦ ರಿಂದ ೧೦೦ ರೂಬಲ್ಲುಗಳ ವರೆಗೂ, ಜಾಣರಾದ ಕೂಲಿಕಾರರಿಗೆ ೧೫೦ ರಿಂದ ೨೫೦ ರೂಬಲ್ಲುಗಳ ವರೆಗೂ, ಮೊದಲಿದ್ದಂತೆ ಎಂಜನಿಯರುಗಳಿಗಾದರೆ ೩೦೦ ರಿಂದ ೧೦೦೦ದ ವರೆಗೂ, ವಿದೇಶೀಯರಿಗೆ ಅದಕ್ಕಿಂತಲೂ ಹೆಚ್ಚು ಸಂಬಳವೂ ಕೊಡಲ್ಪಡುತ್ತಿರುವುದು. ಕಲೆಗಾರರು, ಗ್ರಂಥಕರ್ತರು ಇನ್ನೂ ಎಷ್ಟೋ ಸಂಪಾದಿಸುತ್ತಿರುವರು.

ಆದರೆ, ಸಂಬಳಗಳಲ್ಲಿ ಕಂಡುಬರುವ ಈ ವ್ಯತ್ಯಾಸವೇ ಅವರ ಜೀವನ ಪರಿಸ್ಥಿತಿಯಲ್ಲಿ ಸಹ ಇರುತ್ತದೆಂದು ಊಹಿಸುವುದು ತಿಳಿಗೇಡಿತನ. (ಒಬ್ಬ ಕೂಲಿಕಾರನು ನೂರು ರೂಬಲ್ಲು, ಒಬ್ಬ ಎಂಜನಿಯರು ೮೦೦ ರೂಬಲ್ಲುಗಳನ್ನು ಸಂಪಾದಿಸುತ್ತಿರುವನೆಂದುಕೊಳ್ಳಿ.) ಅಷ್ಟು ಮಾತ್ರದಿಂದ ಇಂಜನಿಯರು ಕಾರ್ಮಿಕನಿಗಿಂತ ಎಂಟರಷ್ಟು ಹೆಚ್ಚಿಗೆ ಸುಖಪಡುವನೆಂಬುದು ತಪ್ಪು. (ನೂರು ರೂಬಲ್ಲು ಸಂಬಳದವನು ಹತ್ತು ರೂಬಲ್ಲು ಬಾಡಿಗೆ ಕೊಡುತ್ತಿದ್ದರೆ, ೮೦೦ ರೂಬಲ್ಲುಗಳ ಅಧಿಕಾರಿಯು ೮೦ ರೂಬಲ್ಲುಗಳನ್ನು ಅದೇ ಮನೆಗೆ ಕೊಡಬೇಕಾಗಿರುವುದು). ಮಾಮೂಲಾಗಿ ಪ್ರತಿಮನುಷ್ಯನಿಗೂ ಅತ್ಯಗತ್ಯವಾಗಿ ಇರುವ ವಸ್ತುಗಳಿಗೆ ಒಂದು ನಿರ್ದಿಷ್ಟವಾದ ದರ ಏರ್ಪಟ್ಟಿರುವುದು. ಅದಲ್ಲದೆ ಮತ್ತಾವುದಾದರೂ ವಸ್ತುಗಳನ್ನು ಕೊಂಡಕೊಳ್ಳಬೇಕಾದರೆ ಅವುಗಳ ಬೆಲೆ ಕೊಳ್ಳುವವನ ಸಂಪಾದನೆಯ ಮೇರೆಗೆ ಬೆಳೆಯುತ್ತಿರುತ್ತದೆ. ಈ ವಿಧವಾಗಿ ಸರಕಾರವು ಬಲಗೈಯಲ್ಲಿ ಕೊಟ್ಟುದನ್ನೆ ಎಡಗೈಯಲ್ಲಿ ವಸೂಲು ಮಾಡುತ್ತಿರುವುದು. ಆ ಮನುಷ್ಯನು ಹೋದ ಮೇಲೆ ಆತನ ಆಸ್ತಿಯನ್ನೆಲ್ಲ ಸರಕಾರವೇ ವಶಪಡಿಸಿಕೊಳ್ಳುವುದು.

ಈ ವಿಶ್ರಾಂತಿ ಸಮಯದಲ್ಲಿ ಮಾರ್ಗದರ್ಶಿಕೆಗೆ ಕೆಲವು ಪ್ರಶ್ನೆಗಳನ್ನು ಕೇಳಿದೆನು. 'ನಿಮ್ಮ ಸರಕಾರವು ಕಮ್ಯೂನಿಸ್ಟರಿಗೆ ಸಮಸ್ತ ಸೌಕರ್ಯಗಳನ್ನೊದಗಿಸುತ್ತ ಪ್ರಜೆಗಳನ್ನು ಕಮ್ಯುನಿಸ್ಟರಾಗಲು ಒತ್ತಾಯಪಡಿಸುತ್ತಿದೆ ತಾನೆ?'

'ಹೌದು. ಅದು ಸಹಜ. ಝಾರರ ಕಾಲದಲ್ಲಿ ಜನಸಾಮಾನ್ಯರ ಪರಿಸ್ಥಿತಿಯನ್ನು ಸರಿಪಡಿಸುವುದಕ್ಕಾಗಿ ನಾನಾ ಬಾಧೆಗಳನ್ನನುಭವಿಸಿದವರೂ ಕಮ್ಯೂನಿಸ್ಟರೇ. ಆದುದರಿಂದಲೇ ಕಮ್ಯೂನಿಸ್ಟರಿಗೀಗ ಪ್ರಾಮುಖ್ಯತೆ. ಕಾರಖಾನೆಗಳಲ್ಲಿ ಕಮ್ಯೂನಿಸ್ಟರಲ್ಲದವರೂ ಇರುವರು. ಅವರಲ್ಲಿ ಕೆಲವರು ಜವಾಬ್ದಾರಿಯುತವಾದ ಪ್ರಭುತ್ವದ ಉದ್ಯೋಗಗಳಲ್ಲಿಯೂ ಇರುವರು.

'ಹಾಗಾದರೆ ಸರಿ. ಆದರೆ, ಈ ಪಯನೀರ್, ಕಾಮ್‌ಸೋಲ್, ಷಾಕ್‌ಬ್ರಿಗೇಡ್, ಗಳೇನು ?'

'ಇವೆಲ್ಲ ಬೇರೆ ಬೇರೆ ವಯಸ್ಸಿನಲ್ಲಿರುವ ಕಮ್ಯೂನಿಸ್ಟರ ಸಂಸ್ಥೆಗಳು. ಎಲ್ಲರಿಗಿಂತ ಚಿಕ್ಕ ವಯಸ್ಸಿನ ಕಮ್ಯೂನಿಸ್ಟರನ್ನು 'ಅಕ್ಟೋಬರು ಮಕ್ಕಳು' ಎನ್ನುತ್ತಾರೆ. ಅಕ್ಟೋಬರು ತಿಂಗಳಲ್ಲಿಯೇ ಅಲ್ಲವೆ ಕ್ರಾಂತಿಯಾದುದು ? ಅವರಿಗಿಂತಲೂ ಸ್ವಲ್ಪ ವಯಸ್ಸಾದವರಿಗೆ 'ಪಯನೀರ್' ಎನ್ನುತ್ತಾರೆ. ಇಪ್ಪತ್ತುನಾಲ್ಕು ವರ್ಷ ವಯಸ್ಸುಳ್ಳ ಯುವತಿ, ಯುವಕರ ಕಮ್ಯೂನಿಸ್ಟ ಸಂಘಗಳಿಗೆ 'ಕಮ್ಯೂನಿಸ್ಟು ಯುವಕ ಸಂಘ'ಗಳೆನ್ನುವರು. ಇವನ್ನೇ ಸಾಮಾನ್ಯವಾಗಿ 'ಕಾಮ್‌ಸೋಲ್' ಎಂದು ಕೂಡ ಕರೆಯುತ್ತಾರೆ. ಈ ಸಂಸ್ಥೆಯ ಸದಸ್ಯರು ತಮಗೆ ಒಪ್ಪಿಸಲ್ಪಟ್ಟ ಉತ್ತಮ ಕಾರ್ಯಗಳನ್ನು ಸಫಲಗೊಳಿಸಿದರೆ ಅವರನ್ನು ಕಮ್ಯೂನಿಸ್ಟು ಪಕ್ಷಕ್ಕೆ ಸೇರಿಸಿಕೊಳ್ಳುವರು. ಅವರು ಪಕ್ಷದ ಆಜ್ಞೆಯ ಮೇರೆಗೆ ತಮ್ಮ ಸರ್ವಸ್ವವನ್ನೂ ತ್ಯಾಗಮಾಡಲು ಸಿದ್ಧರಾಗಿರಬೇಕಾಗಿರುವುದು. ಇದೇ ಕಠಿಣವಾದ ಕೆಲಸ.

'ನೀವು ಕಮ್ಯೂನಿಸ್ಟರೇನು ?'

'ಹೌದು. ಕಮ್ಯೂನಿಸ್ಟು ಯುವಜನ ಸಂಘದ ಸದಸ್ಯಳು.' ಗರ್ವದಿಂದ ಆಕೆಯ ಕಣ್ಣುಗಳು ತಳತಳ ಹೊಳೆದುವು.

'ಈ ಷಾಕ್‌ಬ್ರಿಗೇಡ್ ಏನು ?'

'ಪಾರ್ಟಿಯಲ್ಲಿ ಯಾವುದಾದರೂ ಒಂದು ದಳಕ್ಕೆ ಒಂದು ನಿರ್ಣಾಯಕ ಕಾರ್ಯಕ್ರಮವನ್ನು ಕೊಟ್ಟಾಗ,ಅವರದನ್ನು ಪೂರಯಿಸಿದರೆ 'ಷಾಕ್

ಎಂಬ ಹೆಸರಿನಲ್ಲಿ ಸನ್ಮಾನಿಸುವರು. ಅವರಿಗೆ ' ಜಯಪತಾಕೆ 'ಯನ್ನೂ ಕೊಡುವರು.

---

೧೪

ಆರೋಗ್ಯಧಾಮ

ಟ್ರಾಮ್ ಗಾಡಿಯಿಂದ ಕೆಲವು ನಿಮಿಷಗಳೊಳಗಾಗಿ ' ನೈಟ್ ಶ್ಯಾನಿಟೋರಿಯಂ ' (ಆರೋಗ್ಯಧಾಮ) ಸೇರಿದೆವು. ಈ ಬೀದಿಯಲ್ಲಿ ಬೆಳಕಿಲ್ಲ. ಕತ್ತಲು ಗವಿ. ಮೊದಲು ಭೋಜನಶಾಲೆಗೆ ಹೊರಟೆವು. ಶಾಖೋತ್ಪತ್ತಿ ವಿಧಾನದಿಂದ ಕೊಠಡಿಗಳನ್ನೆಲ್ಲ ಬೆಚ್ಚಗೆ ಇಟ್ಟಿದ್ದಾರೆ. ಮೊದಲನೆ ಅಂತಸ್ತಿನಲ್ಲಿ ಮೆಟ್ಟಲು ಬಲಗಡೆಯೊಂದು ಕೊಠಡಿಯಿದೆ. ಅಲ್ಲಿ ಪ್ರತಿನಿತ್ಯವೂ ಆಶ್ರಮದಲ್ಲಿ ಇರುವವರನ್ನು ಪರೀಕ್ಷೆ ಮಾಡುವರು. ಅವರ ಶರೀರೋಷ್ಣ, ನಾಡೀ ವೇಗ, ತೂಕ ಎಲ್ಲ ಸಕ್ರಮವಾಗಿ ಬರೆದುಕೊಳ್ಳಲ್ಪಡುವುವು. ಆಶ್ರಮದ ಯಜಮಾನಿ ಸ್ವಂತವಾಗಿಯೇ ಈ ಕೆಲಸ ನಿರ್ವಹಿಸುವಳು. ಅಲ್ಲಿಂದ ಕಚೇರಿಯ ಚಾವಡಿಗೆ ಹೋದೆವು. ಇಲ್ಲಿ ರೇಡಿಯೋ, ವೃತ್ತಪತ್ರಗಳು ಇಡಲ್ಪಟ್ಟಿರುವುವು. ರಾತ್ರಿ ಎಂಟು ಗಂಟೆಯಾಗುವ ವೇಳೆಗೆ ಚಾವಡಿಯಲ್ಲಿ ಯಾರೂ ಇರುವುದಿಲ್ಲ. ಹಾಸಿಗೆಗಳಿರುವ ಕೊಠಡಿಗಳನ್ನೆಲ್ಲ ಯಜಮಾನಿ ತೋರಿಸಿದಳು. ಹೆಂಗಸರಿಗೆ ಬೇರೆ, ಗಂಡಸರಿಗೆ ಬೇರೆ ಕೊಠಡಿಗಳು. ಎಲ್ಲರೂ ಪರಿಶುಭ್ರವಾದ ಬಿಳಿ ಹಾಸಿಗೆ ಮೇಲೆ ಸುಖವಾಗಿ ಮಲಗಿ ನಿದ್ರಿಸುತ್ತಿರುವರು. ಒಂದು ಕೊಠಡಿಯಲ್ಲಿ ಹಾದಿಯ ಪಕ್ಕದಲ್ಲಿ ಕೆಲವರು ಮಕ್ಕಳಿರುವರು. ರೋಗಿಗಳೆಲ್ಲ ನಿದ್ರೆಮಾಡುತ್ತಿದ್ದುದರಿಂದ ಯಾರನ್ನೂ ಏನೂ ಕೇಳಲಾಗಲಿಲ್ಲ. ಕೆಳಗೆ ಬಂದೆವು. ಅಲ್ಲಿ ನನಗೊಂದು ಚಿಕ್ಕ ಕೊಠಡಿ ತೋರಿಸಿದರು. ರೋಗಿಗಳೆಲ್ಲ ಕಾರಖಾನೆಗಳಿಂದ ಬರುವಾಗ ಅವರ ಕೊಳಕು ಬಟ್ಟೆಗಳನ್ನು ಅಲ್ಲಿ ಬಿಟ್ಟುಬಿಡುವರು. ಈ ಕೊಳಕು ಬಟ್ಟೆ ಇಡುವ ಕೊಠಡಿಯ ಪಕ್ಕದಲ್ಲಿಯೇ ಸ್ನಾನದ ಮನೆ. ಅಲ್ಲಿ ಬಿಸಿ ನೀರು ತಣ್ಣೀರಿನ ನಲ್ಲಿಗಳೆರಡೂ ಇವೆ. ಹೆಂಗಸರಿಗೂ ಗಂಡಸರಿಗೂ ಬೇರೆ ಬೇರೆ ಸ್ನಾನದ ಮನೆ.

ಕೂಲಿಕಾರರು ಈ ಕೊಠಡಿಯಲ್ಲಿ ಕೊಳಕು ಬಟ್ಟೆ ಬಿಟ್ಟು, ಆ

ಕೋಠಡಿಯಲ್ಲಿ ಸ್ನಾನಮಾಡಿ ಆಶ್ರಮದ ಶುಭ್ರವಾದ ಬಟ್ಟೆ ಹಾಕಿಕೊಂಡು, ಚಾವಡಿಯಲ್ಲಿ ಸ್ವಲ್ಪಹೊತ್ತು ವಿಶ್ರಾಂತಿ ಪಡೆದು, ಪತ್ರಿಕೆ ಓದಿ, ರೇಡಿಯೋ ಕೇಳಿ ಆನಂದಿಸುವರು. ಏಳೂವರೆಗೆ ಊಟಮಾಡಿಕೊಂಡು, ರಾತ್ರಿಯೆಲ್ಲ ಅಲ್ಲಿಯೇ ಮಲಗಿ ಬೆಳಗಾಗುತ್ತಲೇ ತಮ್ಮ ತಮ್ಮ ಕೆಲಸಗಳಿಗೆ ಅವರು ಹೊರಟು ಹೋಗುವರು. ಕಾರಖಾನೆಯಲ್ಲಿ ಅವರ ಮಧ್ಯಾಹ್ನದ ಊಟ. ಸಾಯಂಕಾಲದ ವರೆಗೂ ಈ ಕಡೆ ಬರುವುದೇ ಇಲ್ಲ. ಶಾಲೆಯ ಮಕ್ಕಳೂ ಕೂಡ ಹೀಗೇ ಇಲ್ಲಿ ವಾಸಮಾಡುವರು. ಅವರ ಊಟ ಮಾತ್ರ ಆರೂವರೆಗೇ ಮುಗಿದು ಹೋಗುವುದು.

ಇಲ್ಲೊಂದು ಮಾತು ಹೇಳಬೇಕು. ಈ ಆರೋಗ್ಯಾಶ್ರಮ ಬರಿಯ ವೈದ್ಯಶಾಲೆಯಲ್ಲ. ರೋಗಿಗಳಾದ ಕೂಲಿಕಾರರು, ರೋಗಭೀತಿಯಿರುವವರು, ದುರ್ಬಲರು, ಶರೀರಪುಷ್ಟಿಗಾಗಿ ಪ್ರತ್ಯೇಕ ಆಹಾರ ವಿಹಾರದ ಆವಶ್ಯಕತೆಯುಳ್ಳವರು ಇಂಥವರನ್ನು ಇದರಲ್ಲಿರಿಸಲಾಗುವುದು. ಇದರಲ್ಲಿ ಸೇರಲಿಚ್ಛಿಸಿದವರು ಕಾರಖಾನೆಗಳ ವೈದ್ಯರಿಂದ ಸರ್ಟಿಫಿಕೇಟು ಸಂಪಾದಿಸಬೇಕು. ಶಾಲಾ ಮಕ್ಕಳಾದರೆ ಶಾಲೆಯ ವೈದ್ಯರಿಂದ ತೆಗೆದುಕೊಂಡು ಬರಬೇಕು. ಇಲ್ಲಿ ಕೊಡುವುದು ಸಾಮಾನ್ಯವಾದ ಊಟ. ಆದರೆ, ಬಡವರ ಮನೆಯ ಊಟಕ್ಕಿಂತ ಪುಷ್ಟಿಕರ. ಇಲ್ಲಿಯ ಪದ್ಧತಿ ಚೆನ್ನಾಗಿವೆ. ಕೋಠಡಿಗಳು, ಹಾಸಿಗೆಗಳು ಎಲ್ಲವೂ ಬಹಳ ಪರಿಶುಭ್ರ. ರೋಗಿಗಳಿಂದ ಏನನ್ನೂ ತೆಗೆದುಕೊಳ್ಳುವುದಿಲ್ಲ. ಇದರ ವೆಚ್ಚವನ್ನೆಲ್ಲ ವಿಮಾಶಾಖೆಯೇ ಹೊರುತ್ತದೆ. ರಷ್ಯನ್ ಪ್ರಭುತ್ವದ ಆರೋಗ್ಯಶಾಖೆಯವರು ವೈದ್ಯರನ್ನು ಕೊಡುತ್ತಾರೆ. ಅವರ ಸಂಬಳಗಳನ್ನೂ ಸಹ ವಿಮಾಶಾಖೆಯೇ ಕೊಡಬೇಕು. ರಷ್ಯದ ಕಾರಖಾನೆಗಳು ೨೪ ಗಂಟೆಗಳ ಕಾಲವೂ ಕೆಲಸ ಮಾಡುವುದರಿಂದ ಅದರಲ್ಲಿ ಸರತಿಯ ಪ್ರಕಾರ ಕೆಲಸ ಮಾಡುವವರು ಈ ಆಶ್ರಮಕ್ಕೆ ಬೇರೆ ಬೇರೆ ಕಾಲದಲ್ಲಿ ಬಂದು ಹೋಗುವರು. ಮಾಸ್ಕೋ ಜಿಲ್ಲೆಯಲ್ಲಿಯೇ ಈ ಸೌಕರ್ಯಗಳು ಹೆಚ್ಚೆಂದೂ, ಆರು ಇಂಥ ಆಶ್ರಮ ಇವೆಯೆಂದೂ ತಿಳಿಯಿತು.

## ಸಮಾಜಗ್ರಹ

ಬೆಳಿಗ್ಗೆ ನಾವು 'ಸಮಾಜಗೃಹ' (Community House) ಗಳನ್ನು ನೋಡಲಿಕ್ಕೆ ಹೊರಟೆವು. ಅಲ್ಲಿ ಜನರು ಯಾವ ವಿಧವಾಗಿರುವರೋ, ಏನು ತಿನ್ನುತ್ತಾರೋ, ಎಂಥ ವಿನೋದಗಳಲ್ಲಿ ಕಾಲ ಕಳೆಯುತ್ತಾರೋ ನೋಡಬೇಕೆಂದೆನಿಸಿತು. ಈ ದಿನ ಉಷ್ಣವು ಸೆಂಟಗ್ರೇಡ್ ಥರ್ಮಾಮಿಟರ್‌ನ ಸೊನ್ನೆಗಿಂತಲೂ ೯ ಡಿಗ್ರಿ ಕಡಿಮೆಯಾಗಿದೆ. ಈ ಚಳಿ ರಷ್ಯನರಿಗೊಂದು ಲೆಕ್ಕವಲ್ಲ. 'ಈ ವಿಧವಾಗಿ ನವಂಬರಿನಲ್ಲಿರುವುದು. ಈ ತಿಂಗಳಲ್ಲಿ ಸೊನ್ನೆಗಿಂತಲೂ ೩೦° ಡಿಗ್ರಿ ಕಡಿಮೆ ಇರಬೇಕಾಗಿತ್ತು. ಪ್ರಾಯಶಃ ಈ ವರುಷ ಅಮೇರಿಕಾದಲ್ಲಿ ಹಿಮವು ಹೆಚ್ಚಾಗಿ ಸುರಿಯುತ್ತದೆ. ಆದುದರಿಂದಲೇ ಇಲ್ಲಿಷ್ಟು ಕಡಿಮೆಯಾಗಿದೆ' ಎಂದರೆಲ್ಲರು.

ಯೂರೋಪುಖಂಡದ ಉತ್ತರ ಮಧ್ಯಭಾಗಗಳಲ್ಲಿ ಮಳೆಗಾಲ ಚಳಿಗಾಲದಲ್ಲಿ ಸೂರ್ಯದರ್ಶನ ದುರ್ಲಭ. ಆದರೂ, ರಷ್ಯಾದಲ್ಲಿ ಮಾತ್ರ ಈ ನಿಯಮ ವಿರೋಧವಾಗಿ ಹೊತ್ತು ಹುಟ್ಟಿದೆ. ಬಿಸಿಲೂ ಸಹ ಜೋರಾಗಿಯೇ ಇದೆ.

'ಸಮಾಜಗೃಹ' ಟ್ರಾಂ ರಸ್ತೆಗೆ ಪಕ್ಕದಲ್ಲಿಯೇ ಇದೆ. ಅದರ ಮುಂದುಗಡೆ ಕಾಲಿಗೆ ಅವುಗೆ ಕಟ್ಟಿಕೊಂಡು ಮಂಜಿನಲ್ಲಿ ಜಾರುಗಾಲು ಆಟ ಆಡುತ್ತಿರುವರು. 'ಗೃಹ'ವು ಬಹಳ ದೊಡ್ಡದು. ವಲಯದಂತೆ ಒಂದಕ್ಕೊಂದು ಅಂಟಿಕೊಂಡ ಮೂರು ಭಾಗ ಕಾಣಿಸುತ್ತವೆ. ಭವನವೆಲ್ಲವೂ ಅನೇಕ ಭಾಗಗಳಾಗಿ ವಿಭಾಗಿಸಲ್ಪಟ್ಟಿರುವುದು. ಪ್ರತಿಯೊಂದು ಭಾಗದಲ್ಲಿಯೂ ಎರಡೆರಡು ಕೊಠಡಿ. ಈ ಕೊಠಡಿಗಳನ್ನು ತಿಂಗಳಿಗೆ ಸಲವತ್ತು ರೂಪಾಯಿಗಳ ಬಾಡಿಗೆಗೆ ಕೂಲಿಕಾರರಿಗೆ ಕೊಡುವರು. ಸಮಾಜಗೃಹದಲ್ಲಿರುವವರಿಗಾಗಿ ಸಮಷ್ಟಿ ಭೋಜನ ಶಾಲೆಯೂ ಅಗಸರ ಅಂಗಡಿಯೂ ಇವೆ. ಸದಸ್ಯರು ಬೇಕಾದರೆ ಸ್ವಂತವಾಗಿ ಅಡಿಗೆ ಮಾಡಿಕೊಂಡು ಊಟ ಮಾಡಬಹುದು. ಎರಡೂವರೆ ವರುಷದ ಮಕ್ಕಳಿ

ಗೋಸ್ಕರ 'ಕ್ರೆಚೀ' ಇದೆ. 'ಲೆನಿನ್‌ಗ್ರಾಡಿ'ನಲ್ಲಿದ್ದಂತೆಯೇ ಇದೆ ಇದು. ಅದಕ್ಕಿಂತಲೂ ಚಿಕ್ಕದು. ಇದರಲ್ಲಿ ಸಂಗೀತೋಪಕರಣ ಇಲ್ಲ. ಈ 'ಕ್ರೆಚೀ'ಯಲ್ಲಿ ಮಕ್ಕಳು ತಿಂಡಿ ತಿನ್ನುವುದು ಬಹಳ ಚಮತ್ಕಾರವಾಗಿದೆ ದಾದಿಯ ಸುತ್ತಲೂ ಮಕ್ಕಳು ಬಹಳ ಗಂಭೀರವಾಗಿ ಕುಳಿತುಕೊಂಡಿರು ವರು. ಅವರ ಹಾಸಿಗೆ, ಬಟ್ಟೆ, ರುಮಾಲು ಬಹಳ ಸ್ವಚ್ಛವಾಗಿರುವುವು. ಒಂದು ಕಡೆ ಎರಡೂವರೆಯಿಂದ ಆರು ವರುಷದ ವರೆಗಿನ ಮಕ್ಕಳಿಗಾಗಿ ಪ್ರಾಥಮಿಕ ಶಾಲೆ, ಕಿಂಡರ್ ಗಾರ್ಡನ್ ಶಾಲೆ ಇವೆ. ಅವರವರ ವಯ ಸ್ಸಿನ ಮೇರೆಗೆ ಮಕ್ಕಳನ್ನು ಮೂರು ಭಾಗಗಳಾಗಿ ವಿಂಗಡಿಸಿರುವರು.

ಅದರಲ್ಲೊಂದು ತರಗತಿ ನೋಡಿ ಬಹಳ ಸಂತೋಷವಾಯಿತು. ಎಲ್ಲರಿಗಿಂತಲೂ ಚಿಕ್ಕ ವಯಸ್ಸಿನ ಮಕ್ಕಳದು. ಅಧ್ಯಾಪಕಳು ಮಧ್ಯೆ ಕುಳಿತಿರಲು ಮಕ್ಕಳೆಲ್ಲರೂ ಸುತ್ತಲೂ ಸೇರಿದರು. ಒಬ್ಬನು ಕತ್ತನ್ನು ತಬ್ಬಿಕೊಂಡ. ಒಬ್ಬನು ಬೆನ್ನಿಗೆ ತೂಗು ಬಿದ್ದ. ಒಬ್ಬನು ತನ್ನ ಪುಟ್ಟ ಕೈಗಳಿಂದ ಕೆನ್ನೆಗಳನ್ನು ಹಿಡಿದಿರುವ. ಎಲ್ಲರೂ ಏನನ್ನೋ ಕೇಳುತ್ತಿರು ವರು. ಆಕೆ ಅವರಿಗೆ ಯಾವುದೋ ಒಂದು ಕತೆ ಹೇಳುತ್ತಿದ್ದಳು. ಇಲ್ಲಿಯ ಪ್ರಾರಂಭ ವಿದ್ಯಾ, ಕಥೆಗಳಿಂದ ನಡೆಯುತ್ತಿದೆ. ಆ ಕತೆಗಳಲ್ಲಿ, ಪಂಚವರ್ಷ ಪ್ರಣಾಳಿಕೆಯ ಅದ್ಭುತ ಕಾರ್ಯಕ್ರಮ, ಝಾರರು ಮಾಡಿದ ದುರಂತ, ರಷ್ಯಾದ ಭವಿಷ್ಯ ಇವು ಮುಖ್ಯ. ರಷ್ಯಾದ ಮುಂದಿನ ಜನಾಂಗದ ಮೊಗ್ಗು—ಈ ಮಕ್ಕಳು—ಆ ಕತೆಗಳನ್ನು ಬಹು ಶ್ರದ್ಧೆಯಿಂದ ಕೇಳು ತ್ತಾರೆ. ಈ ಮಂದಿರದಲ್ಲಿ ಒಂದು ವಾಚನಾಲಯವೂ, ಒಂದು ನಾಟಕ ಶಾಲೆಯೂ, ಹತ್ತಿರದಲ್ಲಿಯೇ ಒಂದು ಹೈಸ್ಕೂಲೂ ಇದೆ. ರಷ್ಯಾ ದೇಶ ದಲ್ಲೆಲ್ಲಾ ಈಗ ಸಮಷ್ಟಿ ಭೋಜನಾಲಯ, ಶಾಲೆ, ಆಗಸರ ಅಂಗಡಿ. ಕ್ಲಬ್ಬು, ನಾಟಕಶಾಲೆ ಮೊದಲಾದುವನ್ನು ಸ್ಥಾಪಿಸಲು ಪ್ರಯತ್ನ ನಡೆ ಯುತ್ತಿವೆ. ವ್ಯವಸಾಯದಲ್ಲಿಯೂ, ಕೈಗಾರಿಕೆಯಲ್ಲಿಯೂ ಸಹ ಪ್ರತ್ಯೇಕ ವಾಗಿ ನಿಪುಣರನ್ನು ತಯಾರು ಮಾಡಲು ಬ್ರಹ್ಮಾಂಡ ಪ್ರಯತ್ನ ನಡೆದಿವೆ. ಇಲ್ಲಿರುವವರೆಲ್ಲರಿಗೂ ಸ್ಥಾನಮಾನ ಸಮಾನ. ಅವರ ಸಂಪಾದನೆಯಿಂದ ಗೌರವದಲ್ಲಿ ಹೆಚ್ಚು ಕಡಿಮೆ ಇಲ್ಲ. ಎಲ್ಲರಿಗೂ ಒಂದೇ ತರದ ಊಟ. 'ಕ್ರೆಚೀ'ಗಳಲ್ಲಿ ಮಕ್ಕಳೆಲ್ಲರನ್ನೂ ಒಂದೇ ಸಮವಾಗಿ ನೋಡುವರು.

ಮಕ್ಕಳನ್ನು ಕಮ್ಯೂನಿಷ್ಟು ಪದ್ಧತಿಗಳ ಮೇಲೆ ಪೋಷಣೆ ಮಾಡುವರು. ಮೊದಲಿನಿಂದಲೂ ವ್ಯಕ್ತಿಗತ ಸ್ವಾರ್ಥತೆಯನ್ನು ನಾಶಮಾಡಿ ಸಮಾಜದ ಹಿತಕ್ಕಾಗಿ ಪ್ರಯತ್ನಿಸಬೇಕೆಂದು ಕಲಿಸಿಕೊಡುವರು.

---

## ೧೬

### ಹೈಸ್ಕೂಲು

ನಾವು ನಡೆಯುತ್ತ ಹೈಸ್ಕೂಲಿನ ಹತ್ತಿರಕ್ಕೆ ಬಂದೆವು. ನಮ್ಮಂತೆಯೆ ನೋಡುವುದಕ್ಕೆ ಯಾತ್ರಿಕರ ಗುಂಪೊಂದು ಅಲ್ಲಿಗೆ ಬಂದಿತು. ಅವರಲ್ಲಿ ಅಮೇರಿಕನ್‌ರೇ ಹೆಚ್ಚು. ಎಲ್ಲರೂ ಒಂದೇ ಕೊಠಡಿಯೊಳಕ್ಕೆ ಹೊರಟೆವು. ಮಕ್ಕಳೆಲ್ಲರೂ ಸೇರಿ 'ಪಿಯಾನೋ' ಮೇಲೆ ಹಾಡುತ್ತಿದ್ದರು. ಮೂಲೆಯಲ್ಲೊಂದು ಮೇಜು; ಅದರ ಮೇಲೆ ಕೆಲವು ಮಕ್ಕಳು ಒಗ್ಗಿಕೊಂಡು ರೇಡಿಯೋ ನಿರ್ಮಾಣವನ್ನು ಪರಿಶೀಲಿಸುತ್ತಿರುವರು. ಶಾಲೆಯಲ್ಲಿ ಓದು ಸರತಿ ಸರತಿಯಾಗಿಯೇ ನಡೆಯುತ್ತದೆ. ಒಂದು ತಂಡವು ಉದ್ಯೋಗ ಶಿಕ್ಷಣ ಹೊಂದುತ್ತಿದ್ದರೆ ಎರಡನೆಯ ತಂಡ ಪಾಠ ಕಲಿಯುತ್ತಿರುತ್ತದೆ. ಮಕ್ಕಳೆಲ್ಲ ತಂಡತಂಡಗಳಾಗಿ ವಿಭಾಗಿಸಲ್ಪಟ್ಟಿರುವರು. ಒಂದೊಂದು ತಂಡಕ್ಕೆ ಒಂದೊಂದು ವಾರ ನಿರ್ಣಯಿಸಲ್ಪಟ್ಟಿರುವುದು. ರಷ್ಯಾದಲ್ಲಿ ವಾರವೆಂದರೆ ಆರೇ ದಿನ, ವಿರಾಮಕ್ಕಾಗಿ ಬೇರೆ ಒಂದುದಿನ ಎಂದು ಇಲ್ಲ. ಈ ಪಾಠಶಾಲೆಗೂ ಅಷ್ಟೇ. ಒಂದು ಗುಂಪು, ಭಾನುವಾರದಿಂದ ಶುಕ್ರವಾರದ ವರೆಗೂ ಓದಿ ಶುಕ್ರವಾರ ರಜದಲ್ಲಿದ್ದರೆ ಇನ್ನೊಂದು ಗುಂಪು ಸೋಮವಾರದಿಂದ ಐದು ದಿನ ಬಂದು ಶನಿವಾರ ವಿರಾಮ ಪಡೆಯುತ್ತದೆ. ಈ ಶಾಲೆಯಲ್ಲಿ ಒಟ್ಟಿನ ಮೇಲೆ ಮೂರು ಸಾವಿರ ಮಂದಿ ಓದುತ್ತಿರುವರಂತೆ. ಒಂದೊಂದು ತಂಡದಲ್ಲಿ ೧೫೦೦ ಮಂದಿಯಂತೆ ಎರಡು ತಂಡ ಈ ಗುಂಪುಗಳಿಗೆ ನಿಯಂತರು ಬೇರೆ ಬೇರೆ, ಅಂತಲೇ ಇಷ್ಟು ಮಂದಿಗೂ ಓದು ಹೇಳಲು ಸುಲಭವಾಗಿದೆ.

ತಮ್ಮ ಸರತಿಗಾಗಿ ನಿರೀಕ್ಷಿಸುತ್ತಿದ್ದ ಹುಡುಗರು ವ್ಯರ್ಥವಾಗಿ ಮಾತಿನಲ್ಲಿ ಕಾಲಹರಣಮಾಡದೆ, ಸಂಗೀತಶಾಲೆಯಲ್ಲಿ ಸಂಗೀತ ಕಲಿಯು ತ್ತಲೋ, ಶಾಸ್ತ್ರೀಯ ವಿದ್ಯೆಯನ್ನಭ್ಯಸಿಸುತ್ತಲೋ, ಕಾಲವನ್ನೂ ಸದ್ವಿ ನಿಯೋಗ ಮಾಡುವರು. ಹೆಂಗಸರೂ ಗಂಡಸರೂ ಜೊತೆಯಲ್ಲಿ ಕಲಿಯು ವರು. ಒಬ್ಬ ವಿದ್ಯಾರ್ಥಿಯನ್ನು ಕರೆದು ಒಂದು ಹಳ್ಳಿಯ ಹಾಡನ್ನು, ವಿಪ್ಲವ ಕೀರ್ತನೆಯನ್ನು ಹಾಡಬೇಕೆಂದು ಕೇಳಿದೆ. ಉಪಾಧ್ಯಾಯ ಅಸ್ತು ಅಂದ. ಗ್ರಾಮಗೀತೆಯು ಭಾರತೀಯ ಗೀತೆಯಿದ್ದಂತೆಯೇ ಇದೆ. ಹಳ್ಳಿಯ ಹಾಡಿನ ತಾಳದ ಪ್ರಕಾರ ಕೆಲವರು ಚಪ್ಪಾಳೆ ಹಾಕುತ್ತ ಕೈ ಹಿಡಿದುಕೊಂಡು ನಾಟ್ಯಮಾಡಲಾರಂಭಿಸಿದರು. ಕ್ರಾಂತಿ ಕೀರ್ತನೆಯ ಲ್ಲಿಯೂ ಕೂಡ ನಮ್ಮ ದೇಶದ ಕಲೆಯು ಕಂಡುಬಂದಿತು. ಕೆಲವು ಶಬ್ದಗಳ ಉಚ್ಚಾರವೂ ನಮ್ಮ ಉಚ್ಚಾರಣೆಯ ಹಾಗಿದೆ. ಪೂರ್ವಕಾಲದ ರಷ್ಯಾ ಮತವಿಶ್ವಾಸ ವಿಷಯಗಳಲ್ಲಿ, ಜಮೀನುದಾರಿ—ಸಾಮಂತರಾಜ ಪದ್ಧತಿಗಳಲ್ಲಿ ಬಹುಮಟ್ಟಿಗೆ ನಮ್ಮ ದೇಶವನ್ನೇ ಹೋಲಿದ್ದಿತು.

ಇನ್ನೊಂದು ದೊಡ್ಡ ಚಾವಡಿಯಲ್ಲಿ ಹುಡುಗ ಹುಡಿಗಿಯರಿಗೆ ಆಟ ಪಾಟಗಳು ಕಲಿಸಲ್ಪಡುತ್ತಿರುವುವು. ಆ ಚಾವಡಿಯಲ್ಲಿ ಸರಿ ಸುಮಾರು ಐವತ್ತು ಮಂದಿ ವಿದ್ಯಾರ್ಥಿಗಳು ಗುಂಪು ಸೇರಿರುವರು. ಅವರಲ್ಲಿ ಬಹಳ ಮಂದಿ ಹುಡುಗಿಯರು; ಅವರ ಗುರುವಿನೊಡನೆ ಮಾತಿಗೆ ಮೊದಲು ಮಾಡಿದೆ.

'ನಿಮ್ಮ ಶಾಲೆಯ ವಿದ್ಯಾರ್ಥಿಗಳಲ್ಲಿ ಸ್ತ್ರೀಯರೆಷ್ಟು; ಪುರುಷ ರೆಷ್ಟು?'

'ನೂರಕ್ಕೆ ೭೦ ಜನ ಸ್ತ್ರೀಯರು, ೩೦ ಮಂದಿ ಪುರುಷರು'

'ಹೆಂಗಸರು ಗಂಡಸರನ್ನು ಸೋಲಿಸಿದ ಹಾಗಲ್ಲವೇ'

'ನಿಜ. ಬಹಳ ಹೆಣ್ಣುಮಕ್ಕಳು ಬುದ್ಧಿಯಿಂದಲೂ, ಜಾಣ್ಮೆ ಯಿಂದಲೂ ಇರುತ್ತಾರೆ. ಅವರು ಸುಲಭವಾಗಿ ಬೇಗನೆ ಕಲಿತುಕೊಳ್ಳ ಬಲ್ಲರು.'

'ನೀವು ಹೇಳಿದ ಲೆಕ್ಕಾಚಾರದ ಮೇರೆಗೆ ಗಂಡಸರು ಓದುವುದಿಲ್ಲ

ವೆಷ್ಟಲೇ? ಹೆಂಗಸರಿಗಿಂತಲೂ ಗಂಡಸರು ನಿಮ್ಮ ದೇಶದಲ್ಲಿ ಕಡಿಮೆ ಇರುವರೇ?'

'ಹಾಗಲ್ಲ. ನೆನ್ನೆಯ ವರೆಗೂ ಹೆಂಗಸರನ್ನು ಪಾಠಶಾಲೆಗಳಿಗೆ ದೂರವಾಗಿಟ್ಟಿದ್ದರು. ಆದರಿಂದಲೇ ಈಗವರ ಸಂಖ್ಯೆ ಹೆಚ್ಚಾಗಿದೆ. ಇತರ ಪಾಠಶಾಲೆಗಳಲ್ಲಿ ಇಲ್ಲಿದ್ದಷ್ಟು ಹೆಚ್ಚಾಗಿಲ್ಲ.'

ವಿದ್ಯಾರ್ಥಿಗಳೆಲ್ಲರೂ ಆರೋಗ್ಯಶಾಲಿಗಳಾಗಿ ಉತ್ಸಾಹಶಾಲಿಗಳಾಗಿ ಇರುವರು. ಅವರನ್ನು ನೋಡಿದ ಕೂಡಲೇ ನಮ್ಮ ದೇಶದ ವಿದ್ಯಾರ್ಥಿಗಳ ದೀನ—ದುರ್ಬಲ ಮುಖ ಜ್ಞಾಪಕಕ್ಕೆ ಬಂದುವು.

ನಮ್ಮನ್ನು ಒಂದೊಂದು ಕೊಠಡಿಯೊಳಕ್ಕೂ ಕರೆದುಕೊಂಡು ಹೋಗಿ ತೋರಿಸಿದರು. ಪ್ರತಿಯೊಂದು ಸ್ಥಳದಲ್ಲಿಯೂ ಕ್ರಮಶಿಕ್ಷಣದ ಔಚಿತ್ಯ ತುಂಬಿ ತುಳುಕುತ್ತಿರುವುದು. ಒಂದು ಕೊಠಡಿಯಲ್ಲಿ ಮಕ್ಕಳಿಗೆ ಪ್ರೋತ್ಸಾಹ, ದಂಡ ಕೊನೆಡುತ್ತಿರುವ ವಿಧಾನವನ್ನು ತೋರಿಸಿರುವರು. ಅಲ್ಲೊಂದು ದೊಡ್ಡ ಹಲಗೆ ತೂಗು ಹಾಕಿದಾರೆ. ಅದರಲ್ಲಿ ಅರ್ಧ ಭಾಗಕ್ಕೆ ಕೆಂಪು ಬಣ್ಣ, ಮತ್ತರ್ಧ ಭಾಗಕ್ಕೆ ಕಪ್ಪು ಬಣ್ಣ ಬಳಿದಿರುವರು. ಬಹಳ ಚೆನ್ನಾಗಿ ಕೆಲಸ ಕಾರ್ಯಗಳನ್ನು ಮಾಡಿದ ಹುಡುಗರ ಹೆಸರನ್ನು ಕೆಂಪು ಬಣ್ಣದ ಮೇಲೆ, ಕೆಟ್ಟ ಕೆಲಸ ಮಾಡಿದವರ ಹೆಸರನ್ನು ಕಪ್ಪು ಬಣ್ಣದ ಮೇಲೂ ಬರೆಯುತ್ತಾರೆ. ಇಲ್ಲಿ ಗೋಡೆಯ ಪತ್ರಿಕೆಗಳು, ಹಸ್ತಲಿಖಿತ ಪತ್ರಿಕೆಗಳು ಕಂಡುಬಂದುವು. ವಿದ್ಯಾರ್ಥಿಗಳಿಂದ ಕೂಡಿಸಲ್ಪಟ್ಟ ಸುದ್ದಿ, ಪ್ರಾಸಂಗಿಕ ಸುದ್ದಿ, ಸಾಹಿತ್ಯ ವಿಷಯಕ ಲೇಖನ, ಪಂಚವಾರ್ಷಿಕ ಪ್ರಣಾಳಿಕೆಯ ಪ್ರಕಾರ ಪ್ರತಿಶಾಖೆಯಲ್ಲೂ ಕಂಡುಬಂದ ಹಾನಿ ವೃದ್ಧಿಗಳು, ಹುಡುಗನು ಪಾಠವನ್ನು ಓದದಿದ್ದರೆ ಸೋಷಲಿಸ್ಟರಿಗೆ ವ್ಯತಿರೇಕಾಭಿಪ್ರಾಯದವನಾದರೆ ಅವನ ಟೀಕೆ ಈ ಪತ್ರಿಕೆಯಲ್ಲಿ ಪ್ರಕಟಿಸಲ್ಪಡುತ್ತಿರುವವು. ರಷ್ಯನ್ ವಿದ್ಯಾರ್ಥಿಗಳನ್ನು ಶಿಕ್ಷಿಸುವ ಬೆತ್ತ ಇವೇ. ಯಾರನ್ನೂ ಹೊಡೆಯುವುದಿಲ್ಲ. ಯಾವನಾದರೂ ವಿದ್ಯಾರ್ಥಿ ತಪ್ಪು ಮಾಡಿದರೆ ಆತನನ್ನು ವಿಚಾರಿಸಲು ವಿದ್ಯಾರ್ಥಿಗಳೇ ನಡೆಸುವ ಗೆಳೆಯರ ಪಂಚಾಯತಿ ಇದೆ. ವನಸ್ಪತಿ ಶಾಸ್ತ್ರವನ್ನಾಗಲಿ, ಅದಕ್ಕೆ ಸಂಬಂಧಪಟ್ಟ ಇತರ ವಿಷಯಗಳನ್ನಾಗಲಿ, ಕಲಿತುಕೊಳ್ಳಲು ಜೀವಂತವಾಗಿರುವ ಗಿಡಗಳು, ಗಿಡಗಳ ಚಿತ್ರ

ಗಳು ಇರುವುವು. ಪ್ರತಿಯೊಬ್ಬ ವಿದ್ಯಾರ್ಥಿಯೂ ಯಾವುದೇ ಒಂದು ವಿದೇಶಿ ಭಾಷೆಯನ್ನು—ಇಂಗ್ಲೀಷು, ಜರ್ಮನಿ, ಫ್ರೆಂಚ ಕಲಿಯಲೇ ಬೇಕು.

ಎಲ್ಲಕ್ಕಿಂತಲೂ ಕೆಳಗಿನ ಅಂತಸ್ತಿನಲ್ಲಿರುವುದು ಯಂತ್ರಸಾಮಗ್ರಿಗಳ ಕೊಠಡಿ. ಇಲ್ಲಿ ವಿದ್ಯಾರ್ಥಿಗಳು ಕೈಯಿಂದ ಯಂತ್ರಗಳನ್ನು ತಿರುಗಿಸಿ ಸಾಮಾನ್ಯವಾದ ವಸ್ತುಗಳನ್ನು ಸಿದ್ಧಪಡಿಸುತ್ತಿರುವರು. ಈ ಕಾರಖಾನೆಯಲ್ಲಿ ಪ್ರತಿಯೊಬ್ಬ ವಿದ್ಯಾರ್ಥಿಯೂ ದಿನಕ್ಕೆರಡು ಗಂಟೆಯ ಕಾಲ ಕೆಲಸ ಮಾಡಲೇಬೇಕು ಇವರನ್ನು ವಾರಕ್ಕೆ ನಾಲ್ಕು ಗಂಟೆ ಯಾವುದಾದರೂ ದೊಡ್ಡ ಕಾರಖಾನೆಗೆ ಕಳುಹಿಸಿ, ಕೆಲಸ ಕಲಿಸುವರು. ಇಲ್ಲಿಯ ವಿದ್ಯಾರ್ಥಿಗಳಿಂದ ನಡೆಯಿಸಲ್ಪಟ್ಟ ಹಸ್ತಲಿಖಿತ ಪತ್ರಿಕೆಯ ಕೆಲವು ಪ್ರತಿಗಳನ್ನು ನನಗೆ ಕೊಟ್ಟರು. ಆ ಮಕ್ಕಳು ಬರೆದು ಜಾಗರೂಕತೆಯಿಂದಿಟ್ಟುಕೊಂಡಿದ್ದ ಡೈರಿಗಳನ್ನು ಸಹ ತೋರಿಸಿದರು.

ಪಂಚವರ್ಷಪ್ರಣಾಳಿಕೆಯ ಪ್ರಕಾರ, ಯಾವ ಯಾವ ವರುಷದಲ್ಲಿ ಎಷ್ಟೆಷ್ಟು ಅಭಿವೃದ್ಧಿಯು ಆಯಾ ಶಾಖೆಗಳಲ್ಲಿ ಆಗಬೇಕಿದೆಯೋ ಅದನ್ನು ಮುಂಚೆಯೇ ನಿರ್ಣಯಿಸಿ, ಆ ಪ್ರಕಟನೆಗಳನ್ನು ಆಯಾಯ ಶಾಖೆಯ ಪ್ರಧಾನ ಕಾರ್ಯಾಲಯಗಳಿಗೆ ಕಳುಹಿಸುವರು. ಆಯಾ ಶಾಖೆಗಳು ತಮ್ಮ ಕೈಕೆಳಗಿನ ಶಾಖೆಗಳಿಗೆ ಮತ್ತೆ ಲೆಕ್ಕಹಾಕಿ ತಮ್ಮ ಕಾರ್ಯಕ್ರಮದ ಸೂಚನೆಗಳನ್ನು ಕಳುಹಿಸುವರು. ಅವು ತಮ್ಮಾಧೀನದಲ್ಲಿರುವ ದಳಗಳಿಗೆ ಮತ್ತೆ ಕಾರ್ಯವಿಭಾಗ ಮಾಡಿ ಕಳುಹಿಸಿಕೊಡುತ್ತವೆ. ಪ್ರತಿಯೊಂದು ದಳವೂ ತನ್ನ ಸದಸ್ಯರಲ್ಲಿ ಕೆಲಸವನ್ನು ಹಂಚಿಹಾಕುವುದು. ಈ ರೀತಿಯಾಗಿ ಪಂಚವರ್ಷ ಪ್ರಣಾಳಿಕೆಯನ್ನೂ ಅದರ ಕಾರ್ಯಕ್ರಮವನ್ನೂ ಪ್ರತಿಯೊಬ್ಬ ಕೂಲಿಕಾರನೂ, ವಿದ್ಯಾರ್ಥಿಯೂ, ಕಲೆಗಾರನೂ, ಇಂಜನಿಯರನೂ, ರೈತನೂ ನಿರ್ವಹಿಸಬೇಕು. ಆದುದರಿಂದಲೇ ಪ್ರತಿಯೊಬ್ಬ ವಿದ್ಯಾರ್ಥಿಯೂ ಡೈರಿಯನ್ನಿಡುವುದು ತಪ್ಪದ ಕೆಲಸ. ಇದರಿಂದ ಪ್ರತಿಯೊಬ್ಬ ಮನುಷ್ಯನೂ ತನಗೆ ನಿಯಮಿಸಲ್ಪಟ್ಟ ಕಾರ್ಯವನ್ನು ಎಷ್ಟರ ಮಟ್ಟಿಗೆ ನಿರ್ವಹಿಸಿರುವನೋ ಸ್ಪಷ್ಟವಾಗಿ ತಿಳಿಯುತ್ತದೆ. ಉಪಾಧ್ಯಾಯರಾಗಲಿ, ಉಪಾಧ್ಯಾಯಿನಿಯರಾಗಲಿ, ತಮ್ಮ ದೊಡ್ಡಸ್ತಿಕೆ ತೋರಿಸದೆ ಮಕ್ಕಳೊಡನೆ ಕಲೆತು, ಬೆರೆತು

ತಿರುಗುವರು. ವಿಪ್ಲವ ಪ್ರಾರಂಭ ದಿನಗಳಲ್ಲಿ ಉಪಾಧ್ಯಾಯರಿಗೆ ವಿದ್ಯಾರ್ಥಿಗಳೇ ದಿಕ್ಕಾಗಿದ್ದರು. ಪಾಠ್ಯಕ್ರಮ ನಿರ್ಣಯಿಸುವುದು, ಬೋಧನಾಕ್ರಮ ನಿರ್ಣಯಿಸುವುದು, ಉಪಾಧ್ಯಾಯರನ್ನು ನಿಯಮಿಸುವುದು, ತೆಗೆದು ಹಾಕುವುದು ಇವನ್ನೂ ವಿದ್ಯಾರ್ಥಿಸಂಘಗಳೇ ಮಾಡುತ್ತಿದ್ದುವು. ಉಪಾಧ್ಯಾಯರಿಗೆ ಅದು ಬಹು ಕೆಟ್ಟ ಕಾಲ. ಈಗ ಅವರ ಸ್ಥಿತಿ ಸಾ ಹೋಗಿದೆ. ಅವರಿಗೆ ಸಂಬಳ ಸರಿಯಾಗಿ ಬರುತ್ತದೆ. ಸರಕಾರ ಅವರನ್ನು ಗೌರವಿಸುತ್ತದೆ. ಪಾಠಶಾಲೆಗಳ ಉಪಾಧ್ಯಾಯರಿಗೆ ಹಿಂದೆಂದೂ ಲಭಿಸದಿದ್ದ ಗೌರವವನ್ನೂ ಉನ್ನತ ಸ್ಥಾನವನ್ನೂ ಕೊಡಬೇಕೆಂದು ಲೆನಿನ್ನನೇ ಹೇಳಿದ. ರಷ್ಯನರು ತಮ್ಮ ನಾಯಕನ ಮಾತಿನ ಯಥಾರ್ಥವನ್ನು ಚೆನ್ನಾಗಿ ಗ್ರಹಿಸಿರುವರು. ಪೂರ್ವದಲ್ಲಿ ಅಧ್ಯಾಪಕರನ್ನು ನೀಚರಂತೆ ಕಂಡು ಕೂಲಿಯುವರ ಮಕ್ಕಳು ಮೊದಲು, ಅವರು ತರುವಾಯ ಎನ್ನುತ್ತಿದ್ದರು. ಈಗ ಅವರಿಗೆ ಅಂತಹ ಅಗೌರವ ಇಲ್ಲ. ವಿದ್ಯಾರ್ಥಿಗಳಲ್ಲಿ ನೂರಕ್ಕೆ ೩೩ ಜನ ರೈತರ ಮಕ್ಕಳು, ೫೦ ಮಂದಿ ಕೂಲಿಯುವರ ಮಕ್ಕಳು, ಆ ಮೇಲೆ ಅಮೀರರ ಮಕ್ಕಳು. ಯಾವ ಕಾರಖಾನೆಯಲ್ಲಾದರೂ ಎರಡು ವರ್ಷ ಕೆಲಸ ಮಾಡಿ ನೂತನ ಸಮಾಜಕ್ಕೆ ಯೋಗ್ಯರೆಂದು ಸರ್ಟಿಫಿಕೇಟ ಸಂಪಾದಿಸಿದರೇನೇ ಅವರಿಗೆ ಶಾಲೆಯಲ್ಲಿ ಪ್ರವೇಶ.

ರಷ್ಯಾದಲ್ಲಿ ವಿದ್ಯೆ ಬಹು ತೀವ್ರವಾಗಿ ವ್ಯಾಪಿಸುತ್ತಿದೆ. ವಿದ್ಯಾವಂತರಿಲ್ಲದೆ ರಾಜನೀತಿ ನಡೆಯದು. ನಿರಕ್ಷರ ಕುಕ್ಷಿಗಳಿಗೆ ಸುಳ್ಳು ಸುದ್ದಿ, ಪೊಳ್ಳು ಹರಟೆ, ಅಂಧ ವಿಶ್ವಾಸ, ಕಟ್ಟುಕತೆ ಇವಲ್ಲದೆ ಮತ್ತಾವುದೂ ತಿಳಿಯದು ಎಂದು ಲೆನಿನ್ ಹೇಳಿರುವನು. ಸಾಮ್ಯವಾದದ ಆದರ್ಶಗಳನ್ನು ಜನರ ಮನಸ್ಸಿನಲ್ಲಿ ನಾಟಿಸಲು, ಜನಸಾಮಾನ್ಯರನ್ನು ವಿದ್ಯಾವಂತರನ್ನಾಗಿ ಮಾಡಲು, ಸರಕಾರವು ತನ್ನ ಸರ್ವಶಕ್ತಿಯನ್ನು ಉಪಯೋಗಿಸುತ್ತಿದೆ. ಕೆಲವು ಕಾಲ ಈ ಪ್ರಯತ್ನ ತಪ್ಪು ಹಾದಿಯಲ್ಲಿ ಸಾಗಿದ್ದಿತು. ತರುವಾಯ ತಮ್ಮ ತಪ್ಪು ಅವರಿಗೆ ತಿಳಿಯಿತು. ತಿಳಿದಕೂಡಲೆ ತಿದ್ದಿಕೊಳ್ಳಲು ಹಿಂಜರಿದಿಲ್ಲ. ರಾಜನೀತಿ ಕಲಿಸುವುದರಲ್ಲಿ ಭೂಗೋಳ, ಚರಿತ್ರೆ, ಗಣಿತ, ಸಾಹಿತ್ಯ, ಶಾಸ್ತ್ರಗಳನ್ನು ಮರೆತುಹೋಗುವುದಾಗಲಿ, ಅವುಗಳಲ್ಲಿ ಅಶ್ರದ್ಧೆ ತೋರಿಸುವುದಾಗಲಿ ತಪ್ಪೆಂದು ಕಮ್ಯುನಿಸ್ಟ ಪಕ್ಷದ ಕೇಂದ್ರ

ಸಭೆ ಸೂಚಿಸಿದೆ. ಅಲ್ಲಿಯ ವರೆಗೆ ವಿದ್ಯಾರ್ಥಿಗಳಿಗೆ ಕೇವಲ ಕೆಲವು ರಾಜನೀತಿ ವಾಕ್ಯಗಳು, ವಿಪ್ಲವ ಗೀತೆಗಳು, ಝಾರರ ಅನ್ಯಾಯದ ಕತೆಗಳು ಮಾತ್ರವೆ ಕಲಿಸಲ್ಪಡುತ್ತಿದ್ದುವು.

ಶಾಲೆಗಳಲ್ಲಿಯೂ, ಕಾಲೇಜುಗಳಲ್ಲಿಯೂ ಓದಿಕೊಳ್ಳುತ್ತಿದ್ದ ವಿದ್ಯಾರ್ಥಿಗಳ ಸಂಖ್ಯೆಗಳನ್ನು ನೋಡಿದರೆ, ರಷ್ಯಾದಲ್ಲಿ ವಿದ್ಯಾವ್ಯಾಪ್ತಿಯು ಎಷ್ಟು ತೀವ್ರವಾಗಿ ನಡೆಯುತ್ತಿದೆಯೆಂಬುದು ತಿಳಿಯುತ್ತದೆ.

## ಬೇರೆ ಬೇರೆ ವಿದ್ಯಾಸಂಸ್ಥೆಗಳಲ್ಲಿ ವಿದ್ಯಾರ್ಥಿ ಸಂಖ್ಯೆ

| | | ೧೯೨೪-೨೫ | ಸುಮಾರು ೧೯೩೨ರಲ್ಲಿ |
|---|---|---|---|
| ಪ್ರಾಥಮಿಕ ಪಾಠಶಾಲೆ | | ೮೦,೦೦,೦೦೦ | ೧,೯೦,೦೦,೦೦೦ |
| ಮಾಧ್ಯಮಿಕ | ,, | ೫,೦೦,೦೦೦ | ೪೫,೫೦,೦೦೦ |
| ಕಾಲೇಜ | ,, | ೧,೨೫,೦೦೦ | ೫,೦೦,೦೦೦ |
| ವ್ಯವಸಾಯ | ,, | ೧,೬೦೦ | ೨,೦೭,೦೦೦ |
| ಕೈಗಾರಿಕೆ | ,, | ೨,೬೭,೦೦೦ | ೮,೫೦,೦೦೦ |

ಈಗ ರಷ್ಯಾದಲ್ಲಿ ೮ರಿಂದ ೧೧ ವರುಷ ವಯಸ್ಸಿನ ವರೆಗಿರುವ ಬಾಲಬಾಲಿಕೆಯರು ಓದುವುದು ಕಡ್ಡಾಯದ ಕೆಲಸ. ೧೯೩೩ರಲ್ಲಿ ಆ ಮಿತಿಯನ್ನು ೧೨ ವರುಷಗಳ ವರೆಗೂ ಬೆಳೆಸಿದರಂತೆ. ಮಾಸ್ಕೋದಲ್ಲಿ ೧೫ ವರ್ಷ ಬರುವ ವರೆಗೂ ಸ್ಕೂಲಿಗೆ ಹೋಗಲೇ ಬೇಕು.

ಪ್ರಭುತ್ವದ ಭಾಷೆ ಒಂದೇ ಎಂಬ ನಿಯಮವಿಲ್ಲ. ತಮ್ಮ ತಮ್ಮ ಪ್ರಾಂತೀಯ ಭಾಷೆಯನ್ನು ಪಾಠಶಾಲೆಗಳಲ್ಲಿ ಉಪಯೋಗಿಸಿಕೊಳ್ಳಲು ಆಯಾ ಪ್ರಾಂತಕ್ಕೆ ಅಧಿಕಾರವಿದೆ. ರಷ್ಯಾ ಎಂದರೆ ಚಿಕ್ಕ ದೇಶವಲ್ಲ. ಅದೊಂದು ಮಹಾ ಖಂಡ. ಅಲ್ಲಿ ಭಾಷೆಗಳಿಗೇನೂ ಕೊರತೆಯಿಲ್ಲ. ಈ ಸ್ವಾತಂತ್ರ್ಯದಿಂದ ವಿದ್ಯಾಭಿವೃದ್ಧಿಗೆ ಬಹಳ ಸಹಕಾರಿಯಾಗಿದೆ. ರಷ್ಯಾದ ಅನೇಕ ಭಾಷೆಗಳಿಗೆ—ಜಿಪ್ಸೀ, ಬುಗ್ಯರ್ ಮೊದಲಾದವುಗಳಿಗೆ—ಲಿಪಿಯೇ ಇರಲಿಲ್ಲ. ಅಂತಹ ಭಾಷೆಗಳಲ್ಲಿ ಸಹ ಈಗ ಪುಸ್ತಕ, ಪತ್ರಿಕೆ, ಶಬ್ದಕೋಶ ಎಷ್ಟೋ ಮುದ್ರಿಸಲ್ಪಡುತ್ತಿರುವವು. ಈಗ ರಷ್ಯಾದಲ್ಲಿ ಸುಮಾರು ೮೦ ಭಾಷೆಗಳಲ್ಲಿ ಪಾಠಶಾಲೆಗಳು ನಡೆಸಲ್ಪಡುತ್ತಿವೆ. ಕಡಮೆ

ಸಂಬಳದ ಕೆಲಸಗಾರರ ಮಕ್ಕಳಿಗೆ ಮಧ್ಯಾಹ್ನದ ಭೋಜನವು ಪಾಠಶಾಲೆಯಲ್ಲಿ ಉಚಿತವಾಗಿಯೇ ಸಿಗುತ್ತದೆ. ಉಳಿದ ಮಕ್ಕಳು ಒಂದು ಹೊತ್ತಿನ ಊಟಕ್ಕೆ ೧೨ ರಿಂದ ೨೫ ಕೋಪೆಕ್ಕುಗಳ* ವರೆಗೂ ತೆರಬೇಕು.

ಹೈಸ್ಕೂಲಿನ ಪಠ್ಯಕ್ರಮವೆಲ್ಲ ಮುಗಿಯಬೇಕಾದರೆ ಹತ್ತು ವರುಷ ಬೇಕು. ಸ್ವಲ್ಪ ವಯಸ್ಸು ಬಂದ ಮಕ್ಕಳು ದಿನಕ್ಕೆ ಆರು ಗಂಟೆ, ಚಿಕ್ಕ ಪುಟ್ಟ ಮಕ್ಕಳು ನಾಲ್ಕು ಗಂಟೆ ಓದಬೇಕು. ನನ್ನ ಜತೆಯಲ್ಲಿದ್ದ ಅಮೇರಿಕನ್ ಯಾತ್ರಿಕನು ಬಿರುಕುಬಿಟ್ಟ ಗೋಡೆಗಳನ್ನೂ ಒಡೆದ ಗಾರೆಯನ್ನೂ ತೋರಿಸಿ, 'ಇವನ್ನು ನೋಡಿ. ಈ ಮನೆ ಕಟ್ಟಿ ಇನ್ನೂ ಐದಾರು ವರುಷ ಆಗಿಲ್ಲ. ಕೆಲಸ ಬೇಗ ಆಗಲೆಂದು ಹೇಗೆ ಹಾಳು ಮಾಡಿದ್ದಾರೆ! ಆತುರದಿಂದ, ಅಜ್ಞಾನದಿಂದ, ಹಣವನ್ನು ಹಾಳು ಮಾಡಿದಾರೆ!' ಎಂದನು.

ಆ ಭವನ ಹೊಸದಾಗಿ ಕಟ್ಟಿದುದೆಂದು ನನ್ನ ಮಾರ್ಗದರ್ಶಿಕೆ ಹೇಳಿದಳು. ನೋಡುವುದಕ್ಕೆ ಮಾತ್ರ ಹತ್ತು ವರ್ಷಕ್ಕೆ ಹಿಂದಿನದು ಇದ್ದಂತಿದೆ.

---

## ೧೭

## ಹಲವು ಸಂಸ್ಥೆಗಳೂ, ರಾಜ್ಯದಾಡಳಿತೆಯೂ

ಮಧ್ಯಾಹ್ನದ ಊಟವಾದ ಮೇಲೆ 'ಪ್ಯಾಸ್‌ಪೋರ್ಟ್' ತಂದು ಕೊಳ್ಳಲು, ನನ್ನ ಹೋಟಲಿನ ಹತ್ತಿರದಲ್ಲಿಯೆ ಇದ್ದ ಯಾತ್ರಿಕ ಶಾಖೆಯವರ ಕಾರ್ಯಾಲಯಕ್ಕೆ ಹೊರಟೆ. ನನ್ನ ಮಾರ್ಗದರ್ಶಿಕೆ ಆ ಕೆಲಸ ಮಾಡುತ್ತಿರಲು, ನಾನು ಗೋಡೆಯ ಮೇಲೆ ಹಚ್ಚಿದ್ದ ಪ್ರಕಟನೆಗಳನ್ನು ಪರಿಶೀಲಿಸತೊಡಗಿದೆ.

---

* ೧೦೦ ಕೋಪೆಕ್ಕುಗಳಿಗೆ—ಒಂದು ರೂಬಲು—ಅಂದರೆ ರೂ. ೧-೯-೬.

'ಹಲ್ಲೊ ! ಆರೋಗ್ಯವೇ ?' ಯಾರೋ ಉತ್ಸಾಹದಿಂದ ಮಾತ ನಾಡಿಸಿದಂತಾಯಿತು. ನಾನು ಹಿಂದಿರುಗಿ ನೋಡಿದೆ. ಒಬ್ಬ ಸುಂದರಿ ಯಾದ ಯುವತಿ. ಆಕೆ ಯಾರೋ ತಿಳಿಯದೆ ಹೋದೆ. ನನ್ನ ಗೊಂದಲ ವನ್ನು ಆಕೆ ಗುರುತಿಸಿದಳು; ಹರಿತವಾದ ಆ ನೋಟಕ್ಕೆ ತಿಳಿಯದುದು ಯಾವುದು ?'

'ಗುರುತು ಸಿಗಲಿಲ್ಲವೆ? ಇಷ್ಟು ಮರವೆ? ನೋಡಿದ ಕೂಡಲೆ ನಾನು ನಿಮ್ಮನ್ನು ಗುರುತಿಸಿದೆ. ನಿಮ್ಮ ಹೆಸರು ಬೆನರ್ಜಿ ಅಲ್ಲವೇ ?'

ಎಲ್ಲಾ ನಿಜ. ಆದರೆ ಯಾರೀಕೆ? ಮೋರೆ ನೋಡಿದಂತೆ ಇದೆ. ಎಲ್ಲಿ ನೋಡಿದ್ದೇನೆ ?

'ನಾನೇ ನಿಮ್ಮನ್ನು ಆ ದಿನ ಸ್ಟೇಶನ್ನಿನಿಂದ ಕರೆದುಕೊಂಡು ಬಂದದ್ದು. ಇಷ್ಟು ಬೇಗನೆ ಮರೆಯಬಾರದು ನೋಡಿ' ಎಂದು ಮಧುರ ಸ್ವರದಿಂದ ಹೊಳೆವ ಕಣ್ಣು ತಿರುಗಿಸುತ್ತ ನೆನಪು ಕೊಟ್ಟಳು.

'ಓಹೋ ! ಹೌದು. ಈಗ ನೆನಪಾಯಿತು. ನನ್ನ ಮಂಡಮತಿಗೆ ನಾನೇ ನಾಚಿಕೆಪಟ್ಟು ಆಕೆಯ ಕ್ಷಮಾಪಣೆಯನ್ನು ಕೇಳಿದೆ.

'ಇಲ್ಲಿ ಯಾರಿಗಾಗಿ ನಿಂತಿದ್ದೀರಿ ?'

'ಮಾರ್ಗದರ್ಶಿಕೆ ಪ್ಯಾಸ್ ತೆಗೆದುಕೊಂಡು ಬರಲು ಹೋಗಿರು ವಳು.'

'ನೀವು ಈ ದಿನ ಹೊರಟು ಹೋಗುವಿರಾ ?'

'ಬಹುಶಃ ನಾಳೆ ಹೊರಡುವೆನು.'

'ಚೆನ್ನಾಗಿದೆ. ಇರಿ. ಪ್ಯಾಸ್‌ಪೋರ್ಟು ತರುತ್ತೇನೆ' ಎನ್ನುತ್ತ ಮಿಂಚಿನಂತೆ ಅದೃಶ್ಯಳಾದಳು.

ರಷ್ಯನರು ನೋಡಲಿಕ್ಕೆ ಬಹಳ ಅಂದ. ಅವರ ಮುಖಗಳು ಬಲಿಷ್ಠ, ಸುಂದರ. ಒಳ್ಳೇ ಸ್ವತಂತ್ರ ವ್ಯಕ್ತಿ, ಧಾರಾಳತನ. ಮಾತು ಬಹಳ ಸ್ಪಷ್ಟ. ಪಾರಿಸ್, ಬರ್ಲಿನ್‌ಗಳ ಉಡುಪು ತೊಡಿಸಿದರೆ, ಈ ರಷ್ಯನ ಹೆಂಗಸರಿಗಿಂತ ಅಂದವಾದವರು ಯುರೋಪ್ ಖಂಡದಲ್ಲಿಯೇ ಸಿಗಲಾರರು.

ಮಾರ್ಗದರ್ಶಿಕೆಯೊಡನೆ ನಾನು 'ಪೆಟ್ರೊವಿಕಾ' ಬೀದಿಯಲ್ಲಿರುವ ಟಾರ್ಗಸಿನ್ ನೋಡಲಿಕ್ಕೆ ಹೊರಟೆವು. ಈ ಟಾರ್ಗಸಿನ್ ಎಂಬುದು

ವಿದೇಶೀಯರಿಗಾಗಿ ನಿರ್ಮಿಸಲ್ಪಟ್ಟ ಅಂಗಡಿ. ವಿದೇಶೀಯರು ರಷ್ಯಾ ಪ್ರವಾಸದ ಗುರುತಾಗಿ ಏನಾದರೂ ಕೊಂಡುಕೊಳ್ಳಬಹುದು.

ಹೋಟಲಿಗೆ ಬಹಳ ದೂರವಿಲ್ಲ. ಕಾಲ್ನಡಿಗೆಯಿಂದಲೇ ಹೊರಟೆವು. ಬೂದಿಯ ಬಣ್ಣದ ನೀಳವಾದ ಅಂಗಿಗಳನ್ನು ತೊಟ್ಟುಕೊಂಡಿರುವ ಸಿಪಾಯಿಗಳು ಕೆಲವರು ದಾರಿಯಲ್ಲಿ ಎದುರಿಗೆ ಬಂದರು. ಮಾರ್ಗದರ್ಶಿಕೆ ಅವರನ್ನು ತೋರಿಸುತ್ತ, 'ಅವರೇ ನಮ್ಮ ರಕ್ತಕವಚ ದಳದ ಸದಸ್ಯರು!' ಎಂದಳು.

'ಇವರ ಬಟ್ಟೆ ಬೂದಿಯ ಬಣ್ಣದ್ದಾಗಿದೆಯಲ್ಲ—ಮತ್ತೇ?'

'ವಿಪ್ಲವ ದಿನಗಳಲ್ಲಿ ಕೆಂಪಾಗಿ ಇದ್ದವು. ಆದರೆ, ಈಗ ಹೀಗೆ ಇವೆ.'

'ಸರಕಾರವು ಇವರನ್ನು ಬಹಳ ಶ್ರದ್ಧೆಯಿಂದ ನೋಡಿಕೊಳ್ಳುತ್ತಿರುವಂತೆ ಕಾಣುವುದು. ಮುಖ ನೋಡಿದರೆ ಇವರಿಗೆ ಹೆಚ್ಚು ಹೊಟ್ಟೆಗೆ ತಿಂಡಿಯು ಸಿಗುತ್ತಿದ್ದಂತಿದೆ.'

'ಇವರ ಒಂದು ಕೋಟಿಗೆ ಕೂಲಿಯವರ ಎರಡಂಗಿ ಸಮ. ಸರಕಾರಕ್ಕೆ ಇವರು ಆಧಾರ; ಇವರನ್ನು ಜಾಗರೂಕತೆಯಿಂದ ಕಾಪಾಡುತ್ತಿದ್ದಾರೆ.'

'ಟಾರ್ಗಸಿನ್' ದೊಡ್ಡ ಅಂಗಡಿ. ಅಲ್ಲಿ ತಿಂಡಿಯ ಪದಾರ್ಥ, ಬಟ್ಟೆ, ಬೂಟ್ಸು, ಪಾತ್ರೆಯ ಸಾಮಾನು, ಪುಸ್ತಕ, ಫೋಟೋ, ಇಂತಹ ವಸ್ತುಗಳೆಲ್ಲಾ ಮಾರಲ್ಪಡುವುವು. ಅಂಗಡಿ ಒಳ್ಳೇ ಅಂದವಾಗಿದೆ. ಸರಕು ಅಂದವಾಗಿ ಜೋಡಿಸಿಟ್ಟಿರುವವು. ಯುರೋಪಿನಲ್ಲಿರುವ ಇತರ ನಗರಗಳಲ್ಲಿರುವ ಒಳ್ಳೊಳ್ಳೆ ಅಂಗಡಿಗಳಿಗೂ ಇದಕ್ಕೂ ಏನೂ ವ್ಯತ್ಯಾಸವಿಲ್ಲ. ರಷ್ಯಾದಲ್ಲಿ ಇತರ ಸ್ಥಳಗಳಿಗಿಂತಲೂ ಇಲ್ಲಿ ಪರದೇಶೀಯರಿಗೆ ಪದಾರ್ಥ ಅಗ್ಗವಾಗಿರುವುವು. ಡಾಲರು—ಪೌಂಡು ಮೊದಲಾದ ನಾಣ್ಯ ತೆಗೆದುಕೊಳ್ಳುವರು. ನಾನು ಹೋಟಲಿನಲ್ಲಿ ಹತ್ತು ಷಿಲಿಂಗು ಕೊಟ್ಟು ಕೊಂಡುಕೊಂಡ ನೀಮೆಂಬೋರೆಹಣ್ಣು ಇಲ್ಲಿ ಮೂರು ನಾಲ್ಕು ಪೆನ್ನಿಗೇ ಸಿಗುತ್ತದೆ. ವಿಲಾಸ ವಸ್ತು ಮಾತ್ರ ಇಲ್ಲಿಯೂ ದುಬಾರಿ. ಮರದಿಂದ ಮಾಡಿದ ಸಾಧಾರಣ ಸಿಗರೇಟ್ ಪೆಟ್ಟಿಗೆಗೆ ಎರಡು ಪೌಂಡು.

'ಮಾರಿಸ್ ಹಿಂಡಸ್' ಬರೆದ 'Humanity uprooted' ಎಂ
ಪುಸ್ತಕಕ್ಕೆ ಹತ್ತುಶಿಲಿಂಗು; ಒಂದು ಚಿಕ್ಕ ಕೈವಸ್ತ್ರಕ್ಕೆ ಎರಡೋ
ಮೂರೋ ಪೌಂಡು ವಸೂಲ ಮಾಡಿದರು. ವಿದೇಶೀ ನಾಣ್ಯ ಇದ್ದ
ರಿಗೆ ಇಲ್ಲಿ ಸಾಮಾನು ಸುಲಭ ಬೆಲೆಗೆ ಸಿಗುವುವು. ಇದು ವಿದೇಶೀಯ
ಗಾಗಿಯೇ ಇದೆ. ಆದರೂ ರಷ್ಯನರೂ ಇಲ್ಲಿ ಕೊಳ್ಳುವುದನ್ನು ನೋಡಿ
ಅವರು ವಿದೇಶದಲ್ಲಿದ್ದ ತಮ್ಮ ಬಂಧು ಮಿತ್ರರಿಗಾಗಿ ಕೊಳ್ಳುತ್ತಿದ್ದರೆಂ
ತಿಳಿಯಿತು. ಪ್ರಯಾಣಿಕರು, ರಷ್ಯಾ ಬಿಡುವಾಗ ಈ 'ಟಾರ್ಗ್‌ಸಿನ್'
'ಪಾವತಿ' ಗಳಿಲ್ಲದ ವಸ್ತುಗಳನ್ನು ತೆಗೆದುಕೊಂಡು ಹೋಗಲಾರರು.

ರಷ್ಯನರು ತಮ್ಮಲ್ಲಿರುವ ರೂಬಲ್ಸಿನಿಂದ ಈ 'ಟಾರ್ಗ್‌ಸಿನ್' ಸ
ಸರಕು ಕೊಳ್ಳಲು ಸಾಧ್ಯವಾಗಲಾರದು. ಅವರಿಗೋಸ್ಕರ 'ಕೋ-ಆ
ರೇಟಿವ್ ಸ್ಟೋರ್ಸ್' ಇವೆ. ಮೂರುನೂರು ಜನ ಸೇರಿ, 'ಕೋ ಆ
ರೇಟಿವ್ ಸ್ಟೋರ್ಸ್' ತೆರೆಯಬಹುದು. ಕೇಂದ್ರ ಕೋ ಆಪರೇಟಿವ್
ಸ್ಟೋರ್ಸ್ ಒಂದೇಸಲ ಬಹಳ ಸಾಮಾನು ತಯಾರು ಮಾಡಿಸಿ, 'ಜಿಲ್ಲಾ
ಸ್ಟೋರ್ಸ್'ಗಳಿಗೆ ಹಂಚುವುದು. ನಿಯೋಜಕ ಸಂಸ್ಥೆಗಳು ಅನ್ನ ಹಾಕ
ಪ್ರಜೆಗಳಿಗಾಗಿ ಈ ಸ್ಟೋರ್ಸ್ ಭೋಜನಾಲಯಗಳನ್ನು ಏರ್ಪಡಿಸುತ್ತವೆ
ದೇಶದ ಚಿಲ್ಲರೆಯ ವಸ್ತುಗಳಲ್ಲಿ ನೂರಕ್ಕೆ ೬೫ ಭಾಗದಷ್ಟು ಈ ಕೋ ಆ
ರೇಟಿವ್‌ಗಳ ಕೈಯಲ್ಲೂ ೩೦ ಭಾಗ ಸರಕಾರದ ಕೈಯಲ್ಲೂ ೫ ಭಾ
ವ್ಯಕ್ತಿಗಳ ಕೈಯಲ್ಲೂ ಇವೆ.

ನಾವು ತಿರುಗುತ್ತ ತಿರುಗುತ್ತ 'ಸ್ವೇರಲ್ಡ ಲೋಪ್ ಸ್ಕ್ವೇರ್'
ಬಂದೆವು. ಮುಂಚೆ ಇದನ್ನು 'ಥಿಯೇಟರ್ ಸ್ಕ್ವೇರ್' ಅನ್ನುತ್ತಿದ್ದರು
ಒಂದು ಪಕ್ಕದಲ್ಲಿ ವಿಶಾಲವಾದ 'ದೊಡ್ಡ ನಾಟಕ ಗೃಹ' ಇದೆ
ಇನ್ನೊಂದು ಮೂಲೆಯಲ್ಲಿ ಒಂದು ಚಿಕ್ಕ ನಾಟಕಶಾಲೆಯಿದೆ. ಇಂದ
ಕಾಲ್ನಡಿಗೆಯಲ್ಲಿಯೇ 'ಲೆನಿನ್ ಇನ್‌ಸ್ಟಿಟ್ಯೂಟ, ಸ್ವಾತಂತ್ರ್ಯ ಸ್ಥಂಭ
ವಿದ್ದ ಸ್ಥಳಕ್ಕೆ ಬಂದೆವು. ಈ ಸ್ವಾತಂತ್ರ್ಯಧ್ವಜಸ್ತಂಭವು ೧೯೧೭
ವಿಜಯದ ಗುರುತಾಗಿ ನಿಂತಿದೆ. 'ಲೆನಿನ್ ಇನ್‌ಸ್ಟಿಟ್ಯೂಟ್' ದೊಡ್ಡ
ಗ್ರಂಥಾಲಯ. ಪ್ರಪಂಚದಲ್ಲೆಲ್ಲಾ ದೊಡ್ಡದು. ಇದರಲ್ಲಿ ಎಪ್ಪತ್ತುಲಕ್ಷ

ವಿಕರು ಕಟ್ಟಿದ ಉತ್ತಮ ಸೌಧಗಳಲ್ಲಿ ಇದೊಂದು. 'ವಿಪ್ಲವ ವಸ್ತು ಪ್ರದರ್ಶನ ಶಾಲೆ' 'ಐತಿಹಾಸಿಕ ವಸ್ತುಪ್ರದರ್ಶನ ಶಾಲೆ' ಗಳನ್ನು ನೋಡುತ್ತಾ ಮುಂದೆ ಹೊರಟೆವು. ಸಮಯವಿಲ್ಲದಿದ್ದುದರಿಂದ ಅವುಗಳನ್ನು ಸರಿಯಾಗಿ ನೋಡಲಾಗಲಿಲ್ಲ.

ಯು, ಎಸ್, ಎಸ್, ಆರ್, ನ 'ಕೈಪಿಡಿಯು' ಮೂಲಕ ರಷ್ಯಾದ 'ವೋಕ್ಸ್' ಎಂಬ ಸಂಸ್ಥೆಯು, ವಿದೇಶೀಯರೊಡನೆ ವೈಜ್ಞಾನಿಕ ಸಂಬಂಧವನ್ನೂ ಹೆಚ್ಚಾಗಿ ಬೆಳೆಸುತ್ತಿರುವುದೆಂದೂ ತಿಳಿದುಕೊಂಡೆ. ಅದಕ್ಕೆ ರಾಜನೀತಿಯ ಸಂಬಂಧವೇನೂ ಇಲ್ಲ. ಈ ಸಂಸ್ಥೆಯೇ ಕವೀಂದ್ರ ರವೀಂದ್ರನಾಥ ಟಾಗೋರರನ್ನೂ ರಷ್ಯಾಕ್ಕೆ ಬರಮಾಡಿಸಿದುದು. ದೇಶದೇಶಗಳ ಕವೀಶ್ವರರೊಡನೆ, ತತ್ವಜ್ಞರೊಡನೆ, ನರ್ತಕರೊಡನೆ, ಕಲೋಪಾಸಕರೊಡನೆಯೂ ಇತರ ವಿಚಾರಗಳಲ್ಲಿ ಪರಿಪೂರ್ಣರಾದವರೊಡನೆಯೂ ಸಂಬಂಧವನ್ನುಂಟುಮಾಡಿಕೊಂಡು, ಅವರ ಸ್ನೇಹ ಸಂಪರ್ಕಗಳಿಂದ ಕಲಿಯಬೇಕಾದುದನ್ನೂ ಗ್ರಹಿಸಿ, ರಷ್ಯನ್ ಸಾಹಿತ್ಯ ವಿಜ್ಞಾನಾಭಿವೃದ್ಧಿಗೆ ನೆರವಾಗುತ್ತಿರುವ ಸಂಸ್ಥೆ ಇದು. ಅದರ ವಿಳಾಸವು-17, Trubni Kouski Pereulok, Mascow, 59.

ನಾನು ಹಿಂದೂ ದೇಶದಿಂದ ಬಂದವನಾದ್ದರಿಂದ ನನ್ನೊಂದಿಗೆ ಮಾತಾಡಲು ಪ್ರಾಚ್ಯಶಾಖಾಧಿಕಾರಿಯೇ ಬಂದ. ಪಾಪ, ಆತನಿಗೆ ಇಂಗ್ಲೀಷ್ ಚೆನ್ನಾಗಿ ಬರುವುದಿಲ್ಲ. ಆದುದರಿಂದ ಮಾರ್ಗದರ್ಶಿಕೆಯ ಸಹಾಯವು ತಪ್ಪಿದುದಲ್ಲ. ಈ ಸಂಸ್ಥೆಯು 'ಸೋವಿಯಟ್ ಕಲ್ಚರು ರೆವ್ಯೂ' ಎಂಬ ಮಾಸಪತ್ರಿಕೆಯನ್ನೂ 'Socialist Construction in U. S. S. R.' ಎಂಬ ವಾರ ಪತ್ರಿಕೆಯನ್ನೂ ಇಂಗ್ಲೀಷು, ಫ್ರೆಂಚ, ಜರ್ಮನಿ ಭಾಷೆಗಳಲ್ಲಿ ಪ್ರಕಟಿಸುತ್ತಿರುವುದು. ರಷ್ಯಾದಲ್ಲೇನು ನಡೆಯುತ್ತಿರುವುದೋ, ಅಲ್ಲಿ ಯಾವುದು ಹೇಗೆ ಅಭಿವೃದ್ಧಿಹೊಂದುತ್ತಿರುವುದೋ, ನಿಜವಾದ ಸಮಾಚಾರವನ್ನು ವಿದೇಶೀಯರಿಗೆ ತಿಳಿಯಪಡಿಸುತ್ತವೆ ಇವು.

'ನಿಮ್ಮ ದೇಶದ ವಿಜ್ಞಾನಾಭಿವೃದ್ಧಿಯನ್ನೂ, ದೇಶಾಭಿವೃದ್ಧಿ

ಯುನ್ನೂ ಸಹ ನನ್ನ ಕಣ್ಣಿಂದ ನೋಡಿರುವೆನು. ಆ ವಿಚಾರವಾಗಿ ನಿಮ್ಮನ್ನು ಪ್ರಶ್ನಿಸಿ ಪೀಡಿಸುವುದಿಲ್ಲ. ಆದರೆ, ರಷ್ಯಾದ ರಾಜ್ಯಾಂಗ ವಿಧಾನವೇ ನನಗೊಂದು ಮಹಾ ಸಮಸ್ಯೆಯಾಗಿದೆ. ಇದನ್ನು ಕುರಿತು ಬರೆದ ಪುಸ್ತಕ ನೋಡಿದರೆ ಸೋವಿಯಟ್ಟರದೇ ರಾಜ್ಯ ಇದ್ದಂತೆ ಕಂಡು ಬರುತ್ತದೆ. ಯಾವ ಸೋವಿಯಟ್‌ನಲ್ಲಿಯೂ ಜವಾಬ್ದಾರೀ ಉದ್ಯೋಗ ಗಳಲ್ಲಿ 'ಸ್ಟಾಲಿನ್'ನ ಹೆಸರೇ ಕಂಡುಬರುವುದಿಲ್ಲ. ಆದರೆ, ಆತನೇ ಸರ್ವಾಧಿ ಕಾರಿಯೆಂದು ಎಲ್ಲರೂ ಹೇಳುವರು. ಏನಿದು ?'

ಈ ವೃದ್ಧನ ಸಮಾಧಾನಗಳನ್ನು ನನ್ನ ಮಾರ್ಗದರ್ಶಿಕೆಯು ನನಗನು ವಾದ ಮಾಡಿ ಹೇಳಿದಳು. 'ಸ್ಟಾಲಿನ್ ಕಮ್ಯೂನಿಸ್ಟು ಪಕ್ಷಕ್ಕೆ ಕಾರ್ಯ ದರ್ಶಿ. ಆತನಿಗೆ ಸೋವಿಯಟ್ ಯೂನಿಯನ್ ಸಂಗಡ ಏನೂ ಸಂಬಂಧ ವಿಲ್ಲ. ಈ ಯೂನಿಯನ್ನಿನಲ್ಲಿ ಸ್ವಾತಂತ್ರ್ಯವನ್ನು ಹೊಂದಿದ ನಲವತ್ತೆರಡು ರಾಷ್ಟ್ರಗಳಿರುವುವು. ಅದರಲ್ಲಿ ಒಂಬತ್ತು ಮಾತ್ರ ಸೋವಿಯಟ್ ಸಂಘ ವಾಗಿ ಏರ್ಪಟ್ಟಿರುವುವು. ಉಳಿದವುಗಳಲ್ಲಿ ೧೫ ಸ್ವತಂತ್ರ ಪ್ರಜಾತಂತ್ರ (Autonomous Republics) ಗಳು, ೧೮ ಸ್ವತಂತ್ರ ರಾಷ್ಟ್ರಗಳು (Autonomous Regions). ಒಳಾಡಳಿತದಲ್ಲಿ ಈ ನಲವತ್ತೆರಡೂ ಸರ್ವಸ್ವತಂತ್ರಗಳು.'

'ಒಳಾಡಳಿತವೆಂದರೆ?'

'ದೇಶದಲ್ಲಿನ ಶಾಸನ, ಆರೋಗ್ಯ, ವಿದ್ಯೆ, ವಿಜ್ಞಾನ, ಕೈಗಾರಿಕೆ ಮುಂತಾದುವು. ಆರ್ಥಿಕ ವಿಷಯದಲ್ಲಿ, ಕೂಲಿಕಾರರ ವಿಷಯದಲ್ಲಿ ಯೂನಿಯನ್ನಿನ ಸಲಹೆ ತೆಗೆದುಕೊಳ್ಳದೆ ಏನೂ ಮಾಡಕೂಡದು. ಅಂತರ ರಾಷ್ಟ್ರೀಯ ವಿಷಯಗಳಲ್ಲಿ ಯೂನಿಯನ್ನಿನ ಕೇಂದ್ರ ಕಾರ್ಯನಿರ್ವಾಹಕ ಸಮಿತಿಯದೇ ಪೂರ್ಣಾಧಿಕಾರ.'

'ಮಿಲಿಟರೀ, ರಕ್ಷಣ ಸೈನ್ಯ, ವಿದೇಶಾಂಗ ನೀತಿಯೆಂದರೇನು ?'

'ಹೌದು. ರಹದಾರಿಯ ಸಾಧನೆಗಳು, ಪರದೇಶದ ವ್ಯಾಪಾರ, ಸಿವಿಲು ಮಿಲಿಟರೀ ಶಾಸನ, ಆರ್ಥಿಕ ನಿರೂಪಣೆ ಮೊದಲಾದವು ಕೇಂದ್ರ ಸಂಸ್ಥೆಯ ಮೂಲಕವೇ ನಡೆಯುವುವು.'

'ಇನ್ನುಳಿದ ಸ್ವಾತಂತ್ರ್ಯವೇನು ಮತ್ತೆ? ನಿಜವಾಗಿ ನೋಡಿದರೆ ಎಲ್ಲಾ ಗುಲಾಮಗಿರಿಯೇ.'

'ಅದು ಹೇಗೆ?'

'ಬ್ರಿಟಿಷು ಪ್ರಭುತ್ವವೂ ಭರತಖಂಡಕ್ಕೆ ಈ ಮಾದರಿಯ ಸ್ವಾತಂತ್ರ್ಯವನ್ನೇ ಕೊಡಲು ಸಿದ್ಧವಿರುವುದು. ಅಧಿಕಾರಕ್ಕೆ ತೊಂದರೆ ತರುವ ಆರ್ಥಿಕ ವಿಭಾಗ, ವಿದೇಶೀ ಶಾಖೆ, ಸೈನ್ಯಖಾತೆ, ನೌಕಾದಳದ ಆಡಳಿತ ಎಲ್ಲಾ ತಮ್ಮ ಅಂಕೆಯಲ್ಲಿಟ್ಟುಕೊಂಡು ಉಳಿದುದನ್ನು ಭಾರತೀಯರಿಗೆ ಕೊಡಲು ಸಿದ್ಧರಾಗಿರುವರು. ಅದನ್ನು ನಾವು ಅಂಗೀಕರಿಸುವಂತಿಲ್ಲ. ಒಂದು ವೇಳೆ ಭರತಖಂಡವು ನಿಮ್ಮ ಯೂನಿಯನ್ನಿನಲ್ಲಿ ಸೇರುತ್ತದೆ ಅನ್ನಿ. ನಮಗೆ ಬರುವ ಲಾಭವೇನು? ಈ ರೀತಿಯ ಅಧಿಕಾರಗಳನ್ನು ಬಹುಶಃ ಇದಕ್ಕಿಂತಲೂ ಹೆಚ್ಚು ಅಧಿಕಾರಗಳನ್ನೇ ಬ್ರಿಟಿಷರು ಕೊಡುತ್ತೇವೆ ಅನ್ನುತ್ತಿರುವರಲ್ಲವೇ?'

'ಆದರೆ, ನಮ್ಮ ದೇಶಗಳು ಇಷ್ಟವಿಲ್ಲದಿದ್ದರೆ ಯೂನಿಯನ್ನಿಂದ ದೂರವಾಗಬಹುದು.'

'ಈ ಷರತ್ತು ಎಲ್ಲಾ ದೇಶಗಳಲ್ಲಿಯೂ ಕಾಗದದ ಮೇಲಿರುತ್ತದೆ. ಆದರೆ ಯಾವ ಪ್ರಜಾತಂತ್ರವನ್ನು ಸುಲಭವಾಗಿ ನಿಮ್ಮ ಯೂನಿಯನ್ನಿನಿಂದ ದೂರವಾಗಗೊಡುವಿರೆಂದು ನಾನೆಂದುಕೊಳ್ಳುವುದಿಲ್ಲ. 'ಅಜರ್ ಬೈಜನ್', 'ಆರ್ಮೇನಿಯಾ', 'ಜಾರ್ಜಿಯಾ' ರಾಷ್ಟ್ರಗಳು ಸ್ವತಂತ್ರ ಪ್ರಕಟನೆ ಮಾಡಿದುದೂ ಅಲ್ಲಿ ಸೋವಿಯಟ್ ಅಧಿಕಾರವನ್ನು ಸ್ಥಾಪಿಸಿದುದೂ ನಿಮಗೆ ಗೊತ್ತಿಲ್ಲವೆ?'

'ಪೋಲೆಂಡು, ಫಿನ್ಲೆಂಡು, ಇಸ್ತೋನಿಯಾ, ಲಿಥ್ವೇನಿಯಾ, ಲಿಟ್ವಿಯಾಗಳು ತಮ್ಮ ಪ್ರತ್ಯೇಕ ಪ್ರಜಾಸ್ವಾತಂತ್ರ್ಯವನ್ನು ಸ್ಥಾಪಿಸಿಕೊಳ್ಳುವೆವೆಂದಾಗ ನಾವೇನೂ ಅಡ್ಡಿ ಹೇಳಲಿಲ್ಲ.'

'ನಿಮಗಿನ್ನೂ ಆಗ ರೆಕ್ಕೆ ಬೆಳೆದಿರಲಿಲ್ಲ.'

'ಸರಿಯೆ. ನಿಮ್ಮ ಶಾಸನ ಸಂಸ್ಥೆಗಳ ಕಾರ್ಯವಿಧಾನ ಹೇಗೆ?'

''ಕೇಂದ್ರ ಕಾರ್ಯಕಾರಿಣೀ ಸಮಿತಿಗಳ ಸಂಘ' (Union of Central Executive Committee) ದಲ್ಲಿ ಎರಡು ಭಾಗ.

ಒಂದನ್ನು 'ಸೋವಿಯಟ್ ಆಫ್ ಯೂನಿಯನ್ಸ್' ಎನ್ನುವರು. ಇದರಲ್ಲಿ ಆಯಾ ಯೂನಿಯನ್ನಿನ ಜನಸಂಖ್ಯೆಯ ಪ್ರಮಾಣದ ಮೇಲೆ ಚುನಾಯಿತರಾದ ನಾನೂರು ಜನ ಪ್ರತಿನಿಧಿಗಳಿರುವರು. ಎರಡನೆಯದನ್ನು 'ಸೋವಿಯಟ್ ಆಫ್ ನೇಷನಾಲಿಟೀಸ್' ಅನ್ನುತ್ತಾರೆ. ಇದಕ್ಕೆ ರಷ್ಯಾದಲ್ಲಿ ವಾಸಮಾಡುವ ಜಾತಿಗಳ ಪ್ರತಿನಿಧಿಗಳೂ ಸಹ ಇರುವರು.'

'ಸೋವಿಯಟ್ ಆಫ್ ನೇಷನಾಲಿಟೀಸ್‌ನಲ್ಲಿ ಸದಸ್ಯರೆಷ್ಟು ಜನ?'

'ಸುಮಾರು ನೂರಮೂವತ್ತು ಮಂದಿ. ಸಂಘಗಳಾಗಿ ಏರ್ಪಟ್ಟ ಪ್ರತಿಯೊಂದು ರಾಷ್ಟ್ರವೂ 'ರಾಜ್ಯಾಂಗ'. ಆರ್ಥಿಕ, ವೈಜ್ಞಾನಿಕ ವಿಷಯಗಳಲ್ಲಿ ಸರ್ವಸ್ವತಂತ್ರವೆಂದು ಹೇಳಿದೆನಲ್ಲವೇ? ನಮ್ಮ ದೇಶವನ್ನು ಜಾತಿಭೇದಗಳ ಮೇರೆಗೆ ೧೮೫ ಭಾಗಗಳಾಗಿಯೂ, ಭಾಷೆಯ ಪ್ರಕಾರ ೧೪೭ ಭಾಗಗಳಾಗಿಯೂ, ಮತಭೇದಗಳನ್ನು ನೋಡಿದರೆ ಇನ್ನೂ ಎಷ್ಟೋ ಭಾಗಗಳಾಗಿ ವಿಂಗಡಿಸಬಹುದು. ಮೊದಮೊದಲು ರಷ್ಯನು ಭಾಷೆಯೇ ರಾಜಭಾಷೆಯಾಗಿತ್ತು. ಇತರ ಭಾಷೆಗಳಿಗೆ ರಾಜಕೀಯ ರಂಗದಲ್ಲಿ ನಿಷೇಧವಿತ್ತು. ಈಗ ಪ್ರತಿಯೊಂದು ಜಾತಿಗೂ ಪ್ರತಿಯೊಂದು ಶಾಖೆಗೂ ತನ್ನ ತನ್ನ ಸ್ವಭಾಷೆಯನ್ನುಪಯೋಗಿಸಿಕೊಳ್ಳಲು ಅಧಿಕಾರವಿದೆ. ದೇಶದ ಒಂದು ಭಾಗದ ಅಭಿವೃದ್ಧಿಗಾಗಿ ಇನ್ನೊಂದು ಭಾಗವನ್ನು ಉಪಯೋಗಿಸುವುದನ್ನು ನಿಷೇಧಿಸಿದೆ. ಪ್ರತಿಯೊಂದು ಪ್ರಜಾತಂತ್ರವೂ ತನ್ನ ರಾಷ್ಟ್ರದಲ್ಲಿರುವ ಪ್ರಕೃತಿ ಸಂಪತ್ತಿಗೆ ತಾನೇ ಸಂಪೂರ್ಣಾಧಿಕಾರಿ.'

'ಹಾಗಾದರೆ, ಸ್ಟಾಲಿನ್ ಯಾರು? ಕೇಂದ್ರ ಶಾಸನ ಸಭೆಯೊಡನೆ ಆತನಿಗಿರುವ ಸಂಬಂಧವೇನು?'

'ಏನೂ ಸಂಬಂಧವಿಲ್ಲ.'

'ಆದರೆ ಆತನನ್ನು ಸರ್ವಾಧಿಕಾರಿಯೆನ್ನುವರೇಕೆ?'

'ಸರ್ವಾಧಿಕಾರಿಯಾದುದರಿಂದಲೇ.'

'ಈ ಸೋವಿಯಟ್ಟು, ಈ ಪ್ರಜಾತಂತ್ರ ಎಂಬ ನಾಟಕವೇಕೆ? ಪ್ರಜೆಗಳಿಂದ ಚುನಾಯಿತನಾಗದ, ರಾಜ್ಯಾಂಗ ವಿಧಾನಕ್ಕೆ ಯಾವ ವಿಧವಾದ ಸಂಬಂಧವೂ ಇಲ್ಲದ ಮನುಷ್ಯನು ಪ್ರತಿಯೊಂದು ವಿಷಯವನ್ನು

ತನ್ನಿಷ್ಟ ಬಂದಂತೆ ನಡೆಸುತ್ತಿರುವಾಗ ಈ ಸೋವಿಯಟ್ಟು, ಈ ಕಾರ್ಯ ನಿರ್ವಾಹಕ ಸಂಘ ಏಕೆ?'

'ಈ ಪ್ರಭುತ್ವದೊಡನೆ ಆತನಿಗೆ ಯಾವ ಸಂಬಂಧವೂ ಇಲ್ಲ. ಕೇವಲ ತನ್ನ ಪಕ್ಷಕ್ಕೆ ನಾಯಕ, ಮಾರ್ಗದರ್ಶಿ ಮಾತ್ರ. ದೇಶಾಧ್ಯಕ್ಷನು ಕೇಂದ್ರ ಕಾರ್ಯಕಾರಿಣೀ ಸಮಿತಿಯ ಅಧ್ಯಕ್ಷನೂ ಹೌದು.'

ನಾನು ಹಿಂದಿರುಗಿ ಬರುವಾಗ ಮಾರ್ಗದರ್ಶಿಕೆಯನ್ನು ಮತ್ತೆ ಕೇಳಿದೆ.

'ಸ್ಟಾಲಿನ್‌ಗೆ ಸರಕಾರದಲ್ಲಿ ಸಂಬಂಧವಿಲ್ಲವೆಂದು ನೀವು ನಂಬು ವಿರಾ?'

'ಆತನೇ ಎಲ್ಲವೂ.'

'ಆತನೇ ಅಲ್ಲ; ಕಮ್ಯೂನಿಸ್ಟು ಪಕ್ಷವೇ ರಷ್ಯಾಕ್ಕೆ ಅಧಿಕಾರಿ ಎಂಬುದು ಸರಿ.'

'ಏಕಾಗಬಾರದು? ಕಮ್ಯೂನಿಸ್ಟರೇ ಕ್ರಾಂತಿಯನ್ನು ನಡೆಸಿದರು; ಸ್ವಾತಂತ್ರ್ಯವನ್ನು ಸಂಪಾದಿಸಿದರು. ಅವರಿಗೆ ಪ್ರಾಮುಖ್ಯತೆ ಇದ್ದರೆ ತಪ್ಪೇನು?'

'ಜವಾಬ್ದಾರೀ ಅಧಿಕಾರಗಳೆಲ್ಲಾ ಕಮ್ಯೂನಿಸ್ಟರ ಕೈಯಲ್ಲಿ ಇರುವವೇ?'

'ಎಲ್ಲಾ ಅಲ್ಲ, ಆದರೆ ಬಹುಮಟ್ಟಿಗೆ ಕಮ್ಯೂನಿಸ್ಟರೇ. ದೇಶದಲ್ಲಿ ಈ ಪಕ್ಷದ್ದೇ ಸರ್ವಾಧಿಕಾರ. 'ಕ್ರೆಮ್ಲಿನ್'ನಿಂದ ಪ್ರತಿ ವಿಷಯದಲ್ಲಿಯೂ ಅದರ ಶಾಸನ ಹೊರಬೀಳುತ್ತದೆ. ಭಯಂಕರವೆಂದು ನೀವೆಂದ ಜಿ. ಪಿ. ಯು; ರಕ್ತಕವಚ ಸೈನ್ಯ; ಎಲ್ಲಾ ಅವರ ಅಧಿಕಾರದಲ್ಲಿಯೇ.'

ಆಕೆ ಹೇಳಿದುದು ನಿಜ. ಯೋಜನೆಯೆಲ್ಲಾ ಪಕ್ಷದ ಕೈಯಲ್ಲೇ; ಅವರದೇ ಅಧಿಕಾರವೆಲ್ಲ. ಮಂಜು ಕವಿದ ಮಾಸ್ಕೋ ನಗರದ ಬೀದಿಗಳಲ್ಲಿ ನಿಧಾನವಾಗಿ ನಡೆಯುತ್ತ, ಆಕೆಯ ಮೇಲೆ ಪ್ರಶ್ನೆಗಳ ಮಳೆ ಸುರಿಸಿದೆ.

'೧೯೩೨ನೆಯ ವರ್ಷದ ಬಜೆಟ್ಟಿನಲ್ಲಿ ಸರಕಾರವು ಮೂವತ್ತು ಕೋಟಿ ರೂಪಾಯಿ ಸಾಲ ತೆಗೆದುಕೊಂಡಿದೆ. ಆ ಸಾಲ ಯಾರು ಕೊಟ್ಟರು? ಬಡ್ಡಿ ಹೇಗೆ? ಪ್ರಜೆಗಳೇ ಈ ಸಾಲ ಕೊಟ್ಟಿರುವರೇ?'

'ಹೌದು. ಪ್ರಭುತ್ವವು ಪ್ರಜೆಗಳಿಂದ ತೆಗೆದುಕೊಂಡಿದೆ. ಅವರಿಗೆ ಬಡ್ಡಿ ಕೊಡುತ್ತದೆ. ನಗುತ್ತೀರೇಕೆ? ಪ್ರಭುತ್ವವೇ ಧನಿಕ ವರ್ಗವನ್ನು ಸೃಷ್ಟಿಸುತ್ತಿದೆ ಅನ್ನುತ್ತೀರೇನು? ಇಲ್ಲ. ಪ್ರಜೆಗಳು ಆದಾಯದ ತೆರಿಗೆಯನ್ನೂ, ಉತ್ತರಾಧಿಕಾರದ ತೆರಿಗೆಯನ್ನೂ ಹೆಚ್ಚಾಗಿ ಕೊಡಬೇಕಾಗಿರುವುದು.'

'ಆದರೇನು? ಪ್ರಜೆಗಳು ತಮ್ಮ ಬಳಿ ನಿರುಪಯೋಗವಾಗಿಟ್ಟುಕೊಂಡಿದ್ದ ಹಣದಿಂದ ಶ್ರಮವಿಲ್ಲದೆ ಅಲ್ಪ ಸ್ವಲ್ಪ ಸಂಪಾದಿಸಬಲ್ಲರು. ನೋಡಿ; ಈ ಸಾಲಪತ್ರ, ಬಟ್ಟೆ, ಪಾತ್ರೆಪದಾರ್ಥ ಎಲ್ಲವೂ ವ್ಯಕ್ತಿಗತ ಸಂಪತ್ತಲ್ಲವೇ? ಆದರಿಂದ ಅಲ್ಪ ಸ್ವಲ್ಪ ಉತ್ಪತ್ತಿಯೂ ಉಂಟಲ್ಲವೆ? ಉತ್ಪಾದಕ ವಸ್ತುಗಳ ಮೇಲೆ—ಧನದ ಮೇಲೆ ವ್ಯಕ್ತಿಯ ಅಧಿಕಾರವನ್ನು ತೊಲಗಿಸಿರುವೆವೆಂಬ ಮಾತು ಅಸತ್ಯವೆಂದ ಹಾಗಾಯಿತಲ್ಲವೇ? ಅದೇ ತಾನೆ ಮುಖ್ಯ ಆದರ್ಶ ಸೋಷಲಿಸ್ಟರಿಗೆ?'

'ಆದರೆ ಸರಕಾರಕ್ಕೂ ಹಣದ ಆವಶ್ಯಕತೆಯಿದೆಯಲ್ಲ. ಈಗ ವ್ಯಕ್ತಿಯು ವ್ಯಾಪಾರ ಮಾಡಬಹುದೆಂದು ಶಾಸನದಲ್ಲಿ ಬದಲಾಗಿದೆ. ಆದರೂ ಸರಕಾರವು ಯಾವ ಒಬ್ಬ ವ್ಯಕ್ತಿಯ ಬಳಿಯಲ್ಲೂ ಹೆಚ್ಚು ಹಣ ಸಾಲ ತೆಗೆದುಕೊಂಡಿಲ್ಲ.'

'ಈ ಸಾಲವನ್ನು ತೆಗೆದುಕೊಳ್ಳುವವರು ಯಾರು ಕೇಂದ್ರಕಾರ್ಯಕಾರಿಣೀ ಸಮಿತಿಯೇ?'

'ಅಲ್ಲ, ಸಮಿತಿಯು ಕೇವಲ ಶಾಸಕ ಸಂಸ್ಥೆ. 'ಗೈಸ್‌ಬಾಂಕು' ತೆಗೆದುಕೊಂಡಿರಬಹುದು. ಯೂನಿಯನ್ನಿಗೆ ಸೆಂಟ್ರಲ್ ಬ್ಯಾಂಕದೆ.'

'ನಿಮ್ಮ ದೇಶದಲ್ಲಿ ಬ್ಯಾಂಕಿಗ್ ವ್ಯವಹಾರವೆಲ್ಲಾ ಇದರ ಮೂಲಕವೇ ನಡೆಯುತ್ತದೆಯೋ?'

'ಅಂದರೆ ವ್ಯಕ್ತಿಗಳು ಆದರಲ್ಲಿ ಹಣವನ್ನು ಶೇಖರಿಸುತ್ತಿರುವರೆಂದು ನಿಮ್ಮ ಅಭಿಪ್ರಾಯವೇನು?'

'ಹೌದು, ವ್ಯಕ್ತಿಗಳೇ ಅಲ್ಲ, ಫಾಕ್ಟರಿ ಸಮಷ್ಟಿಕ್ಷೇತ್ರ ಮೊದಲಾದವು ಸಹ.'

'ನಾವು 'ಕೋಆಪರೇಟೀವ್ ಬ್ಯಾಂಕಿ' ನಲ್ಲಿಯೂ, 'ಸೇವಿಂಗ್ಸ್

ನಲ್ಲಿಯೂ, ( ಇದರ ಶಾಖೆ ಒಟ್ಟು ೬೦,೦೦೦ ಏವೆ ) ಖಾತೆ ಇಡುವೆವು. ಆದರೆ ಫ್ಯಾಕ್ಟರಿ, ರಹದಾರಿ, ಕಾರಖಾನೆ ಮೊದಲಾದವು ' ಗ್ಯೆಸ್‌ಬ್ಯಾಂಕಿ' ನಲ್ಲೂ ' ಪ್ರೊವಮ್‌ಬ್ಯಾಂಕಿ ' ನಲ್ಲೂ ಖಾತೆ ಇಟ್ಟಿವೆ. '

' ಪ್ರೋವಮ್ ಬ್ಯಾಂಕು ಯಾವುದು ? '

' ಈ ' ಪ್ರೋವಮ್‌ಬ್ಯಾಂಕು ' ಹೊಸ ಹೊಸ ಕಾರಖಾನೆಗಳನ್ನು ಸ್ಥಾಪಿಸಲು ದೀರ್ಘವಾಯಿದೆ ಮೇಲೆ ಸಾಲಕೊಡುತ್ತದೆ. ಒಡ್ಡಿ ತೆಗೆದು ಕೊಳ್ಳುವುದಿಲ್ಲ. ಇನ್ನೂ ' ಗೈಸ್‌ಬ್ಯಾಂಕು ' ಸ್ವಲ್ಪ ಕಾಲದ ವಾಯಿದೆ ಸಾಲಗಳನ್ನು ಶೇಖಡಾ ೫ ರಿಂದ ೭ ರ ವರೆಗೆ ಒಡ್ಡಿ ತೆಗೆದುಕೊಂಡು ಕೊಡುತ್ತದೆ. '

' ಹಾಗಾದರೆ ಈ ' ಪ್ರೋವಮ್ ಬ್ಯಾಂಕಿ ' ನಲ್ಲಿ ಹಣವಿಟ್ಟರೆ ಬರುವ ಲಾಭವೇನು ? '

' ಈ ಪ್ರೋವಮ್ ಬ್ಯಾಂಕು ಕಾರಖಾನೆಗಳನ್ನೇರ್ಪಡಿಸಲು ಸ್ಥಾಪಿತ ವಾದುದು. ಕಾರಖಾನೆಗಳು ಮಾರಿದ ವಸ್ತುಗಳ ಮೇಲೆ ನೂರಕ್ಕೆ ೨೨ ರಷ್ಟು ಸುಂಕ ವಸೂಲು ಮಾಡುತ್ತದೆ. ಇನ್ನು ' ಗೈಸ್‌ಬ್ಯಾಂಕು ' ಕಾರಖಾನೆಗಳು ನಡೆಯಲು, ಅಭಿವೃದ್ಧಿ ಪಡಿಸಲು, ಸಾಲಕೊಡುತ್ತದೆ. ದೇಶೀಯ — ವಿದೇಶೀಯ ವ್ಯಾಪಾರ ಕೈಗಾರಿಕೆ, ಅರಣ್ಯಸಂಪತ್ತು, ಕರೆನ್ಸಿಪ್ರಚಾರ ಇವೆಲ್ಲಾ ಈ ಬ್ಯಾಂಕಿನ ಕೈಲಿದೆ. '

' ನೀವು ಲಾಭವೆಂದೂ, ಬಡ್ಡಿಯೆಂದೂ, ಹೇಳುತ್ತಿರುವಿರಿ. ಕಾರ ಖಾನೆಗಳು ಲಾಭ ಹೇಗೆ ತೆಗೆಯುತ್ತವೆ? ನಿಮ್ಮ ಕಾರಖಾನೆ ಉತ್ಪತ್ತಿ ಮಾಡಿದ ಸರಕನ್ನೂ ಸರಿಯಾದ ಧಾರಣಗೇ ಮಾರುತ್ತಿರಷ್ಟೆ. ಅವರಿಗೆ ಲಾಭವೇಕೆ ? ಯಾರಿಗೋಸ್ಕರ ? '

' ಅಲ್ಲ, ಕಾರಖಾನೆ; ರೇಲ್ವೆ; ಎಲೆಕ್ಟ್ರಿಕ್—ಕಂಪನಿ; ಇಂಜನ— ಟ್ರಾಕ್ಟರು ತಯಾರಿಸುವ ಫ್ಯಾಕ್ಟರಿ; ಎಲ್ಲಾ ನಿಧಿಯೂ ಲಾಭ-ನಷ್ಟದ ಲೆಕ್ಕವಿಡಬೇಕು. '

' ಕೇಂದ್ರಯೋಜನೆ ( Central planning ) ಎಂಬ ಮಾತನ್ನು

ಕೇಳಿದ್ದೇನೆ. ಬೇರೆ ಬೇರೆ ನಿಧಿಗಳು ಸ್ವತಂತ್ರವಾಗಿ ವ್ಯವಹಾರ ಮಾಡು ತ್ತಿದ್ದಾಗ 'ಸೆಂಟ್ರಲ್ ಪ್ಲಾನಿಂಗಿ' ನ ಅಗತ್ಯವೇನಿದೆ ?'

'ಹಾಗಾದರೆ, 'ಗ್ರೈಸ್‌ಬ್ಯಾಂಕು' ಒಂದು ಕೇಂದ್ರ ಸಂಸ್ಥೆಯು ಲ್ಲವೇ ? ನಿಧಿಗಳೆಲ್ಲ ಅದರ ಸ್ವಾಧೀನವಿರುತ್ತವೆ. ಕಚ್ಚಾ ಪದಾರ್ಥಗಳಿಗೂ ತಯಾರಿಸಿದ ವಸ್ತುಗಳಿಗೂ ದರವನ್ನು ಅದೇ ನಿರ್ಣಯಿಸುತ್ತದೆ. ಹಾಗೆ ನಿರ್ಣಯಿಸಿದ ಬೆಲೆಗೆ ಯಾವ ನಿಧಿಯಾದರೂ ಒಪ್ಪದಿದ್ದರೆ, ಪುನರಾಲೋಚ ನೆಗಾಗಿ 'ಗ್ರೈಸ್ ಬ್ಯಾಂಕಿ' ಗೆ ತಿಳಿಸುತ್ತದೆ. ಆ ವಸ್ತುವನ್ನು ತಯಾರಿಸಿದ ನಿಧಿಗೆ ತಿಳಿಸದು. ಮತ್ತೆ ಮುಂದೆ ಬರುವ ಐದು ವರ್ಷಕ್ಕೆ ಲೆಕ್ಕಹಾಕಿ, ಉತ್ಪತ್ತಿಮಾಡಬೇಕಾದ ಸರಕುಗಳ ಪಟ್ಟಿಯನ್ನು ಆಯಾ ನಿಧಿಗಳಿಗೂ, ಕಂಪೆನಿಗಳಿಗೂ ಕಳುಹಿಸಿಕೊಡುವರು. ನಿಧಿಗಳು ಈ ಪಟ್ಟಿಯನ್ನು ತಮ್ಮ ಕಾರಖಾನೆಗಳಿಗೆ ಕಳುಹಿಸುತ್ತವೆ. ಅಲ್ಲಿಯ ಕೂಲಿಕಾರರು ಅನನ್ನು ವಿಮರ್ಶಿಸಿ ಬೇಕಾದ ವ್ಯತ್ಯಾಸಗಳನ್ನು ಸೂಚಿಸುತ್ತಾರೆ. ಅಲ್ಲಿಂದ ಮತ್ತೆ ಪುನರಾಲೋಚನೆಗೆ ಕಳುಹಿಸಲ್ಪಡುವುವು. ಕಡೆಗೆ ಎಲ್ಲಾ ವಿಷಯಗಳನ್ನು ಆಲೋಚಿಸಿ ಏನು ಮಾಡಬೇಕೋ ನಿಶ್ಚಯಿಸುತ್ತಾರೆ. 'ಸೆಂಟ್ರಲ್ ಪ್ಲಾನಿಂಗು' ಪದ್ಧತಿಯಿದು. ತಿಳಿಯಿತೇ ?'

'ಸರಿ. ಇದು ಉತ್ಪತ್ತಿವಿಧಾನ, ಇನ್ನು ಪದಾರ್ಥಗಳ ಹಂಚಿಕೆ ಯಲ್ಲಿಯೂ ಕೂಡ ಕೇಂದ್ರ ಸಂಘಕ್ಕೆ ಅಧಿಕಾರ ಬೇಡವೇ ?'

'ನೀವು ಹೇಳುವುದು ನಿಜ. ಹಾಗೆಯೆ ಇದೆ. ಯಂತ್ರ, ಖನಿಜ ಪದಾರ್ಥ, ಕಚ್ಚಾಮಾಲು ಇವೆಲ್ಲಾ ಸರಕಾರದ ಫ್ಯಾಕ್ಟರಿಗಳಿಗೇ ಹೋಗಬೇಕು.'

'ಈಗ ನೀವು ವ್ಯಕ್ತಿಗತ ವ್ಯಾಪಾರಕ್ಕೆ ಅವಕಾಶಕೊಟ್ಟಂತಾ ಯಿತು. ವ್ಯವಸಾಯಗಾರರು ಕಂದಾಯ ಕೊಟ್ಟರಾಯಿತು. ತಮ್ಮ ಬೆಳೆಯನ್ನು ಪೇಟೆಯಲ್ಲಿ ಅವರಿಗೆ ತಿಳಿದಂತೆ ಮಾರಬಹುದು. ಆಗ ಪ್ರಭು ತ್ವದ ಲೆಕ್ಕದ ಪ್ರಕಾರ ಉತ್ಪತ್ತಿಯಲ್ಲಿ ವ್ಯತ್ಯಾಸ ಬರುವುದಿಲ್ಲವೇ ?'

'ಶಾಸನದ ಮೇರೆಗೆ ರೈತರು ತಮ್ಮ ಸರಕನ್ನು ಪೇಟೆಯಲ್ಲಿ ಮಾರಿ ಕೊಳ್ಳಬಹುದು. ಆದರೆ ಹಾಗೆ ಮಾರುವಾಗ ಹೆಚ್ಚಾಗಿ ಸುಂಕ ಕೊಡ

ಬೇಕು. ಆದುದರಿಂದ ಸರಕಾರದ ಸಂಸ್ಥೆಗಳಿಗೇ ಮಾರುವವರು. ಪ್ರತ್ಯೇಕ ವ್ಯಾಪಾರಿಗಳಿಗೆ—ಗಾಡಿಹೊಡೆಯುವವನಿಗೆ ಸಹಿತ—ರೇಷನ್ ಕಾರ್ಡು ಸಿಗುವುದಿಲ್ಲ. ಕೈಗಾರಿಕೆಗಳಲ್ಲಿ ಯಾವುದೋ ಕೆಲವು ಗೃಹಪರಿಶ್ರಮಗಳಲ್ಲದೆ ಮತ್ತಾವೂ ವ್ಯಕ್ತಿಗಳ ಕೈಯ್ಯಲ್ಲಿಲ್ಲ.

---

## ೧೮

### ಸೆರೆಮನೆ

ನಾನೂ ಇನ್ನು ಕೆಲವರು ಯಾತ್ರಿಕರೂ ಜೇಲನ್ನು ನೋಡಲು ಹೊರಟೆವು. ಇಲ್ಲಿ ಸೆರೆಮನೆಗೆ ಸುಧಾರಣಾಮಂದಿರ ಎನ್ನುತ್ತಾರೆ. ನಮ್ಮನ್ನು ಬಾಗಿಲಲ್ಲಿ ಬಿಟ್ಟು ಅಪ್ಪಣೆ ಕೇಳಲು ಮಾರ್ಗದರ್ಶಿಕೆ ಒಳಕ್ಕೆ ಹೊರಟಳು. ನಾವು ಈ ದೇಶದ ವಿಚಿತ್ರಗಳನ್ನು ಕುರಿತು ಮಾತನಾಡಲಾರಂಭಿಸಿದೆವು.

'ಕ್ರಾಂತಿಕಾರರೆಂದರೆ ಪಿಶಾಚಿಗಳು ಅನಿಸುತ್ತೇನೋ!' ಎಂದನೊಬ್ಬ. ಇನ್ನೊಬ್ಬ ಸಮಾಧಾನ ಕೊಟ್ಟ. 'ಉಳಿದ ನಾಗರಿಕ ದೇಶಗಳಲ್ಲಿರುವಂತೆಯೇ ಇರುವರು. ಏನೂ ವ್ಯತ್ಯಾಸವಿಲ್ಲ.'

ಒಬ್ಬ ಹೆಂಗಸು ಮುಂದರಿಸಿದಳು— 'ಹಿಂದಿನ ವಸ್ತುಗಳನ್ನು ನಾಶಮಾಡಿದರು; ಕ್ರಾಂತಿಗೆ ಮುಂಚೆ ಇದ್ದ ಅಮೂಲ್ಯ ಕಲಾವಸ್ತುಗಳನ್ನೆಲ್ಲ ಧ್ವಂಸಮಾಡಿ ಹಾಕಿದರು; ತಂದೆ ತಾಯಿ ಯಾರೆಂದು ತಿಳಿಯದ ಅನಾಥ ಬಾಲಕರೆಷ್ಟೋ ಮಂದಿ ಇರುವರು ಎಂದು ಪತ್ರಿಕೆಗಳಲ್ಲಿ ಬಂದದ್ದೆಲ್ಲ ಸುಳ್ಳೇ!'

'ಅವೆಲ್ಲ ಬರಿಯ ಸುಳ್ಳು ಕಂತೆ. ಹಿಂದಿನ ಮಹಾಯುದ್ಧದಲ್ಲಿ ಮಾಡಿದ ಅಪಪ್ರಚಾರ; ಸಬ್‌ಮೆರೀನ ವಿಷಗಾಳಿಗಿಂತ ಭಯಂಕರ' ಎಂದನೊಬ್ಬ ಅಮೇರಿಕದವ. ಇಷ್ಟರಲ್ಲಿ ಬಾಗಿಲ ತೆಗೆದ ಶಬ್ದವಾಯಿತು. ಒಬ್ಬೊಬ್ಬರಾಗಿ ಒಳಕ್ಕೆ ಹೋದೆವು. ನಮ್ಮ ಹೆಸರು ವಿಳಾಸ ಬರೆದು

ಕೊಂಡರು. ಯಾತ್ರಿಕರ ಪುಸ್ತಕ ಇರಬಹುದೆಂದು ತಿಳಿದೆ. ಅದಾದ ಮೇಲೆ ಒಂದು ಚಿಕ್ಕ ಬಾಗಿಲು ದಾಟಿ ಇನ್ನೊಂದು ಚಾವಡಿಗೆ ಹೋದೆವು. ಅಲ್ಲೊಂದು ಚಹಾದ ಅಂಗಡಿ, ಮಿಠಾಯಿ ಅಂಗಡಿ ಇವೆ. ಕೈದಿಗಳು ತಮಗೆ ಬೇಕಾದ ವಸ್ತುಗಳನ್ನು ಕೊಂಡು ತಿನ್ನಬಹುದು.

ಮೊದಲನೆಯ ಅಂತಸ್ತಿನಲ್ಲಿರುವ ನಾಟಕಶಾಲೆಗೆ ನಮ್ಮನ್ನು ಕರೆದುಕೊಂಡು ಹೋದರು. ರಂಗಸ್ಥಳ ಬಹಳ ವಿಶಾಲವಾಗಿದೆ. ಪ್ರೇಕ್ಷಕ ಸ್ಥಾನಗಳು ಹೇರಳವಾಗಿವೆ. ಅಲ್ಲಲ್ಲಿ ಕೆಲವು ಕುರ್ಚಿಗಳೂ ಇವೆ. ಗೋಡೆಗಳ ಮೇಲೆ ದೊಡ್ಡ ದೊಡ್ಡ ಅಕ್ಷರಗಳಿಂದ 'ನಮ್ಮ ಯೋಜನೆ ನಡಸಿ; ದೇಶಕ್ಕೆ ನೆರವಾಗಿ' ಎಂದು ಬಿನ್ನಹದ ಮಾತು ಬರೆಯಲ್ಪಟ್ಟಿರುವುವು. ಕೈದಿಗಳೂ ತನ್ನ ಪ್ರಾಥಮಿಕ ಕರ್ತವ್ಯಗಳನ್ನು ಮರೆಯಕೂಡದೆಂದೇ ಇವನ್ನು ಕೆಂಪು ಬಣ್ಣದ ಮೇಲೆ ಬಿಳಿಯ ಅಕ್ಷರದಲ್ಲಿ ಬರೆದಿರುವರು. ಈ ರಂಗಸ್ಥಳದಲ್ಲಿ ಕೈದಿಗಳು ನಾಟಕವಾಡುತ್ತ, ಸಿನೀಮಾ ನೋಡುತ್ತ ಕಾಲಕಳೆಯುವರಂತೆ! ಕೈದಿಗಳಿಗೂ ಸಹ ಸಿನಿಮಾ ನಾಟಕವೆ! ಎಂದು ನಾವೆಲ್ಲಾ ಆಶ್ಚರ್ಯಪಟ್ಟೆವು. ನಮ್ಮ ಮಾರ್ಗದರ್ಶಿಕೆ ಮೊದಲಿದ್ದ ಸೆರೆಮನೆಗಳಿಗೂ ಈಗಿನ ಸೆರೆಮನೆಗಳಿಗೂ ಇರುವ ವ್ಯತ್ಯಾಸವನ್ನು ವಿವರಿಸಿದಳು. ಅಪರಾಧಿಗಳನ್ನು ದಂಡಿಸಿ, ಪ್ರತೀಕಾರ ಮಾಡುವ ಉದ್ದೇಶದಿಂದ ಹಿಂದಿನ ಜೇಲು ನಡೆದಿದ್ದುವು. (ಆದರೆ ಈಗಿನವು ಜಾರಿ, ಕೆಟ್ಟದಾರಿ ತುಳಿದ ಜನರನ್ನು ಒಳ್ಳೆ ದಾರಿಗೆ ತರಲು, ಹೊಸ ಸಮಾಜದಲ್ಲಿ ಮಾನಮರ್ಯಾದೆಯುಳ್ಳ ನಾಗರಿಕರನ್ನಾಗಿ ಮಾಡಲು ತೆರೆದುವು.)

ಇಲ್ಲಿಂದ ಗ್ರಂಥಾಲಯಕ್ಕೆ ಹೋದೆವು. ಇಲ್ಲಿ ಅಧ್ಯಕ್ಷರೂ ಉಪಾಧ್ಯಕ್ಷರೂ ಕೈದಿಗಳೇ. ಈ ಗ್ರಂಥಾಲಯವಲ್ಲದೆ ಒಂದು ಪಾಠಶಾಲೆಯೂ ಇದೆ. ಇಲ್ಲೆಲ್ಲ ಕೈದಿಗಳೇ ನೆಯ್ದ ಬಟ್ಟೆ, ಹೊಲಿದ ಒಳ್ಳೆ ಮಾದರಿ, ಕೆಟ್ಟ ಮಾದರಿ, ಅವರೇ ತಯಾರಿಸಿದ ಇತರ ವಸ್ತುಗಳು ಪ್ರದರ್ಶಿಸಲ್ಪಟ್ಟಿರುವುವು. ಈ ವಸ್ತುಗಳಲ್ಲಿ ತಪ್ಪಿದ್ದರೆ ಎಲ್ಲಿದೆ, ಏಕೆ ಆಗಿವೆ ಎಂದು ತಿಳಿಸುವ ಪಟಗಳು ಗೋಡೆಯ ಮೇಲೆ ತೂಗುಹಾಕಲ್ಪಟ್ಟಿರುವುವು. ಉಳಿದ ಕೈದಿಗಳು ಅಂತಹ ತಪ್ಪುಮಾಡಬಾರದೆಂದು ಅದರ ಉದ್ದೇಶ.

ಕೈದಿಗಳು ವಾಸಮಾಡುವ ಕೊಠಡಿಗಳನ್ನು ನೋಡುತ್ತ ಹೋದೆವು. ಈ ಕೊಠಡಿಗಳು ಚಿಕ್ಕವಲ್ಲ; ವಿಶಾಲವಾಗಿಯೂ ದೊಡ್ಡವಾಗಿಯೂ ಇವೆ. ಪ್ರತಿಯೊಂದು ಕೊಠಡಿಯಲ್ಲಿಯೂ 'ಸ್ಪ್ರಿಂಗ್' ಮಂಚಗಳು. ಅದರ ಮೇಲೆ ಮೆತ್ತನೆ ಹಾಸಿಗೆಗಳು; ಬಿಳಿ ದುಪ್ಪಟಿಗಳು; ತಲೆದಿಂಬುಗಳು ಇರುವುವು. ಎಲ್ಲದರಲ್ಲಿಯೂ ರೇಡಿಯೋ ಲೌಡ್ ಸ್ಪೀಕರುಗಳಿರುವುವು. ರಷ್ಯಾದಲ್ಲಿ ಎಪ್ಪತ್ತೊಂದು ದೊಡ್ಡ ರೇಡಿಯೋ ಬ್ರಾಡ್‌ಕಾಸ್ಟಿಂಗ ಸ್ಟೇಶನುಗಳೂ, ಚಿಕ್ಕವು ನಾಲ್ಕು ಸಾವಿರವೂ ಇವೆ. ಈ ಚಿಕ್ಕ ಸ್ಟೇಶನ್ನುಗಳ ಶಕ್ತಿ ಬಹಳ ಕಡಮೆ. ಸಾಮಾನ್ಯವಾಗಿ ಈ ಚಿಕ್ಕ ಸ್ಟೇಶನ್ನುಗಳು ದೊಡ್ಡ ಸ್ಟೇಶನ್ನುಗಳಿಂದ ಬಂದ ಸುದ್ದಿಗಳನ್ನು ತಮ್ಮಾಧೀನದಲ್ಲಿರುವ ಲೌಡ್ ಸ್ಪೀಕರುಗಳಿಗೆ ಎತ್ತಿ ಕೊಡುವುವು. ಆಗಾಗ ತಮ್ಮ ಸ್ಟುಡಿಯೋದಲ್ಲಿ ಉಪನ್ಯಾಸ, ಹಾಡು, ಗ್ರಾಮಫೋನ್ ರಿಕಾರ್ಡು ನಡೆಸುತ್ತವೆ. ಸೆರೆಮನೆಯಲ್ಲಿ ಹೈಸ್ಕೂಲಿನಲ್ಲಿ ಇಂತಹ ಸ್ಟೇಶನ್ನು ನೋಡಿದ ನೆನಪಿದೆ. ಪ್ರಮುಖ ಸ್ಟೇಶನ್ನುಗಳಲ್ಲಿ ನೂರಕ್ಕೆ ಅರವತ್ತರಷ್ಟು ಕಲಾವಿಷಯ, ೨೦ ರಷ್ಟು ರಾಜಕೀಯ ಪ್ರಚಾರೋಪನ್ಯಾಸ, ಹತ್ತರಷ್ಟು ಸರಕಾರದ ಸುದ್ದಿ, ಇನ್ನುಳಿದ ಹತ್ತು ಕಾರ್ಮಿಕರಿಗೆ ಸಂಬಂಧಿಸಿದ ಪಾಠ.

ಶುಭ್ರವಾದ ಬಟ್ಟೆ ಉಟ್ಟು, ಕೈದಿಗಳು ತಮ್ಮ ಕೊಠಡಿಯಲ್ಲಿ ಕುಳಿತುಕೊಂಡಿರುವರು. ಕೆಲವರು ಪತ್ರಿಕೆಗಳನ್ನೋದುತ್ತಿರುವರು; ಕೆಲವರು ಮಾತನಾಡುತ್ತಿರುವರು; ಮತ್ತೆ ಕೆಲವರು ಪಿಟೀಲು ಬಾರಿಸುತ್ತಿರುವರು. ಅವರೆಲ್ಲ ತಮ್ಮ ಸ್ವಂತ ಮನೆಗಳಲ್ಲಿದ್ದಂತೆಯೇ ಇರುವರು. ಇಬ್ಬರೋ ಮೂವರೋ ಜನರು ಆನಂದವಾಗಿ ಚಾ ಕುಡಿಯುತ್ತಿರುವರು.

'ಈಗ ಈ ಹೊತ್ತಿನಲ್ಲಿ ಕುಡಿಯಲಿಕ್ಕೆ ಚಹಾ ಕೊಡುವರೇನು?'

'ಇಲ್ಲ; ಹೊರಗಿನಿಂದ ಅಂಗಡಿಯಲ್ಲಿ ಕೊಂಡುಕೊಂಡು ಬರಬಹುದು.'

'ಕೊಳ್ಳುವುದಕ್ಕೆ ಕಾಸು?'

'ಇವರೆಲ್ಲರಿಗೂ ಕೂಲಿ ಕೊಡುವರು. ಅವರಲ್ಲಿ ಅರ್ಧ ಭಾಗವನ್ನು ಜೈಲಿನ ಆಫೀಸಿನಲ್ಲಿ ಜಮಾ ಮಾಡುತ್ತಾರೆ. ಉಳಿದ ಅರ್ಧವನ್ನು

ಅವರು ಊಟ, ಬಟ್ಟೆ, ಚಹಾ, ಕ್ಷೌರ ಮೊದಲಾದವುಗಳಿಗೆ ಉಪಯೋಗಿಸಿಕೊಳ್ಳುತ್ತಾರೆ.'

'ಹೊರಗೆ ಕೂಲಿಕಾರರಿಗೆ ಎಷ್ಟು ಕೂಲಿ ಸಲ್ಲುತ್ತದೋ ಅಷ್ಟು ಇವರಿಗೂ ಸಿಕ್ಕುತ್ತದೆಯೇ ?'

'ತಿಂಗಳಿಗೆ ಇಪ್ಪತ್ತು ರೂಬಲ್ಲಿಗಿಂತಲೂ ಹೆಚ್ಚಿಗೆ ಬರುವುದಿಲ್ಲ.'

ಪ್ರತಿಯೊಂದು ಕೊಠಡಿಯಲ್ಲೂ ಹತ್ತು ಹನ್ನೆರಡು ಮಂದಿ ಕೈದಿಗಳಿರುವರು. ಅವರೆಲ್ಲ ಬಹಳ ಉತ್ಸಾಹದಿಂದ ಇದ್ದಂತೆ ಕಂಡುಬಂದರು. ಕಾರಾಗೃಹಗಳ ಕಾಠಿಣ್ಯವಾಗಲಿ, ನಿರ್ಬಂಧವಾಗಲಿ ಕಂಡುಬರಲಿಲ್ಲ.

'ನೀವೆಲ್ಲರೂ ಸುಖವಾಗಿರುವಿರಾ ? ನಿಮಗಾವುದೂ ತೊಂದರೆಗಳಿಲ್ಲವೆ ?' ಎಂದೊಬ್ಬ ಕೈದಿಯನ್ನು ಕೇಳಿದೆನು. ಮಾರ್ಗದರ್ಶಿಕೆ ನನ್ನ ಪ್ರಶ್ನೆಯನ್ನು ಅವರಿಗೆ ಹೇಳಿದ ಕೂಡಲೆ ಅವರೆಲ್ಲರೂ ನಗಲಾರಂಭಿಸಿದರು.

'ಇಲ್ಲ, ನಮಗಿಲ್ಲಿ ಸುಖವಾಗಿಯೇ ಇರುವುದು. ಚೆನ್ನಾಗಿಯೇ ಇದ್ದೇವೆ.'

'ಹಾಗಾದರೆ ಬಿಡುಗಡೆಯಾಗುವುದಕ್ಕಿಂತ ಇಲ್ಲಿರುವುದೇ ನಿಮಗೆ ಇಷ್ಟವೇನು ?'

'ಉಂಟೆ ? ನಮ್ಮ ಮನೆಗಳಿಗೆ ಹೋಗಬೇಕೆಂಬ ಆಸೆಯಿದೆ. ಹೆಂಡತಿ ಮಕ್ಕಳೊಂದಿಗಿರಬೇಕು. ಇಲ್ಲಿ ನಮ್ಮ ವರಮಾನ ಕಡಮೆ. ನಮಗಿರುವ ಓಟಿನ ಹಕ್ಕನ್ನು ತೆಗೆದುಹಾಕಿರುವುದರಿಂದ ಮತ್ತೂ ಕಷ್ಟವಾಗಿದೆ.'

ನಿಜವಾಗಿಯೂ ಇದು ಕಷ್ಟದಾಯಕ ! ರಷ್ಯಾದಲ್ಲಿ ಓಟು ಹಕ್ಕಿಲ್ಲದವರನ್ನು ನಾಯಿಗಿಂತಲೂ ಕಡೆಯಾಗಿ ಕಾಣುವರು. ಈ ಕಾರ್ಮಿಕ ಪ್ರಭುತ್ವದಲ್ಲಿ ಆತನಿಗೆ ಸ್ಥಾನವಾವುದೂ ಇಲ್ಲ. ಅಂತಹರ ಮಕ್ಕಳನ್ನು ಸಾರ್ವಜನಿಕ ಪಲ್ಲಶಾಲೆಗಳಲ್ಲಿ ಕೂಡ ಸೇರಿಸರು.

ನಾವು ವರಾಂಡಾದೊಳಗಿನಿಂದ ಕೆಳಕ್ಕಿಳಿದು ಬಂದೆವು. ಅಲ್ಲೊಂದು ಕೊಠಡಿಯ ಮುಂದೆ ಜನರು ಸಾಲಾಗಿ ನಿಂತಿರುವುದನ್ನು ನೋಡಿದೆ. ಅದು ಕ್ಷೌರದಂಗಡಿ. ಅದರ ಮುಂದೆ ಸುಮಾರು ಮೂವತ್ತು ಮಂದಿ ಶಾಂತವಾಗಿ ನಿಂತು ತಮ್ಮ ಸರತಿಗಾಗಿ ಎದುರು ನೋಡುತ್ತಿರುವರು.

ನಾವು ಅಂಗಡಿಯೊಳಕ್ಕೆ ಪ್ರವೇಶ ಮಾಡಿದೆವು. ಬಹಳ ಚೆನ್ನಾಗಿದೆ. ಗೋಡೆಗಳ ಮೇಲೆ ದೊಡ್ಡ ದೊಡ್ಡ ಕನ್ನಡಿಗಳು ತೂಗಾಡುತ್ತಿವೆ. ಕ್ಷೌರಕ್ಕೆ ಬೇಕಾಗುವ ಸಾಮಗ್ರಿಗಳೆಲ್ಲ ಅಲ್ಲಿರುವುವು. ಇಡೀ ಕೊಠಡಿ 'ಷಾಂಪೂ' ಪರಿಮಳದಿಂದ ತುಂಬಿದೆ. ಮೂರು ನಾಲ್ಕು ಕುರ್ಚಿಗಳ ಮೇಲೆ ಕೈದಿಗಳು ಕುಳಿತುಕೊಂಡು ಕ್ಷೌರ ಮಾಡಿಸಿಕೊಳ್ಳುತ್ತಿರುವರು. ಒಂದು ಮೇಜಿನ ಬಳಿ ಕೆಲವರು ಕುಳಿತುಕೊಂಡು ಚದುರಂಗವಾಡುತ್ತಿರುವರು.

'ಕ್ಷೌರ ಮಾಡಿಸಿಕೊಂಡುದಕ್ಕೆ ಕಾಸು ಕೊಡಬೇಕೆ?'

'ತಮ್ಮ ಕೂಲಿಯಲ್ಲಿ ಕೊಡಬೇಕು. ಗಡ್ಡ ಕತ್ತರಿಸಿಕೊಂಡರೆ ಇಪ್ಪತ್ತು ಕೊಪೆಕ್ಕು, ಲೆವೆಂಡರಿಂದ ತಲೆ ಬಾಚಿಸಿಕೊಂಡರೆ ಮೂವತ್ತು ಕೊಪೆಕ್ಕು. ಇವರಿಗೆ ಹಣವೆಂದರೆ ಲೆಕ್ಕವಿಲ್ಲ. ಬಂಧುಗಳು ಇವರನ್ನು ನೋಡಲು ಬರುವರು; ತಮ್ಮವರ ಇದಿರು ಅಸಹ್ಯವಾದ ಮುಖದಿಂದ ಇರಲು ಯಾರು ಒಪ್ಪುತ್ತಾರೆ?'

'ಈ ವಿಪ್ಲವವಾದಿಗಳಿಗೂ ವಿಲಾಸದ ಮೇಲೆ ಇಚ್ಛೆಯೆ?'

'ಎಷ್ಟು ದಿನಕ್ಕೊಂದು ಸಲ ಬಂಧುಗಳನ್ನು ನೋಡಲು ಅಪ್ಪಣೆ ಕೊಡುವರು?'

'ಕೈದಿಗಳ ನಡತೆಯಂತೆ ಈ ಮಾತು. ಶಾಸನ ಧಿಕ್ಕಾರ ಮಾಡಿದವರಿಗೆ ಸಾಮಾನ್ಯವಾಗಿ ಬಂಧುದರ್ಶನಕ್ಕೂ, ಕಾಗದ ಬರೆಯಲಿಕ್ಕೂ ಅನುಮತಿ ಇಲ್ಲ. ಅವರ ಪ್ರವರ್ತನೆ ಚೆನ್ನಾಗಿದ್ದರೆ ವರುಷಕ್ಕೆ ಇಪ್ಪತ್ತೆರಡು ದಿನಗಳಿಗೆ ಮೇಲ್ಪಟ್ಟು ರಜಾ ಸಿಗುತ್ತದೆ. ಈ ರಜಾ ದಿನಗಳಲ್ಲಿ ಅವರು ಮನೆಗೆ ಹೋಗಿ ಬಂಧು ಮಿತ್ರರೊಡನಿರಬಹುದು. ಇಲ್ಲಿಗಿಂತಲೂ ಹೆಚ್ಚಾಗಿ ಕೂಲಿ ಸಿಗುವ ಕಾರಖಾನೆಗಳಲ್ಲೂ, ಪ್ರಭುತ್ವ ಕ್ಷೇತ್ರಗಳಲ್ಲೂ ಕೆಲಸ ನೋಡಿಕೊಳ್ಳಬಹುದು.

ಸತ್ಪ್ರವರ್ತನೆಗಾಗಿ ಸುಮಾರು ೧೫೦೦ ಮಂದಿ ಕೈದಿಗಳು ಅವರ ನಿಯಮಿತ ಕಾಲಕ್ಕೆ ಮುಂಚೆಯೇ ಬಿಡಲ್ಪಟ್ಟಿರುವರೆಂದು ಮೊನ್ನೆಮೊನ್ನೆ ಪತ್ರಿಕೆಗಳಲ್ಲಿ ಓದಿದುದು ಜ್ಞಾಪಕಕ್ಕೆ ಬಂತು.

'ಪೋಲಿಸನವರಿಗೆ ಎಷ್ಟು ಪತ್ರ ಬೇಕಾದರೆ ಅಷ್ಟು ಬರೆಯು ಬಹುದೇ ?'

'ಎಷ್ಟು ಬೇಕಾದರೆ ಅಷ್ಟು; ಯಾವಾಗ ಬೇಕಾದರೆ ಆವಾಗ. ನಿಯಮೋಲ್ಲಂಘನೆ ಮಾಡಿದನೆಂದು ಮಾತ್ರ ಆತನ ಮೇಲೆ ದೂರು ಬರ ಲಾಗದು. 'ಸೆನ್ಸಾರು' ಪತ್ರಗಳನ್ನು ನೋಡುತ್ತಿರುತ್ತದೆ. ವ್ಯಕ್ತಿಗತ ವಿಚಾರದಲ್ಲಿ ಹೆಚ್ಚಿನ ಗಮನ ತೆಗೆದುಕೊಳ್ಳುವುದಿಲ್ಲ.'

'ಬೇಕೆನ್ನಿಸಿದಷ್ಟು ಸಲ ಪೋಲಿಸನವರ ಸಂಗಡ ಕಲೆಯಬಹುದೇ ?'

'ಇವೆಲ್ಲ ಅವರ ನಡತೆಯನ್ನು ಅವಲಂಬಿಸಿವೆ. ಬರೀ ಬಂಧು ದರ್ಶನವೇಕೆ ? ಕ್ರಿಮಿನಲ್ ಕಾಲೋನಿಗಳವರು ರಜಾ ದಿನಗಳಲ್ಲಿ ಹತ್ತಿರ ವಿರುವ ಸ್ಥಳಗಳಿಗೆ ಹೋಗಿ ಬರಬಹುದು. ಕಾಲೋನಿಗಳಿಗೆ ತಮ್ಮ ಹೆಂಡತಿಯರನ್ನು ಕರೆತಂದಿಟ್ಟುಕೊಳ್ಳಬಹುದು.'

'ಏನು......?'

ಪ್ರಪಂಚದ ಸಪ್ತ ವಿಚಿತ್ರಗಳಲ್ಲದೆ ಇದು ಎಂಟನೆಯದು. ಕೈದಿ ಗಳಿಗೆ ರಜಾ; ಹೆಂಡತಿಯ ಸಂಗಡ ಸಂಸಾರ! ನಿಜವಾಗಿ ಇಲ್ಲಿ ಮಾನ ವತ್ವ ಪರಿಪೂರ್ಣತೆ ಹೊಂದಿದೆ. ರಷ್ಯನರು ಮಾನವನ ಸಹಜ ವಾಂಛನೆ ಗಳನ್ನು ನಾಶಮಾಡಿಲ್ಲ. ನಮ್ಮ ದೇಶದಲ್ಲಿ ಕೈದಿಗಳೂ ಮನುಷ್ಯರೆಂಬ ಮಾತನ್ನು ನಾವು ಮರೆತು ಬಿಡುತ್ತಿರುವೆವು. ತಾತ್ಕಾಲಿಕ ಉದ್ರೇಕ ದಲ್ಲಿ ಈಗಿರುವ ಶಾಸನವನ್ನು ಮನುಷ್ಯನು ಉಲ್ಲಂಘನೆ ಮಾಡಿದರೂ ಅವನ ದೇಹದಲ್ಲಿರುವುದೂ ರಕ್ತ ಮಾಂಸ ಖಂಡಗಳೇ ಎಂದು ಆಲೋಚಿ ಸುತ್ತಿಲ್ಲ. ಆತನಿಗೂ ಕಾಮೇಚ್ಛೆಯಿದೆ; ಅದು ಶರೀರ ಧರ್ಮ. ನಾವೀ ವಿಚಾರವನ್ನೇ ಆಲೋಚಿಸದೆ, ಜೈಲುಗಳಲ್ಲೂ, ಬಿಡುಗಡೆಯಾದನಂತರವೂ ಅವರನ್ನು ಪಶುಗಳಂತೆ ಕಾಣುತ್ತಿದ್ದೇವೆ. ನಮ್ಮ ಪ್ರವರ್ತನೆ ಕೊನೆಗೆ ಅವರನ್ನು ದನಗಳನ್ನಾಗಿ ಮಾಡುತ್ತಿದೆ. ಆದರಿಂದಲೇ ನಮ್ಮ ಕಾರಾಗೃಹ ಗಳು ಮಾನವನನ್ನು ಸಂಸ್ಕರಿಸಿ ಸುಧಾರಿತರನ್ನಾಗಿ ಮಾಡುವುದಕ್ಕೆ ಬದಲು, ತುಂಟರೂ, ಭಯಂಕರರೂ ಆಗುವಂತೆ ತಯಾರಿಸುತ್ತಿವೆ. ರಷ್ಯನು ಜೈಲುಗಳಲ್ಲಿ ವಿರಾಮ ದಿನಗಳಲ್ಲಿ ಕೈದಿಗಳ ಹೆಂಡಂದಿರು ಬಂದು

ಅವರೊಡನಿರಬಹುದಂತೆ! ಅದಕ್ಕಾಗಿ ಪ್ರತ್ಯೇಕಾವಕಾಶಗಳೂ ಕಲ್ಪಿಸಲ್ಪಟ್ಟಿರುವುವಂತೆ!

'ಸೆರೆಮನೆ ಅಧಿಕಾರಿಗಳು ಹೊರಗಿನವರನ್ನು ಒಳಕ್ಕೆ ಬರಗೊಡಿಸುವರೇ? ಈ ಭವನದೊಳಕ್ಕೆ ಬರಲು ನಮಗೆ ಬಹಳ ಪ್ರಯತ್ನ ಮಾಡಬೇಕಾಗಿ ಬಂದಿತಲ್ಲ?'

'ಭವನ ಅನ್ನುತ್ತೀರೇಕೆ? ಸಾಧಾರಣ ಕೈದಿಗಳನ್ನು 'ಕ್ರಿಮಿನಲ್ ಕ್ಯಾಂಪು' ಗಳಲ್ಲಿಯೂ ಇಡುತ್ತಾರೆ. ಅವಕ್ಕೆ ಸುತ್ತೂ ಗೋಡೆಗಳು. ಮತ್ತೊಂದು ಇರುವುದಿಲ್ಲ. ಅದೂ ಒಂದು ಚಿಕ್ಕ ಹಳ್ಳಿ.'

ಆಕೆಯ ಮಾತುಗಳು ನನಗೆ ಮತ್ತೂ ಆಶ್ಚರ್ಯವನ್ನುಂಟುಮಾಡಿದವು.

'ಆದರೆ ಇದೇನು?'

'ಇದು 'ಸುಧಾರಣೆಮಂದಿರ.' ಬಹಳ ಮಹತ್ತರ ಅಪರಾಧ ಮಾಡಿದವರು, ಅದೇ ಅಪರಾಧವನ್ನೇ ಎರಡನೆಯ ಸಾರಿ ಮಾಡಿದವರು ಇಲ್ಲಿರಿಸಲ್ಪಡುವರು. ಮೋಸಗಾರರು, ಕಳ್ಳರು ಮೊದಲಾದವರಾದರೆ ಮೊದಲನೆಯ ಬಾರಿಯಾದರೂ ಇಲ್ಲಿಗೇ ಕಳುಹಿಸಲ್ಪಡುವರು.'

'ಗೋಡೆಗಳಿಲ್ಲದಿದ್ದರೆ ಅವರು ಹಾರಿ ಹೋಗುವುದಿಲ್ಲವೇ?'

'ಹಾರಿ ಹೋಗುವುದೆಲ್ಲಿಗೆ? ಓಡಿಹೋದರೇನು ತಿನ್ನುತ್ತಾರೆ? ರಜಾ ದಿನಗಳಲ್ಲಿ ರಾತ್ರಿ ಹತ್ತುಗಂಟೆಗಳ ವರೆಗೂ 'ಕಾಲನಿ' ಯ ಹೊರಗೇ ಇರಬಹುದು.'

'ಹಾಗಾದರೆ ಸೆರೆಮನೆಯ ಜೀವನಕ್ಕೂ, ನಾಗರಿಕ ಜೀವನಕ್ಕೂ ಇರುವ ವ್ಯತ್ಯಾಸವೇನು?'

'ಕಾಲನಿ'ಗಳಲ್ಲಿದ್ದರೂ 'ಸುಧಾರಣಾಮಂದಿರ'ಗಳಲ್ಲಿದ್ದರೂ ಅದು ಮುಖ್ಯವಲ್ಲ. ರಷ್ಯಾದಲ್ಲಿ ಮಹಾಪವಿತ್ರವಾಗಿ ಪರಿಗಣಿಸಲ್ಪಟ್ಟಿರುವ ಓಟಿನ ಹಕ್ಕು ಬಾಧ್ಯತೆಯನ್ನು ತೆಗೆದುಹಾಕುತ್ತಾರೆ. ಅದೇ ದೊಡ್ಡ ದುಃಖ.

ಬಾಗಿಲಲ್ಲಿ ಮಂಜು ಸುರಿಯುತ್ತಿದೆ. ಕೆಲವರು ಕೈದಿಗಳು ಕಟ್ಟಿಗೆ ಒಡೆಯುತ್ತಿದ್ದಂತೆ ಕಂಡುಬಂದಿತು.

ನಾವು ಸುತ್ತಿ ಸುತ್ತಿ ಒಂದು ಒಟ್ಟೆಯ ಮಿಲ್ಲಿಗೆ ಬಂದೆವು. ಇಲ್ಲಿ ನೂಲನ್ನು ನೂತು ನೇಯುತ್ತಿರುವರು. ಹೆಂಗಸರು ಬಹಳ ಮಂದಿ. ಈ

ಗಿರಣಿಯಲ್ಲಿ ಕೈದಿಗಳಿಗೆ ಕೆಲಸ ಕಲಿಸಿ, ಸಮರ್ಥರಾದ ಕೆಲಸಗಾರರೂ, ವಿಶೇಷ ನಿಪುಣರೂ ಆಗುವಂತೆ ತರಬೇತು ಮಾಡುತ್ತಿರುವರು.

'ಗಂಡಸರನ್ನೂ ಹೆಂಗಸರನ್ನೂ ಸೆರೆಯಲ್ಲಿ ಒಂದೇ ಕಡೆಯಲ್ಲಿಡುವರೇ?'

'ಇಡುವುದಿಲ್ಲ. ಅವರು ಇಷ್ಟಪಟ್ಟರೆ ಕೈದಿಗಳಾದ ಸ್ತ್ರೀ ಪುರುಷರು ಒಬ್ಬರನೊಬ್ಬರು ಪ್ರೇಮಿಸಿಕೊಳ್ಳಬಹುದು. ಗಂಡ ಹೆಂಡಿರೆಂದರೆ ಸಂಸಾರ ಮಾಡುತ್ತಾ ಇರಬಹುದು.'

'ಇದು ಎಲ್ಲಕ್ಕಿಂತಲೂ ಆಶ್ಚರ್ಯ!'

'ಇಲ್ಲಿ 'ಕ್ರೆಚೀ' ಕಾಣಿಸುವುದಿಲ್ಲವಲ್ಲ! ಕೆಲಸಕ್ಕೆ ಹೊರಡುವಾಗ ಇವರು ಮಕ್ಕಳನ್ನೆಲ್ಲಿ ಬಿಡುವರು? ಜೈಲಿನಲ್ಲಿರುವಾಗ ಮಕ್ಕಳನ್ನು ಹಡೆಯುವುದು ನಿಷಿದ್ಧವೇ?'

'ಅಲ್ಲ, ಹತ್ತಿರ ಊರಿನಲ್ಲಿ ಮಕ್ಕಳನ್ನು ಬಿಟ್ಟು ಹಾಲು ಕೊಡಲು ಹೋಗಿಬರುತ್ತಿರಬಹುದು. 'ಕ್ರಿಮಿನಲ್ ಕಾಲನಿ' ಗಳಲ್ಲಿ 'ಕ್ರೆಚೀ' ಬೇರೆ ಇರುವುವಲ್ಲಾ?'

'ಇಲ್ಲಿ ಕೈದಿಗಳು ದಿನಕ್ಕೆಷ್ಟು ಗಂಟೆಕಾಲ ಕೆಲಸ ಮಾಡಬೇಕು?'

'ಎಂಟು ಗಂಟೆ.'

'ಕೊಠಡಿಯಲ್ಲಿ ಆರು ಜನ ಕೈದಿಗಳು ಸುಮ್ಮನೆ ಕುಳಿತಿರುವರಲ್ಲ. ಅವರು ಕೆಲಸಕ್ಕೇಕೆ ಹೋಗಿಲ್ಲ?'

'ಸರತಿಯು ಬಂದಾಗ ಹೋಗುವರು.'

ಎಲ್ಲರೂ ಕೈದಿಗಳ ಭೋಜನಶಾಲೆಗೆ ಹೊರಟೆವು. ಆ ಪಾಕಶಾಲೆ ಬಹಳ ಪರಿಶುಭ್ರವಾಗಿದೆ. ಕೆಲವರು ರಾತ್ರಿಯ ಅಡಿಗೆ ಮಾಡುತ್ತಿರುವರು. ಪ್ರತಿಯೊಬ್ಬ ಕೈದಿಯೂ ತನ್ನ ಮನಸಿಗೆ ಬಂದ ಕೆಲಸವನ್ನೇ ಮಾಡಲು ಪ್ರೋತ್ಸಾಹಿಸಲ್ಪಡುವನು. ಆ ಹಜಾಮರ ಅಂಗಡಿಯಲ್ಲಿದ್ದ ಹಜಾಮರೆಲ್ಲರೂ ಕೈದಿಗಳೇ. ಎಲ್ಲರಂತೆ ಅವರಿಗೂ ಇಪ್ಪತ್ತು ರೂಬಲ್ಲೇ ಸಂಬಳ. ಕ್ಷೌರಮಾಡಿಸಿಕೊಂಡವರಿಂದ ವಸೂಲಾದುದೆಲ್ಲವನ್ನು ಜೈಲು ಕಾರ್ಯಾಲಯದಲ್ಲಿ ಜಮಾಮಾಡಿಸಬೇಕಾದುದೇ.

ಕೈದಿಗಳೇ ಈ ಸಂಸ್ಥೆಯನ್ನು ನಿರ್ವಹಿಸುತ್ತಿರುವರು. ಜೈಲು

ಉದ್ಯೋಗಿಗಳ ಕರ್ತವ್ಯದಲ್ಲಿ ಲೋಪ ಕಂಡರೆ ಕೈದಿಗಳು ತಮ್ಮ ಭಿತ್ತಿ ಪತ್ರಿಕೆಯಲ್ಲಿ ಟೀಕಿಸಬಹುದು. ಆದರಲ್ಲಿ ಸುಳ್ಳೂ, ದ್ವೇಷವೂ ಇರಬಾರದು; ಅಷ್ಟೆ. ಕೈದಿಗಳಿಗೆ ಸಂಪೂರ್ಣ ವಾಕ್ಸ್ವಾತಂತ್ರ್ಯವಿದೆ. ಸಭೆಗಳಲ್ಲಿ ರೇಡಿಯೊ ಗಳಲ್ಲಿ, ಪತ್ರಿಕೆಗಳಲ್ಲಿ ಅವರು ಜೈಲನ್ನು ಸುಧಾರಿಸುವ ಸಲಹೆಗಳನ್ನು ಸೂಚಿಸಬಹುದು. ಗಳಿಗೆ ಗಳಿಗೆಗೂ ಇಲ್ಲಿಯ ಕೈದಿಗಳಿಗೆ ಒಳ್ಳೆಯ ಪೌರ ರಾಗಬೇಕೆಂದೂ, ಪ್ರತಿಯೊಬ್ಬನೂ ದೇಶಕಾರ್ಯವನ್ನು ಸಫಲಗೊಳಿಸುವುದ ರಲ್ಲಿ ಸಂಪೂರ್ಣವಾಗಿ ಸಹಕರಿಸಬೇಕೆಂದೂ ನೆನಪು ಕೊಡುತ್ತಿರುವರು. ಕೈದಿಯ ಆತ್ಮಗೌರವಕ್ಕೆ ಎಲ್ಲಿಯೂ ತೊಂದರೆಯನ್ನುಂಟುಮಾಡರು; ಅಷ್ಟೇ ಅಲ್ಲ; ಆತ್ಮಗೌರವ ಕಾಪಾಡಿಕೊಳ್ಳಲು ಸಂಪೂರ್ಣ ಸಹಾಯ ಕೊಡುತ್ತಾರೆ. ರೇಡಿಯೊ ಮೂಲಕ, ಪತ್ರಿಕೆಗಳ ಮೂಲಕ ಉನ್ನತ ಭಾವ ಪ್ರಚೋದನವಾಗುತ್ತದೆ. ದೇಶವಿದೇಶಗಳ ಸುದ್ದಿ ತಿಳಿಸುತ್ತಾರೆ. ಅವರಿಗೆ ಕೆಲಸ ಕಲಿಸಿ ನಿಪುಣರನ್ನಾಗಿ ಮಾಡುವರು. ಬಿಡುಗಡೆಯಾದ ಕೂಡಲೆ ಜೈಲಿನಲ್ಲಿ ಜಮಾ ಮಾಡಿದ ಹಣವನ್ನು ಕೈಗೆ ಕೊಡುವರು. ಆದರ ಸಹಾಯದಿಂದ ತನಗೆ ಕೆಲಸ ಸಿಗುವ ವರೆಗೂ ಊಟ ಮಾಡ ಬಹುದು. ಈ ಕಾರಾಗೃಹವಾಸವು ಒಂದು ಕಳಂಕವಾಗಲಾರದು. ಶಿಕ್ಷೆ ಅನುಭವಿಸಿದ್ದರೂ ಸರಿಯೆ—ಯೋಗ್ಯನಾದರೆ ಎಂಥ ಉನ್ನತ ಪದವಿ ಯನ್ನಾದರೂ ಪಡೆಯಬಲ್ಲ! ಜೈಲಿನಲ್ಲಿ ಬಿದ್ದನೆಂಬ ಕಾರಣದಿಂದ ಆತನಿಗೆ ಕೆಲಸ ಕೊಡುವುದಿಲ್ಲ ಎನ್ನಲು ಅವಕಾಶವಿಲ್ಲ. ಪ್ರಜೆಗಳಾಗಲಿ, ಪ್ರಭುತ್ವ ವಾಗಲಿ ಆತನನ್ನು ತಿರಸ್ಕರಿಸಲಾರರು.

ಈ ಸೌಖ್ಯ, ಈ ಅನುಕೂಲ ನೋಡಿ ಮನೆಗಿಂತ ಮಠವೇ ಭದ್ರ ಅನಿಸಿತು.

'ಇದು ಜೈಲು ಅಲ್ಲ, ಸುಧಾರಣಾ ಮಂದಿರ. ಕೈದಿಯ ಮಾನವತ್ವ, ಸರ್ವಸ್ವವನ್ನೂ ಧ್ವಂಸ ಮಾಡುವುದಕ್ಕಲ್ಲ ಇದು; ಅವರನ್ನು ಅಣಗಿಸಿಡ ಲಲ್ಲ; ಅವರನ್ನು ಅಭಿವೃದ್ಧಿಗೆ ತರಲಿಕ್ಕೆ. ದಾರಿ ತಪ್ಪಿದ ಜನರನ್ನು ಸರಿ ಯಾದ ದಾರಿಗೆ ತರುವುದೇ ಇದರ ಉದ್ದೇಶ.'

---

## ಆರ್ಥಿಕ ಯೋಜನೆ

ಇಲ್ಲಿಗೆ ನನ್ನ ಸಂಚಾರ ಪೂರ್ತಿ ಆಯಿತು. ಆ ದಿನವೇ ಸಾಯಂಕಾಲ ಮಾಸ್ಕೋದಿಂದ ಹೊರಟೆ. ಆದರೆ, ಈ ಕ್ರಾಂತಿಕಾರರ ದೇಶವನ್ನು ಕುರಿತು ಹೇಳುವುದನ್ನು ಮುಗಿಸುವ ಮುಂಚೆ ದ್ವಿತೀಯ ಪಂಚವರ್ಷ ಯೋಜನೆ ಕುರಿತು ಸ್ವಲ್ಪ ಹೇಳಬೇಕು. ರಷ್ಯಾದಲ್ಲಿ ನಾನಿರುವಾಗಲೇ ಬೇರೆ ಬೇರೆ ಶಾಖೆಗಳ ಅಧಿಕಾರಿಗಳು ಪ್ರಥಮ ಯೋಜನೆ ನಡೆದ ಆಕ್ತಿ ವರ್ಷದಲ್ಲಿ ಏನೇನು ಮಾಡಿದರೋ ಅವೆಲ್ಲವನ್ನೂ ಪ್ರಕಟಿಸಿರುವರು. ಆ ಕಾಲದಲ್ಲಿ 'ಮಾಸ್ಕೋ ಡೇಲಿ ನ್ಯೂಸ್' ಎಂಬ ಇಂಗ್ಲೀಷು ಪತ್ರಿಕೆಯನ್ನು ನೋಡಿದೆ. ಪ್ರಥಮ ಯೋಜನೆಯಲ್ಲಿ ಎಷ್ಟು ಕೆಲಸ ನಡೆಯಿತೋ, ಎರಡನೆಯದು ಏನನ್ನು ಸಾಧಿಸಬೇಕೋ ಎಂಬುವದು ಸುಲಭವಾಗಿ ತಿಳಿಯಲು ಆ ಪತ್ರಿಕೆಯಲ್ಲಿನ ಕೆಲವು ಅಂಕೆ ಇಲ್ಲಿ ಕೊಟ್ಟಿದೆ.

| ಕೆಲಸ | ಪ್ರಥಮ ಗಣತೆ | ಉತ್ಪತ್ತಿ | ದ್ವಿತೀಯ ಗಣತೆ |
|---|---|---|---|
| ಟ್ರಾಕ್ಟರುಗಳು .. | ೯೧,೦೦೦ | ೧,೪೫,೮೫೦ | — |
| ರೈಲು ಗಾಡಿಗಳು .. | ೧೨,೦೦೦ | ೨೦,೦೦೦ | — |
| ರೈಲು ಎಂಜಿನ್‌ಗಳು .. | ೮೨೫ | ೮೧೨ | — |
| ಜೋಡುಗಳು .. | ೬·೦೧ ಕೋ. | ೭·೬೮ ಕೋ. | — |
| ಇಲೆಕ್ಟ್ರಿಕ್ ಕಾರುಗಳು .. | — | — | ೧೨೦೦೦ ಮೈ |
| ,, ಕರೆಂಟು .. | — | ೧೭ ಅರಬು K. W. H. | ೧ ಖರಬು K. W. H. |
| ಪ್ರತಿಯೊಬ್ಬನಿಗೆ ವಿದ್ಯುತ್ತು | — | ೧೦೦ ಗೆರೆ (Unit) | ೫೦೦ ಗೆರೆ (Unit) |

ರಷ್ಯಾದಲ್ಲಿ ಕೈಗಾರಿಕೆಗಳು ಯಾವ ವಿಧವಾಗಿ ವೃದ್ಧಿಹೊಂದುತ್ತಿರುವುವೋ ತಿಳಿಯಲು ಒಂದು ಕೈಗಾರಿಕೆಯ ಉದಾಹರಣೆ ನೋಡುವ.

ಮೋಟಾರು ನಿರ್ಮಾಣ

| | |
|---|---|
| ೧೯೩೦ರಲ್ಲಿ | ೮೫೦೦ |
| ೧೯೩೧ರಲ್ಲಿ | ೨೪,೪೦೦ |
| ೧೯೩೨ರಲ್ಲಿ | ೫೬,೦೦೦ |

ಅಮೇರಿಕಾಕ್ಕೆ ಇಪ್ಪತ್ತು ವರುಷ ಹಿಡಿಯುವ ಕೆಲಸವನ್ನು ಆರೇ ವರ್ಷದಲ್ಲಿ ಸಾಧಿಸಬಲ್ಲೆವೆಂದು ರಷ್ಯನರಿಗೆ ನಂಬುಗೆ. ಆ ನಂಬುಗೆಯನ್ನು ನಿಜವಾದ ಅಂಕಿ ಅಂಶಗಳಿಂದ ರುಜುವಾತು ಕೂಗ ಮಾಡಿಕೊಂಡಿರುವರು.

ಈ ಎರಡನೆಯ ಯೋಜನೆಯಲ್ಲಿ ದೊಡ್ಡ ದೊಡ್ಡ ಯಂತ್ರಗಳ ನಿರ್ಮಾಣವೇ ಮುಖ್ಯ. ಇದು ಪೂರ್ತಿಯಾದರೆ ರಷ್ಯಾವು ಸಂಪೂರ್ಣವಾಗಿ ತನ್ನ ಕಾಲಮೇಲೆ ತಾನು ನಿಲ್ಲಬಲ್ಲದು. ಆಗ ಪ್ರಜೆಗಳ ಜೀವನದ ಮಟ್ಟವು ಹೆಚ್ಚಾಗುವಂತೆ ಸುಲಭ ಕೆಲಸಗಳ ಕಡೆಗೆ ದೃಷ್ಟಿ ತಿರುಗಿಸಲಾಗುತ್ತದೆ. ಇಲ್ಲಿಯ ವರೆಗೆ ರಷ್ಯಾದಲ್ಲಿ ಅಲ್ಪ ಸ್ವಲ್ಪ ಕಾಣುವ ವರ್ಗಭೇದವು ಎರಡನೆಯ ಯೋಜನೆಯ ಕೊನೆಗೆ ಅಳಿಸಿ ಹೋಗುತ್ತದೆ. ವರ್ಗಭೇದವಿಲ್ಲದ ಸಮಾಜವನ್ನು ಸೃಷ್ಟಿಸಬೇಕೆಂದು ರಷ್ಯನರ ಪ್ರತಿಜ್ಞೆ. ಇಂದು ಬುದ್ಧಿವಂತ ವರ್ಗದವರು 'ನಿಪುಣ'ರೆಂಬ ಹೆಸರಿನಿಂದ ಕರೆಯಲ್ಪಡುತ್ತಿರುವರು. ಇತರರಿಗಿಂತ ಅವರಿಗೆ ಹೆಚ್ಚು ಸಂಬಳ, ಸೌಕರ್ಯ ಇವೆ. ಪ್ರಜೆಗಳೆಲ್ಲರನ್ನು ವಿದ್ಯಾವಂತರನ್ನಾಗಿಯೂ, ಜಾಣರನ್ನಾಗಿಯೂ ಮಾಡಿ ಈ ವರ್ಗಭೇದವನ್ನು ನಿರ್ಮೂಲಮಾಡಬೇಕೆಂದು ರಷ್ಯನರ ಹಟ.

ಪ್ರಪಂಚವು ಅಸಂಭವವೆನ್ನುವ ಕೆಲಸಗಳೆಷ್ಟನ್ನೋ ರಷ್ಯಾ ಮಾಡಿ ತೋರಿಸಿದೆ. ಆ ದೇಶವು ಹತ್ತು ವರ್ಷಗಳಲ್ಲಿ ಹೊಂದಿದ ಅಭಿವೃದ್ಧಿಯನ್ನು ಹೊಂದಲು ಅದರಂತೆಯೇ ಹಿಂದೆ ಬಿದ್ದಿದ್ದ ಮತ್ತೊಂದು ದೇಶಕ್ಕಾದರೆ ನೂರು ವರುಷಕ್ಕೆ ಕಡಿಮೆ ಹಿಡಿಯದು. ಆದರೆ, ಕಮ್ಯೂನಿಸ್ಟರು ಹೇಳಿದ ಮಾತು ಪೂರ್ತಿಯಾಗಿ ಆಚರಣೆಗೆ ಯೋಗ್ಯವಾಗಲಿಲ್ಲ. ಸಂಪೂರ್ಣವಾಗಿ ಕಾರ್ಯರೂಪದಲ್ಲಿ ತಂದರೆ ಅವುಗಳಲ್ಲಿ ಎಷ್ಟೋ ವ್ಯತ್ಯಾಸ ಮಾಡಲೇಬೇಕು.

ಆದರೆ, ಪ್ರಪಂಚವೆಲ್ಲಾ ಅನುಸರಿಸಬೇಕಾದ ಸಮಾಜವಿಕಾಸವನ್ನು ಸಾಧಿಸಿದೆ ರಷ್ಯಾ.

ಸಾಯಂಕಾಲದ ಗಾಡಿಯಲ್ಲಿ ಮಾಸ್ಕೋ ಬಿಟ್ಟೆ. ರೈಲಿನಲ್ಲಿ ಒಬ್ಬ ರಷ್ಯನ್ ದೊಡ್ಡ ಮನುಷ್ಯನ ಪರಿಚಯವಾಯಿತು. ಆತನೊಬ್ಬ ಗ್ರಂಥ ಕರ್ತ್ರನಂತೆ.

'ಒಂದೊಂದು ಪುಸ್ತಕಕ್ಕೂ ನಿಮಗೆಷ್ಟು ಹಣ ಕೊಡುವರು?'

'ನಲವತ್ತು ಸಾವಿರ ಶಬ್ದಗಳಿಗೆ ೪೦೦ ರೂಪಾಯಿ ಕೊಡುವರು.'

'ಅಂದರೆ ಸರಕಾರವು ನಿಮ್ಮ ಪುಸ್ತಕ ಕೊಳ್ಳುವುದೇ?'

'ಎಷ್ಟು ಪುಸ್ತಕಗಳಾದರೂ ಅವರಿಗೆ ಬೇಕು.'

'ನೀವು ನಾಟಕ ಬರೆಯುವಿರಾ? ಕತೆ ಬರೆಯುವಿರಾ?'

'ನಾನು ಪಠ್ಯಪುಸ್ತಕ ಬರೆಯುತ್ತೇನೆ. ಅವುಗಳ ಉಪಯೋಗವೂ ಹೆಚ್ಚೇ; ಲಾಭವೂ ಹೆಚ್ಚೇ. ಮಾರುವ ವಿಚಾರವಿಲ್ಲ. ಪಾಠಕ್ರಮಕ್ಕನು ಸರಿಸಿ ಪುಸ್ತಕ ಬರೆದಿದ್ದೇ ಆದರೆ ವಿದ್ಯಾಶಾಖೆಯವರು ಅದನ್ನು ತೆಗೆದು ಕೊಳ್ಳುವರು.'

'ಆದರೆ ನಿಮ್ಮ ದೇಶದಲ್ಲಿ ನಾಟಕ, ಕತೆ ಬರೆದವರಿಗೆ ಹಣ ಚೆನ್ನಾಗಿ ಬರುವುದೇ?'

'ಓಹೋ, ವ್ಯಾಕ್ಸಿಂಗೋರ್ಕಿಗೆ ಎಷ್ಟೋ ಲಕ್ಷ ರೂಬಲ್ಲು ಬರು ವುವು.'

ಯೂನಿಫಾರಂ ಧರಿಸಿದ ಒಬ್ಬ ಹುಡಿಗಿಯು ನಮ್ಮ ಡಬ್ಬಿಯೊಳಕ್ಕೆ ಬಂದು ಏನೋ ಕೇಳಿದಳು. ತಿಕೀಟು ತೋರಿಸಬೇಕೇನೋ ಎಂದು ಜೇಬಿ ನಲ್ಲಿನ ತಿಕೀಟು ತೆಗೆದು ತೋರಿಸಿದೆ. ಆಕೆ ಅದನ್ನು ನೋಡದೆ ಬೇರೊಂದು ಕಡೆಗೆ ಹೋಗಿ ತನ್ನ ಬಳಿಯಲ್ಲಿದ್ದ ತಿಕೀಟುಗಳನ್ನು ತೆಗೆದು ತೋರಿಸಿದಳು. ನನ್ನ ಪಕ್ಕದಲ್ಲಿದ್ದ ದೊಡ್ಡ ಮನುಷ್ಯನು, 'ಆಕೆ ಲಾಟರೀ ತಿಕೀಟು ಮಾರುತ್ತಿರುವಳು' ಎಂದು ಹೇಳಿದನು.

'ಈ ಲಾಟರಿಗಳಿಂದ ಗಳಿಸಿದ ಹಣವನ್ನು ಭೂಸೈನ್ಯದ ನೆಚ್ಚ ಕ್ಕಾಗಿ, ಜಲಸೈನ್ಯಕ್ಕಾಗಿ ಉಪಯೋಗಿಸುವರು.'

'ಲಾಟರಿಯಲ್ಲಿ ಏನೇನು ಬಹುಮಾನಗಳುಂಟು?'

ಆತನು ತನ್ನ ಬಳಿಯಿದ್ದ ಟಿಕೆಟ್ಟನ್ನು ತೆಗೆದು ಓದಿ ಹೇಳಿದನು. 'ಪ್ರಪಂಚಯಾತ್ರೆ ಮೊದಲನೆಯ ಬಹುಮಾನ, ಯುರೋಪುಖಂಡದ ಸಂಚಾರ ಎರಡನೆಯ ಬಹುಮಾನ; ರಷ್ಯಾದಲ್ಲೆಲ್ಲಾ ವಿಮಾನಯಾತ್ರೆ ಮೂರನೆಯ ಬಹುಮಾನ; ಮೋಟಾರು ಕಾರಿನಲ್ಲಿ ಸ್ವದೇಶ ಸಂಚಾರ ನಾಲ್ಕನೆಯ ಬಹುಮಾನ ಹೀಗೆಯೇ.'

ಮಾತಿನ ಪ್ರವಾಹದಲ್ಲಿ ಆ ಗ್ರಂಥಕರ್ತ 'ಯಾವ ಯಾವ ದೇಶ ನೋಡಿರುವಿರಿ?' ಎಂದು ಕೇಳಿದ. ಸಮಸ್ತ ಭರತಖಂಡವನ್ನೂ, ಯುರೋಪುಖಂಡವನ್ನೂ, ಸುತ್ತಿ ಸಂಚಾರ ಮಾಡಿರುವೆನೆಂದು ಹೇಳಿದೆ.

'ನೀವು ಅದೃಷ್ಟವಂತರು.'

'ಆಹಾ! ಇದೇನು ದೊಡ್ಡದು? ಈ ವಿಶಾಲ ಪ್ರಪಂಚದಲ್ಲಿ ನಾನು ನೋಡಿರುವುದೇನು ಮಹಾ?'

'ಆದರೇನು; ನೀವೆಷ್ಟೋ ದೇಶ ನೋಡಿರುವಿರಿ. ನಾನಾದರೋ ಇಲ್ಲಿಯೇ ಇರಬೇಕು. ಪ್ರಪಂಚವನ್ನು ನೋಡಿ ಪರಿಚಯ ಮಾಡಿಕೊಳ್ಳಲಿಕ್ಕೆ ಅವಕಾಶವೇ ಇಲ್ಲ.'

'ಏಕಿಲ್ಲ? ನಿಮ್ಮ ಹಣದಿಂದ ನೀವು ತಿರುಗುವುದಕ್ಕೆ ನಿಮಗವಕಾಶವಿಲ್ಲವೇ?'

'ಪಾಸ್ ಪೋರ್ಟು ಸಿಗುವುದು ಕಷ್ಟ.'

ಆತನು ಎರಡು ಲಾಟರೀ ತಿಕೀಟು ಕೊಂಡು ಬಹುಮಾನವಾಗಿ ನನಗೊಂದು ಕೊಟ್ಟ. ಸರಕಾರಕ್ಕೆ ಸಹಾಯಮಾಡಬೇಕೆಂದು ಪ್ರತಿಯೊಬ್ಬ ಪ್ರಯಾಣಿಕನೂ ಒಂದೊಂದು ಟಿಕೆಟ್ಟನ್ನು ಕೊಂಡುಕೊಂಡ.

'ಬಿಗೋಸೋವ್' ಸ್ಟೇಷನ್ನಿನಲ್ಲಿ 'ಸುಂಕದ ಅಧಿಕಾರಿ' ನಮ್ಮ ಸಾಮಾನನ್ನೆಲ್ಲಾ ತೆಗೆದು ಪರೀಕ್ಷೆ ಮಾಡಿದ. ಎರಡು ಗಂಟೆಯ ಕಾಲ ಪೂರ್ತಿಹಿಡಿಯಿತು. 'ವೈಟಿಂಗ್‌ರೂಮಿ' ನಲ್ಲಿ ರೇಡಿಯೊ ಇದೆ. ಅದರ ಮೂಲಕ ಈ ನಿರ್ಜನ ಪ್ರದೇಶವಾಸಿಗಳಿಗೆ ಪ್ರಪಂಚದ ಸುದ್ದಿ ತಿಳಿಯುತ್ತವೆ. ಇಲ್ಲಿ ಕೂಲಿಕಾರರಿಲ್ಲ. ಆದುದರಿಂದ ನಮ್ಮ ಸಾಮಾನುಗಳನ್ನು ನಾವೇ ಹೊತ್ತುಕೊಳ್ಳಬೇಕಾಗಿ ಬಂದಿತು. ನಮ್ಮ ಪೆಟ್ಟಿಗೆ, ಕಾಗದ

ಗಳನ್ನೆಲ್ಲಾ ಪರೀಕ್ಷೆ ಮಾಡಿಬಿಟ್ಟರು. ಒಂಗಾಳಿ ಭಾಷೆಯಲ್ಲಿ ಬರೆದಿದ್ದ ಕಾಗದಗಳನ್ನು ಸಹ ಸಕಲ ಭಾಷಾಕೋವಿದನಾದ ಅಧಿಕಾರಿ ಬಿಚ್ಚಿ ಓದಿದ. ಹಳಿಯ ಮೇಲೆ ಬಿದ್ದ ಮಂಜನ್ನು ಚಿಮ್ಮುತ್ತಾ ರೈಲು ಹೊರಟಿತು. 'ಬಿಗೋಸೋವ್' ಆದ ಮೇಲೆ 'ಲಿಂಡ್ವಾ' ದಲ್ಲಿ 'ಲಟ್ವಿಯಾ' ಅಧಿಕಾರಿಗಳು ಮತ್ತೆ ಪರೀಕ್ಷೆಮಾಡಿ, 'ಸುಂಕ ಇಲ್ಲ ತಾನೆ?' ಎಂದು ಕೇಳಿದರು. ಮೂರು ಗಂಟೆ ಪ್ರಯಾಣ ಮಾಡಿದ ಮೇಲೆ 'ಡಂಗಾವಪಿಲ್ಸ್' ನಲ್ಲಿ ಗಾಡಿಯನ್ನು ಬದಲಾಯಿಸಬೇಕಾಗಿ ಬಂತು. ರಷ್ಯಾಯಾತ್ರೆ ಮಾಡುವವರು 'ವಿಸಾ' ತೆಗೆದುಕೊಳ್ಳುವಾಗ ಯಾವ ಮಾರ್ಗವಾಗಿ ಹಿಂದಿರುಗುವರೋ ಹೇಳಬೇಕು. ಆ ಹೊತ್ತು ಹಗಲೂ ರಾತ್ರಿ ಗಾಡಿಯಲ್ಲೇ ಕಳೆಯಿತು. 'ಲಟ್ವಿಯಾ' ಗಡಿಯನ್ನು ದಾಟುವಾಗ, 'ಲಿಥ್ವೇನಿಯಾ-ಪೋಲೆಂಡಿ' ನ ಬಳಿ ಸುಂಕದ ಅಧಿಕಾರಿಗಳ ಬಾಧೆಯಿಂದ ರಾತ್ರಿಯೆಲ್ಲ ನಿದ್ರೆಯಿಲ್ಲ. ಮಾರನೆ ದಿನ ಬೆಳಿಗ್ಗೆ ಒಂಭತ್ತುಗಂಟೆಗೆ 'ಬರ್ಲಿನ್' ಸೇರಿದೆ.

---

# ರ ಸಿ ಯಾ

## ( ಹೊಸ ನೋಟವೊಂದು )



### ಮೂಲ ಪ್ರಶ್ನೆ

ಹತ್ತೊಂಬತ್ತುನೂರಾ ನಾಲ್ವತ್ತೆರಡನೆಯ ಇಸ್ವಿಯ ಮೊದಲ ತಿಂಗಳಲ್ಲಿ ನಿಂತು ಜಾಗತಿಕ ಘಟನೆಗಳ ಹಿನ್ನೋಟವನ್ನು ಪಡೆದರೆ ಕಣ್ಣು ಕುಕ್ಕಿಸುವ ರೀತಿಯಲ್ಲಿ ಸಿಡಿದು ನಿಂತ ರಹಸ್ಯವುಯ ರಸಿಯವು ಇದಿರು ಕಾಣುವುದು. ಕಳೆದ ಒಂಬತ್ತು ತಿಂಗಳುಗಳಿಂದ ಎಡೆಬಿಡದೆ ಯುದ್ಧ ರಂಗದ ಭಾರ ಹೊತ್ತು ಹೊಂಚು ಹಾಕುವ ಜಾಣತನದಿಂದ ಹಿಂದಕ್ಕೆ ಸರಿದು ಸರಿದು ವೈರಿಯನ್ನು ಆಳಸಲ್ಲಿ ಒರುವಂತೆ ಮಾಡಿಕೊಂಡು ಹಿಂಗಾಲು ಗಟ್ಟಿಯೆಂದು ತಿಳಿದ ಕೂಡಲೆ ಸೆಗೆದು ಬಿದ್ದು ವೈರಿಯನ್ನು ಚೆದರಿಸಿದುದು ಜಗತ್ತನ್ನು ಬೆರಗುಗೊಳಿಸಿದೆ. ಯುದ್ಧದ ಮೊದಲು ದಿನಗಳಲ್ಲಿ ರಸಿಯಕ್ಕೆ ಆದ ಹಾನಿ ಅಷ್ಟಿಷ್ಟಲ್ಲ. ಆ ಹಾನಿಯ ನೋವನ್ನು ನುಂಗಿಕೊಂಡು ತಮ್ಮ ದೇಶದ ರಕ್ಷಣೆಗಾಗಿ ಒಂದೆ ಮನಸ್ಸಿನಿಂದ ಹೋರಾಡಿದ ರಸಿಯದ ಜನತೆಯ—ಸೈನಿಕರ ವೃತ್ತಿಯು ಅಚ್ಚರಿಯನ್ನು ಉಂಟುಮಾಡಿದೆ. ಹಿಂದುಳಿದ ರಾಷ್ಟ್ರವೆಂದು ಹೀಗಳೆದವರೆಲ್ಲರನ್ನೂ ಹೌಹಾರಿಸಿ ಬಿಟ್ಟಿದೆ ರಸಿಯಾ ಇಂದು. ಮೂರು ತಿಂಗಳಲ್ಲಿ ಮುಗ್ಗರಿಸುವಂತೆ ಮಾಡುವೆವೆಂದು ನಂಬಿದ ನಾಜಿಗಳು ಮೋರೆಗೆ ಮಸಿ ಬಳಿದುಕೊಂಡು ಚಳಿಗೆ ತಡೆಯದೆ ಮರಳಿದರು. ಮುಂದಿಟ್ಟ ಕಾಲನ್ನು ಹಿಂದಕ್ಕಿಡದ ಜರ್ಮನ್ನರ ಗತಿಯು ರಸಿಯದಲ್ಲಿ ಹೀಗಾದುದು ರಸಿಯದ ಬಗ್ಗೆ ಕುತೂಹಲ—ಆದರವನ್ನುಂಟು ಮಾಡಲಿದೆ. ರಾಜ್ಯ ಸಾಮ್ರಾಜ್ಯಗಳೆಂದು ಮೊದಲಿನಿಂದಲೂ ಮೆರೆದು ಕೊನೆಗೆ—ಹೊತ್ತು ಬಂದಾಗ—ಅತ್ತಿತ್ತ ಸುಳಿದಾಡಿ—ಕಂಗೆಟ್ಟು ತಮ್ಮ ದೇಶದ ಸ್ಥಾನಮಾನಗಳನ್ನು ಕಳೆದುಕೊಂಡವರೆಷ್ಟೊ? ಅವರ ದುಸ್ಥಿತಿಯನ್ನು ನೋಡಿದಾಗ ರಸಿಯದ ಕಾರ್ಯದ ಕಲ್ಪನೆ ಇನ್ನಿಷ್ಟು ಸ್ಫುಟವಾಗಿ ರಸಿಯದ ಜನತೆಯ ಮನೋವೃತ್ತಿಯ ಬಗೆಗೆ ತಿಳಿವಳಿಕೆಯ ತವಕ ಬರುತ್ತಲಿದೆ.

ರಸಿಯಾ! ಜಗತ್ತನ್ನು ಬೆರಗುಗೊಳಿಸಿದ ರಸಿಯಾ! ಯುದ್ಧರಂಗದ ಮುಖಚರ್ಯೆಯನ್ನು ಬದಲಿಸಿದ ರಸಿಯಾ! ಹಿಂದುಳಿದುದೆಂದು ತಿಳಿಯಲ್ಪಟ್ಟ ಎಲ್ಲರಿಗೂ ಮುಂದಾಗಿ ಬಂದ ರಸಿಯಾ. ಹೀಗೆ ಮುಂದೆ ಬಂದು ಮಹತ್ಕಾರ್ಯವನ್ನು ಮಾಡಿದ ರಸಿಯದ ಗುಟ್ಟೇನು? ಶಕ್ತಿ ಎಲ್ಲಿದೆ? ಜನತೆಯಲ್ಲಿಯೋ? ಜನನಾಯಕ ಸ್ಟ್ಯಾಲಿನ್‌ನಲ್ಲಿಯೋ? ದೇಶದ ಆಡಳಿತದಲ್ಲಿಯೋ? ತಿಳಿವುದಗತ್ಯ.

ರಸಿಯ, ಎಂದ ಕೂಡಲೆ ಅನೇಕರಿಗೆ ಅನೇಕ ಚಿತ್ರಗಳು ಎದುರು ಬರುವವು. ೧೯೧೭ರ ಕ್ರಾಂತಿಯ ಮೊದಲಿನ ಜಾರ ಅರಸನ ದರ್ಬಾರದ ವೈಭವ, ಗಿಲೀಟಿನ ಚರ್ಚುಗಳು ಒಬ್ಬರಿಗೆ ಕಾಣಬಹುದು. 'ರಸಿಯವು ಪುಣ್ಯಭೂಮಿ' ಎಂಬ ಕಲ್ಪನೆಯ ಭಾವಿಕತನದಲ್ಲಿ ಮುಳುಗಿದ್ದ ರೈತನು ಕಣ್ಣಿಗೆ ಕಾಣಬಹುದು. ರಸಿಯವು, ಬರಗಾಲದ ಬೀಡು; ದಬ್ಬಾಳಿಕೆಯ ತವರು; ಎಂದು ಹಲವರಿಗೆ ಕಾಣಬಹುದು. ಸಂಘವಾದವನ್ನು ಬಳಕೆಯಲ್ಲಿ ತಂದು ಹೊಸ ಜೀವನದ ಪ್ರಯೋಗ ಮಾಡಿದ ಪ್ರಯೋಗಶಾಲೆಯೆಂದು ತೋರುವುದು ಇನ್ನಿತರರಿಗೆ. ಇಂದಿನ ಹೋರಾಟದಲ್ಲಿ ರಸಿಯವು ತಲೆಯೆತ್ತಿ ನಿಂತ ಕಾರಣವನ್ನು ಇವಾವು ಹೇಳಬಹುದು? ಅದರ ಕಾರಣವು ಇವೆಲ್ಲವನ್ನುಳಿದು ಬೇರೆಯೆಲ್ಲಿಯಾದರೂ ಅಡಗಿರಬಹುದೆ? ಇಂದಿನ ರಸಿಯದಲ್ಲಿ ಏನಿದೆ; ಆಂತರಿಕ ಸಾಮರ್ಥ್ಯ ಎಲ್ಲಿಂದ ಬಂದಿದೆ, ಎಂಬುದು ಮನದ ಮುಂದೆ ಬರುವ ಮಾತುಗಳಾಗಿವೆ.

ಆದರೆ ರಸಿಯದ ವಿಷಯಕ್ಕೆ ತಿಳಿಮನಸ್ಸಿನಿಂದ ವಿಚಾರಿಸಿದವರು ಎಷ್ಟು ಮಂದಿ? ಅಲ್ಲಿಗೆ ಹೋಗುವವರು ಸಾಮಾನ್ಯವಾಗಿ ಮೋಜಿಗಾಗಿಯೆಂದು. ಮೋಜುಗಾರರಿಗೆ ಕಾಣುವುದು ಕೇವಲ ಮೇಲುಹೊದಿಕೆ. ಇನ್ನು ಕೆಲವರು ಅಲ್ಲಿಯ ಹೊಸ ಪ್ರಯೋಗವನ್ನು ಕಣ್ಣಾರೆ ಕಂಡು ಬರಬೇಕೆಂದು; ಹೀಗೆ ಹೋಗುವವರು ತಮ್ಮ ದೇಶದ ಬಂಡವಲುಶಾಹಿಯಲ್ಲಿ ಬೆಳೆದವರಿರುವುದರಿಂದ ಆ ಪ್ರಯೋಗದ ಹಿನ್ನೆಲೆಯನ್ನು ಕಾಣುವುದಿಲ್ಲ. ಅಲ್ಲದೆ ಅವರ ದೃಷ್ಟಿ ಅವರ ಪ್ರಯೋಗದ ಮಟ್ಟಿಗೆ ಉಳಿದು ಅದರ ಪರಿಣಾಮವೇನೆಂಬುದನ್ನು ತಿಳಿಯುವುದಕ್ಕೆ ಇರುವುದಿಲ್ಲ ಒಂದು ವೇಳೆ ಅವರ ಪ್ರಯೋಗವು ಯಶಸ್ವಿಯೆಂದು ಮನವರಿಕೆಯಾಗಿ, ಪರಿಣಾಮವು

ಸುಖಕರ-ಪ್ರಗತಿಪರವಾಗಿದೆಯೆಂದು ತಿಳಿದರೂ ಅದರಂತೆ ಹೇಳುವ ಧೈರ್ಯವಿಲ್ಲ — ಮನಸ್ಸಿಲ್ಲ — ಸ್ವಾತಂತ್ರ್ಯವಿಲ್ಲ. ಕೆಲವರು ಕೇವಲ ಪ್ರಚಾರ—ಅಪಪ್ರಚಾರಕ್ಕೆಂದೆ ಅಲ್ಲಿಗೆ ಹೋಗಿ ಕೋಳಿಯ ಕೆಲಸ ಮಾಡಿ ತಿಪ್ಪೆಯಲ್ಲಿಯೆ ಅಡ್ಡಾಡಿ ಕೊಳಕನ್ನು ಮಾತ್ರ ಒಯಲಿಗೆ ಎಳೆಯುವರು. ರಸಿಯದ ಮೊದಲಿನ ಸ್ಥಿತಿಯೇನಿತ್ತು? ಇಂದು ಏನಾಗಿದೆ? ಇಂದಿನ ಸ್ಥಿತಿಯು ಮಾರ್ಪಡಲು ಯಾವ ಸಾಹಸ-ಸ್ವಾರ್ಥತ್ಯಾಗ ಮಾಡಿದ್ದಾರೆ ಎಂಬ ಸಹಾನುಭೂತಿಯುಳ್ಳ — ವಿಮರ್ಶಾತ್ಮಕ — ತುಲನಾತ್ಮಕ — ಅಭ್ಯಾಸ ಮಾಡುವವರಿಗೆ ಮಾಡಿದವರಿಗೆ ರಸಿಯದ ಅದ್ಭುತ ಕಾರ್ಯದ ಅರಿವು ಒರುವುದು. ಯಾರು ಏನೆ ಒರೆದರೂ ಜಗತ್ತನ್ನು ಬೆರಗುಗೊಳಿಸುವ ರೀತಿಯಲ್ಲಿ ಜಿಗುಟಿನಿಂದ ಈ ಒಂಬತ್ತು ತಿಂಗಳಿಂದ ಹೋರಾಡಿದ್ದು ಯಾರೂ ಅಲ್ಲಗಳೆಯುವಂತಿಲ್ಲ. ಹೀಗೆ ಒಮ್ಮನಸ್ಸಿನಿಂದ—ಕಷ್ಟನಷ್ಟಗಳ ಪರಿವೆಯಿಲ್ಲದೆ—ಹೋರಾಡಿದುದು ಏನು ಹೇಳುವುದು? ಇಂದಿನ ತನಕ ರಸಿಯವನ್ನು ದೂರುವವರೂ ಕೂಡ ಆದರ ಮಾಡುವಂತಾಗಿದೆ.

## ಕೂಲಿಕಾರರ ನಾಡು

ರಸಿಯದಲ್ಲಿ ಕಾಲಿಟ್ಟ ಕೂಡಲೆ ಕಣ್ಣಿಗೆ ಕಾಣುವುದು ಒಗ್ಗಟ್ಟಿನ ಚಿನ್ಹ. 'ಜಗತ್ತಿನ ಕೂಲಿಕಾರರೆ, ಒಂದಾಗಿರಿ!' ಇದು ಕೇವಲ ಉಪದೇಶವಲ್ಲ. ತಾವು ಒಂದಾಗಿ ಅದ್ಭುತ ಕಾರ್ಯವನ್ನು ಮಾಡಿ ಮನಗಂಡು ಅದನ್ನು ಆದರ್ಶವಾಗಿಟ್ಟುಕೊಂಡಿದ್ದಾರೆ. ತಮ್ಮದೇಶದ ಕೂಲಿಕಾರರನು ಉದ್ದೇಶಿಸಿ ಮಾತ್ರ ಹೇಳಿಲ್ಲ. 'ಜಗತ್ತಿನ ಕೂಲಿಕಾರರೆ' ಎಂದು ಸಂಬೋಧಿಸಿದುದು, ಅವರ ವಿಶಾಲದೃಷ್ಟಿಯನ್ನು ಸೂಚಿಸುವುದು. ಯಾವ ದೇಶದವರಿರಲಿ, ಅವರು ಕೂಲಿಕಾರರಿದ್ದರೆ, ಅವರ ಬಗೆಗೆ ಸಹಾನುಭೂತಿ—ಸಾಧ್ಯವಿದ್ದರೆ ಸಹಾಯ ತೋರುವುದು ತಮ್ಮ ಕರ್ತವ್ಯವೆಂದು ಭಾವಿಸಿದ್ದಾರೆ.

ಕೇವಲ ಕೂಲಿಕಾರರನ್ನು ಉದ್ದೇಶಿಸಿದ್ದು ಅನೇಕರಿಗೆ ಅಚ್ಚರಿಯುಂಟುಮಾಡಿರಬಹುದು. ರಸಿಯದಲ್ಲಿ ಎಲ್ಲರೂ ಕೂಲಿಕಾರರೆ. ಕೂಲಿಕಾರದೆ ಒಂದು ಜಾತಿ. ಕೂಲಿಕಾರರಲ್ಲಿ ಹಿರಿ-ಕಿರಿಯ ಕೂಲಿಕಾರರೆಂದು

ಇರಬಹುದು. ಆದರೆ ಅವರೆಲ್ಲರೂ ‘ ಕೂಲಿ ’ಕಾರರೆಂಬುದನ್ನು ಮರೆಯು
ಲಾಗದು. ‘ ಕೂಲಿಕಾರರೆ, ಜಗತ್ತಿನ ಕೂಲಿಕಾರರೆ, ಒಂದಾಗಿರಿ ’ ಎಂದು
ಹೇಳುವಾಗ ತಮ್ಮ ದೇಶದಲ್ಲಿ ವರ್ಗಭೇದವಿಲ್ಲವೆಂಬುದನ್ನು ಸೂಚಿಸು
ತ್ತಾರೆ. ಅವರ ದೃಷ್ಟಿ ಕೂಲಿಕಾರರ ಕಡೆಗೆ, ಜಗತ್ತಿನ ಕೂಲಿಕಾರರ
ಕಡೆಗೆ. ಕೂಲಿಕಾರರೆ ಅವರ ಜಗತ್ತು.

ಕೂಲಿ ಮಾಡುವುದು ಕೀಳೆಂದು ತಿಳಿಯುವವರಿಗೆ ರಸಿಯದಲ್ಲಿ
ಸ್ಥಾನವಿಲ್ಲ. ಇಡಿ ಸಮಾಜದ—ದೇಶದ ಸುಖ-ಸೌಲಭ್ಯಗಳಿಗಾಗಿ ಎಲ್ಲರೂ
ದುಡಿಯಬೇಕಾಗುವುದು. ಎಲ್ಲ ದುಡಿತವೂ ಒಂದೆ ಗುರಿ ಸಾಧಿಸುವುದ
ಕ್ಕೋಸುಗ ಇರುವುದರಿಂದ ದುಡಿವವರಲ್ಲಿ ಮೇಲು–ಕೀಳೆಂಬ ಭಾವನೆ
ಇಲ್ಲ. ದುಡಿವವರಲ್ಲಿ ಬಾಂಧವ್ಯ ಬೆಳೆಯುತ್ತದೆ; ದುಡಿದರೆಯೆ ದುಡ್ಡು-
ಮಾನ ದೊರೆವುದು ಎಂಬುದು ಸ್ಪಷ್ಟ. ಕೂಲಿಕಾರರಿಗೆ ಎಲ್ಲ ಸವಲತ್ತು
ಗಳು. ಇಡಿ ದೇಶವೆ ಒಂದು ಕುಟುಂಬದಂತೆಯಾಗಿ ದೇಶದ ಕೂಲಿಕಾರರು
ಕುಟುಂಬದ ಹಿತಕ್ಕಾಗಿ ದುಡಿಯುವರು. ಕುಟುಂಬವು—ದೇಶವು
ಕೂಲಿಕಾರರ ಹಿತವನ್ನು ನೋಡುವುದು. ಹೀಗಿದೆ ರಸಿಯದಲ್ಲಿ. ಅದೊಂದು
ಕೂಲಿಕಾರರ ದೇಶ; ಆ ದೇಶದ ಕೂಲಿಕಾರರು ಒಂದು; ಅವರಲ್ಲಿ ಒಗ್ಗಟ್ಟು;
ಅವರ ಗುರಿ ಒಂದು; ಧ್ಯೇಯ ಒಂದು. ತಮಗಾಗಿ ಕಷ್ಟಪಡುವ ದೇಶ
ಕ್ಕಾಗಿ ತಾವು ದುಡಿಯಬೇಕು — ಅವಶ್ಯವೆನಿಸಿದರೆ ಮಡಿಯಬೇಕು
ಎಂಬುದು ಅವರಲ್ಲಿ—ಪ್ರತಿಯೊಬ್ಬರಲ್ಲಿ ಒಡೆದು ಕಾಣುವ ಹಂಬಲ.

ಈ ಒಗೆಯ ದೇಶಪ್ರೇಮವು ಹೇಗೆ ನೆಲಸಿತು ಅವರಲ್ಲಿ, ಎಂಬುದು
ತಿಳಿವುದು ಅಗತ್ಯವಾಗಿದೆ. ಜಗತ್ತಿನ ಪ್ರತಿಯೊಂದು ರಾಷ್ಟ್ರವೂ ಅದನ್ನು
ತಿಳಿಯಬೇಕು. ಭಾರತವಂತೂ ಇಡಿಗಣ್ಣಿನಿಂದ ನೋಡಬೇಕು. ಹೆಚ್ಚು
ಕಡಿಮೆ—ಭಾರತದ ಇಂದಿನ ಪರಿಸ್ಥಿತಿಯೂ ರಸಿಯದ ಹಿಂದಿನ ಪರಿ
ಸ್ಥಿತಿಯೂ ಒಂದೆ ಎನ್ನಬಹುದು. ರಸಿಯದವರು ತಮ್ಮ ದೇಶದ ಬೇನೆ
ಯನ್ನು ಅರಿತು, ಅದರ ನಿವಾರಣೆ ಮಾಡಿದರು. ಅವರಿಗಾದರೂ ನಮ್ಮಂ
ತೆಯೆ ಅಧಿಕಾರವಿರಲಿಲ್ಲ. ಆದರೆ ೧೯೧೭ರಲ್ಲಿ ರಸಿಯದಲ್ಲಿ ಕ್ರಾಂತಿಯಾಗಿ,
ದೇಶಪ್ರೇಮಿಗಳು ಅಧಿಕಾರವನ್ನು ಪಡೆದುಕೊಂಡರು. ಅಂದಿನಿಂದ ದೇಶದ
ಉನ್ನತಿಯನ್ನು ಮಾಡುತ್ತಲಿರುವರು. ೧೯೧೭ರಿಂದ ೧೯೪೧ರವರೆಗೆ ಅವರು

ಮಾಡಿದ ಸಾಹಸವು—ಸ್ವಾರ್ಥತ್ಯಾಗವು—ಅತ್ಯದ್ಭುತವಾಗಿದೆ. ಕೇವಲ ಲೆಕ್ಕದಿಂದ—ತರ್ಕದ ತೂಕದಿಂದ ಅದನ್ನು ತಿಳಿವುದು ಅಸಾಧ್ಯ. ವರುಷ ವರುಷದಲ್ಲಿ ಅವರು ಪಟ್ಟ ಕಷ್ಟಗಳನ್ನು ಪರಿಶೀಲಿಸಬೇಕು. ಕಷ್ಟಪಡು ವಾಗ ಮುಂದೆ ಸಿಕ್ಕಬಹುದಾದ ಜೀವನದ ಸುಖದ ಕಲ್ಪನೆಯು ಅರಿವನ್ನು ಮಾಡಿಕೊಳ್ಳಬೇಕು. ಪ್ರಗತಿಯ ಮೆಟ್ಟಲು ಚಿಕ್ಕವಾದರೂ ಗಟ್ಟಿಯಾಗಿದ್ದು ವೆಂಬುದನ್ನು ನಾವು ಮನಗಾಣಬೇಕು. ಹೊಸ ರಾಷ್ಟ್ರ ಕಟ್ಟಬೇಕಾದರೆ ದೇಶದ ಒಳಗಿನ ಹಗೆಗಳನ್ನು ನಾಶಮಾಡುವುದಲ್ಲದೆ, ಹೊರಗಿನವರನ್ನು ದೂರಿರಿಸಬೇಕಾಗುವುದೆಂಬುದನ್ನು ಮನದಟ್ಟಾಗಿಸಿಕೊಳ್ಳಬೇಕು. ಕಟ್ಟು ವಾಗಿನ ಕಳವಳವನ್ನು ತಿಳಿದುಕೊಳ್ಳಬೇಕು. ಕಟ್ಟಿ ನಿಲ್ಲಬಹುದಾದ ಗೋಪುರವು ಹೇಗೆ ಹುರುಪು ಕೊಡುವುದೆಂಬುದನ್ನು ಕಂಡುಕೊಳ್ಳಬೇಕು. ಧ್ಯೇಯವು ನಿಶ್ಚಿತವಿದ್ದಾಗ—ದುಡಿತವು ಎಷ್ಟು ಸರಲವಾಗುವುದು; ಧ್ಯೇಯಕ್ಕಾಗಿ ದುಡಿವಾಗ ಇದಿರು ಬಂದವರನ್ನು ಚೆದರಿಸುವುದು; ಒಂದೆ ಧ್ಯೇಯಕ್ಕಾಗಿ ದೇಶದ ಬೇರೆ ಬೇರೆ ಭಾಗದವರು ಕೈಗೆ ಕೈ ಕೊಡುವುದು; ಒಂದಾಗುವುದು. ಇದೆಲ್ಲವನ್ನೂ ನಾವು ರಸಿಯದ ೨೫ ವರುಷದ ಇತಿಹಾಸದಿಂದ ಕಲಿಯಬಹುದಾಗಿದೆ. ಎಚ್ಚರದಿಂದ ಅಭ್ಯಾಸ ಮಾಡ ಬಹುದಾಗಿದೆ. ಕಾರ್ಯಶಕ್ತಿಯು ಬಂದರೆ ನಾಡಕಟ್ಟುವುದು ಸುಲಭ ವೆಂದು ಕಂಡರೂ ಅದೆಷ್ಟು ಕಠಿಣಸಾಧ್ಯವೆಂಬುದನ್ನು ತಿಳಿವುದೂ ಸಾಧನ ಗೈವುದೂ ಕರ್ತವ್ಯವಾಗಿದೆ.

ಶಿಕ್ಷಣಕ್ರಮ

ಯಾವುದೊಂದು ದೇಶದ ಯಥಾರ್ಥ ಕಲ್ಪನೆ ಮಾಡಿಕೊಳ್ಳಬೇಕಾ ದರೆ ಆ ದೇಶದ ಪ್ರತಿನಿಧಿಗಳೆಂಬಂತಿದ್ದ ವಿದ್ಯಾರ್ಥಿಗಳನ್ನು ಪರಕಿಸಬೇಕು. ಆ ದೇಶದವರು ತಮ್ಮ ಮಕ್ಕಳ ಪಾಲನ ಪೋಷಣೆ ಹೇಗೆ ಮಾಡುವರೆಂಬು ದನ್ನು ತಿಳಿಯಬೇಕು. 'ಇಂದಿನ ಬಾಲಕರು ಮುಂದಿನ ಪಾಲಕರು' ಎಂಬುದನ್ನು ನೆನವಿಗೆ ತಂದರೆ ಮಕ್ಕಳ ತರಬೇತಿನ ರೀತಿಯು ದೇಶದ ಆದರ್ಶವನ್ನು ತಿಳಿಸುವುದು. ಆ ಆದರ್ಶದ ಸಾಧನವೆ—ಶಿಕ್ಷಣಕ್ರಮ. ಅದು ಕಾರಣ, ರಶಿಯದ ವಿದ್ಯಾರ್ಥಿವೃಂದವನ್ನು, ಅವರ ಶಿಕ್ಷಣಕ್ರಮ ವನ್ನು ಪರಿಶೀಲಿಸುವುದು ನಮ್ಮ ಮೊದಲ ಕರ್ತವ್ಯವಾಗುವುದು.

ಶಿಕ್ಷಣವು ಎಲ್ಲ ಕೂಲಿಕಾರರ ಮಕ್ಕಳಿಗೆ ಪುಕ್ಕಟೆಯಾಗಿ ದೊರೆವುದು. ಕೂಲಿಕಾರರ ಮಕ್ಕಳು ವಸತಿಗೃಹದಲ್ಲಿದ್ದರೆ ಅವರಿಗೆ ಪುಕ್ಕಟೆ ವಸತಿಯು ಏರ್ಪಾಡಲ್ಲದೆ ಇನ್ನಿತರ ವೆಚ್ಚಕ್ಕೆ ವಿದ್ಯಾರ್ಥಿವೇತನ ದೊರೆವುದು. ಸಾಮಾನ್ಯವಾಗಿ ಎಲ್ಲ ವಿದ್ಯಾರ್ಥಿಗಳು ಕೂಲಿಕಾರರ ಮಕ್ಕಳೆ. ರಸಿಯವು ಕೂಲಿಕಾರರ ದೇಶವಾದರೂ ಹಿಂದಿನ ಕಾಲದ ಬಂಡವಲುಗಾರರ ಪ್ರತಿನಿಧಿಗಳೆಂದು ಕೆಲವರು ಅಲ್ಲಲ್ಲಿ ಇದ್ದಾರೆ. ಅಂತಹರ ಮಕ್ಕಳಿಗೆ ವಿಶ್ವವಿದ್ಯಾಲಯಗಳಿಗೆ ಪ್ರವೇಶವೆ ಇದ್ದಿಲ್ಲ ಕೆಲ ಕಾಲ. ಅವರು ಸಮಾಜಬಾಹಿರರು; ಸಮಾಜ ಹಿತವಿರೋಧಿಗಳು ಎಂದು ಅವರಿಗೆ ಯಾವ ಸವಲತ್ತುಗಳು ದೊರೆವುದಿಲ್ಲ. ಅವರು ತೆರವನ್ನು ಕೊಡಬೇಕಾಗುವುದು.

ವಿಶ್ವವಿದ್ಯಾಲಯವನ್ನು ಸೇರುವ ವಿದ್ಯಾರ್ಥಿಗಳು ಸಾಮಾನ್ಯವಾಗಿ ಮೊದಲು ಹೊಟ್ಟೆಗಾಗಿ ದುಡಿದವರೆ. ದುಡಿವ ಅವಧಿಯಲ್ಲಿ ಸಾಯಂಕಾಲದ ವರ್ಗಕ್ಕೆ ಸೇರಿ ಪುಕ್ಕಟೆ ವಿದ್ಯೆ ಪಡೆದವರು. ಹೀಗೆ ಸ್ವಾವಲಂಬಿಯಾದವರು—ಸಮಾಜ ಹಿತವಂತರು—ವಿಶ್ವವಿದ್ಯಾಲಯಕ್ಕೆ ಸೇರಲು ಯೋಗ್ಯರು. ವಿದ್ಯಾರ್ಥಿಗಳು ಕೂಲಿಕಾರರಾದುದರಿಂದ—ಕೆಲವರಂತೂ ದೂರ ದೂರದ ಭಾಗಗಳಿಂದ ಬಂದವರಾದುದರಿಂದ ರಜೆಯ ಕಾಲದಲ್ಲಿ ಅವರವರ ಪ್ರದೇಶಗಳಿಗೆ ಹೋಗಿ ಬರುವ ವೆಚ್ಚವನ್ನು ಸರಕಾರವು ಕೊಡುತ್ತದೆ.

ಮೊದಲ ವರ್ಗದಿಂದಲೂ ಹೆಣ್ಣು-ಗಂಡುಗಳ ಸಮಾವೇಶ; ಲಿಂಗಭೇದಭಾವವಿಲ್ಲದಿರುವುದನ್ನು ರಸಿಯದಲ್ಲಿ ಕಾಣಬಹುದು. ಈ ಸಮತೆ ಕೇವಲ ವಿದ್ಯಾರ್ಥಿಗಳಲ್ಲಿ ಮಾತ್ರವಲ್ಲ; ಶಿಕ್ಷಕ ವರ್ಗದಲ್ಲಿಯೂ ಅಷ್ಟೆ. ಹೆಣ್ಣು ಹುಡಿಗೆಯರು ಯಾವ ವಿದ್ಯೆಯನ್ನೂ ಪಡೆಯಬಹುದು; ಎಷ್ಟು ಕಾಲದ ವರೆಗೂ ಪಡೆಯಬಹುದು. ಉಳಿದ ದೇಶದಲ್ಲಿಯಂತೆ ಮದುವೆಯು ಆತಂಕವಲ್ಲ. ವಿದ್ಯಾರ್ಥಿಗಳೊಳಗೆ ತಾವು ಹೆಣ್ಣು-ಗಂಡೆಂಬ ವಿಚಾರ ತಲೆದೋರುವುದು ಕಡಿಮೆ. ಹೆಣ್ಣು—ಅಬಲೆಯೆಂಬುದಂತೂ ಮಾತೆ ಇಲ್ಲ. ಗಂಡುಹುಡುಗರಾದರೂ ಹೆಮ್ಮೆಯಿಂದ ಮೆರೆಯುವುದಿಲ್ಲ. ಸಮಾಜ ರಥಕ್ಕೆ ಬೇಕಾಗುವ ಗಾಲಿಗಳಾದ ಹೆಣ್ಣು-ಗಂಡುಗಳಲ್ಲಿ—ಮೇಲು-ಕೀಳು ಎಂಬುದು ಹೇಗೆ? ಎರಡೂ ಅಷ್ಟೆ ಭಾರ ಹೊರುವುವು. ಅವುಗಳ ಕಾರ್ಯ

ಭಿನ್ನವಾಗಬಹುದು. ಎರಡೂ ಸಬಲ—ಸಮವಾಗಿರುವ್ರದರಿಂದಲೆ ಸಮಾಜವು ಮುಂದೆ ಮುಂದೆ ಸಾಗುವುದು; ಅಥವಾ ಸಮಾಜವು ಮುಂದೆ ಮುಂದೆ ಸಾಗಬೇಕಾದರೆ ಎರಡೂ ಸಬಲ-ಸಮವಾಗಿರಬೇಕು, ಎಂಬುದನ್ನು ರಸಿಯದವರು ತಿಳಿದು ರೂಢಿಯಲ್ಲಿ ತಂದಿದ್ದಾರೆ. ಹೆಣ್ಣೆಂದು ದಯೆ-ದಾಕ್ಷಿಣ್ಯಗಳನ್ನು ತೋರಿಸುವ ಸಂದರ್ಭಗಳು ರಸಿಯದಲ್ಲಿ ತೀರ ಕಡಿಮೆ. ಎಲ್ಲಿಯೂ ಭೇದಭಾವವಿಲ್ಲ; ಬಾಂಧವ್ಯ (comradeship)ವೆ ಎದ್ದು ಕಾಣುವುದು. ಒಂದೆ ವಸತಿಗೃಹದಲ್ಲಿ ವಾಸವಾಗಿರಬಹುದು. ಮದುವೆಯಾದ ಜೊತೆಗಳಿಗಾಗಿ ಬೇರೆ ಕೋಣೆಗಳು. ಈ ವ್ಯವಸ್ಥೆಯಲ್ಲಿ ವೈಶಿಷ್ಟ್ಯವೆಂದು (Speciality) ಕಂಡುಬರುವುದಿಲ್ಲ. ಉಳಿದ ದೇಶದಲ್ಲಿಯಂತೆ, ಹೆಣ್ಣು ಹುಡುಗರು ವರ್ಗದಲ್ಲಿ ಪ್ರವೇಶಿಸಿದ ಕೂಡಲೆ ಕುಲಕು ಆಗಿ ಸದ್ದುಮಾಡುವುದು ಕಾಣದು. ಇದೆಲ್ಲ ಸಮತೆಯ ಪ್ರಭಾವ

ರಸಿಯವು ಅನೇಕ ಪ್ರಾಂತಗಳಿಂದ ಕೂಡಿದ ಒಂದು ದೊಡ್ಡ ದೇಶ. ಆ ದೇಶದಲ್ಲಿ ಅನೇಕ ಜನಾಂಗಗಳು ಇವೆ. ಹೆಣ್ಣು-ಗಂಡುಗಳಲ್ಲಿಯ ಸಮತೆ-ಬಾಂಧವ್ಯದಂತೆ ಬೇರೆ ಬೇರೆ ಪ್ರಾಂತದವರಲ್ಲಿ ಜನಾಂಗ ಜನಾಂಗಗಳಲ್ಲಿ ಸಮತೆ-ಬಾಂಧವ್ಯವಿದೆ. ವರ್ಗಭೇದವೆ ಸಮಾಜದ ತಳಹದಿಯಾಗಿದ್ದ ಜಾರರ ಕಾಲದಲ್ಲಿಯ ಸಂಗತಿಯೊಂದು ಮನೋರಂಜಕವಾಗಿದೆ. ಯಹೂದಿ ಹೆಣ್ಣುಮಗಳೊಬ್ಬಳು ಕಲಿಯಬೇಕೆಂದು ಮನಸ್ಸು ಮಾಡಿದಳಂತೆ. ಆದರೆ ಅವಳು 'ಯಹೂದಿ' ಎಂಬ ಅಯೋಗ್ಯತೆಯ ಮೂಲಕ ಅವಳಿಗೆ ರಾಜಧಾನಿಯಲ್ಲಿ ಪ್ರವೇಶವಿಲ್ಲ. ವಿದ್ಯಾರ್ಥಿಯಾಗುವುದೆಂತು? ಆದರೆ ಅವಳಿಗೊಂದು ದಾರಿಯಿತ್ತು. ರಾಜಧಾನಿಯಲ್ಲಿರಲು ಅವಳು 'ಸೂಳೆ'ಯೆಂದು ನಮೂದಿಸಿಕೊಳ್ಳಬೇಕು;ಆದರಿಂದ ಹಳದಿ ತಿಕೀಟೊಂದು ಪಡೆಯಬೇಕು. ಹಾಗೆ ಮಾಡಿದರೆ ಅವಳು ರಾಜಧಾನಿಯಲ್ಲಿರಬಹುದಾಗಿತ್ತು. ಆ ಯಹೂದಿ ಹೆಣ್ಣುಮಗಳಿಗೆ ಜ್ಞಾನದಾಸೆಯು ಇದ್ದುದರಿಂದ ಆ ಕೀಳು ದರ್ಜೆಯ ತಿಕೀಟು ಪಡೆದುಕೊಂಡು ರಾಜಧಾನಿಯಲ್ಲಿ ವಾಸವಾಗಿದ್ದಳು. ಸೂಳೆತನ ಮಾಡುವುದು ಬಿಡುವುದು ಅವಳಿಗೆ ಬಿಟ್ಟದ್ದು. ತನ್ನ ಜ್ಞಾನದ ಹಸಿವನ್ನು ಹಿಂಗಿಸಿಕೊಳ್ಳುವುದಕ್ಕೋಸುಗ ಅವಳು 'ಸೂಳೆ'ಯ ತಿಕೀಟು ಪಡೆದುಕೊಂಡಳು. ಜೀವನ-ವಿದ್ಯಾರ್ಥಿ ಜೀವನ.

ಅವಳು ಹಾಗೆಯೆ ತನ್ನ ಜೀವನವನ್ನು ಹತ್ತಿಕ್ಕಿಕೊಂಡು 'ಸೂಳೆ'ಯು ಸೋಗಿನಲ್ಲಿ ಅಭ್ಯಾಸ ಸಾಗಿಸಿದಳು. ೧೯೧೭ರ ಕ್ರಾಂತಿಯು ನಂತರ ವಿಷಮತೆ—ಜನಾಂಗಿಕ ಅಯೋಗ್ಯತೆ ಮಾಯವಾಗಿ ಸಮತೆಯು ನೆಲೆಗೊಳ್ಳಲು ಅವಳೊಬ್ಬ ಶಿಕ್ಷಕಿಯ ಪದವಿಗೆ ಬಂದಳು. ರಶಿಯದಲ್ಲಿ 'ಇಂದು ಯಾರೂ ಯಾವ ಅಭ್ಯಾಸ ಮಾಡಬಲ್ಲರು. ಜನಾಂಗಿಕ-ಪ್ರಾಂತೀಯ-ದೇಶೀಯ ಅಯೋಗ್ಯತೆಯಿಲ್ಲ. ಯೋಗ್ಯತೆಯು ಮುಟ್ಟೆಂದರೆ ಕೂಲಿಕಾರರಿರಬೇಕು—ಅದೂ ಸವಲತ್ತುಗಳನ್ನು ಅಪೇಕ್ಷಿಸುತ್ತಿದ್ದರೆ. ಜನಾಂಗದ ಮಾತೆತ್ತಿ ಹೀಯಾಳಿಸುವುದು ರಶಿಯದ ಕಾಯದೆಗೆ ಅಪರಾಧವೆನಿಸುವುದು. ಆದರಿಂದ ಅವರು ಅಭಿಮಾನಶೂನ್ಯರೆಂದು ತಿಳಿಯಲಾಗದು. ತಮ್ಮ ಜನಾಂಗವನ್ನು ಎಷ್ಟು ಪ್ರೇಮಾದರದಿಂದ ನೋಡಿಕೊಳ್ಳುವರೊ ಅಷ್ಟೆ ಬೇರೆಯವರ ಜನಾಂಗವನ್ನು ಆದರಿಸುವರು. (ತಮ್ಮದನ್ನು ಇತರರು ಆದರಿಸಬೇಕಾಗಿದ್ದರೆ ಹೆರವರದನ್ನು ಹೀಯಾಳಿಸಬಾರದು, ಎಂಬುದು ಅವರ ಬೀಜಮಾತು.) ಈ ವೃತ್ತಿಯು ಸಮತೆಯಿಂದಲೆ ಹುಟ್ಟುವುದು.

ವಿದ್ಯಾರ್ಥಿಗಳನ್ನು ಪಂಗಡಗಳಾಗಿ ವಿಭಾಗ ಮಾಡಿರುತ್ತದೆ. ಇಡಿ ಪಂಗಡವು ಮತ್ತೊಂದು ಪಂಗಡದೊಡನೆ ಪರಾಟ ಮಾಡುವುದು. ಪಂಗಡದಲ್ಲಿಯ ಪ್ರತಿಯೊಬ್ಬನು ತನ್ನ ಪಂಗಡವು ಮೇಲೆ ಬರುವಂತೆ ಹವಣಿಸುವನು. ಜಾಣರು ಮುಂದೆ ಬಿದ್ದು ತಮ್ಮ ಪಂಗಡಕ್ಕೆ ಹೆಚ್ಚು ಗುಣಗಳು ಬರಬೇಕೆಂದು ಹೆಣಗುತ್ತಾರೆ 'ಎಲ್ಲರ ಸಲುವಾಗಿ ತಾನು' ಎಂಬ ಕಲ್ಪನೆಯನ್ನು ವಿದ್ಯಾರ್ಥಿ ಜೀವನದಲ್ಲಿ ಬಿತ್ತುವುದು ಕಾಣುತ್ತದೆ. ಪಂಗಡದ ಹಿತವೆ ತನ್ನ ಹಿತ; ಎಂಬುದು ಎದ್ದುಕಾಣುವುದು. ಈ ವೃತ್ತಿಯೆ ಮುಂದೆ ಬಲಗೊಂಡು ಸಮಾಜಕ್ಕಾಗಿ—ದೇಶಕ್ಕಾಗಿ ತಾನು, ಎಂಬುದು ತಲೆದೋರುವುದು.

ಈ ಪಂಗಡಜೀವನದಿಂದ ವೈಯಕ್ತಿಕ ಬೆಳವಣಿಗೆಯಾಗದೆಂದು ಕೆಲವರು ಆಕ್ಷೇಪಿಸಬಹುದು. ವ್ಯಕ್ತಿಯ ಏಳಿಗೆ ನಡೆದೆ ಇರುವದು. ವ್ಯಕ್ತಿಯು ತನ್ನ ಏಳಿಗೆಗೆ ಬೇಕಾಗುವ ಸೌಕರ್ಯವನ್ನು ಸಹಜವಾಗಿ ಪಡೆಯುವನು. ಆದರೆ ಅವನ ಏಳಿಗೆಯು ವೈಯಕ್ತಿಕ ಹೆಗ್ಗಳಿಕೆಯಲ್ಲಿ ಪರಿಣಾಮವನ್ನು ಪಡೆಯದೆ ಸಂಗಡದ ಮೇಲ್ಮೆಗಾಗಿ ಸಹಾಯ

ಮಾಡುವುದು. ವ್ಯಕ್ತಿಯು ಹಿರಿಮೆ ಎಷ್ಟು ಗಣ್ಯವಾದರೂ ಅದರ ಬೆಲೆ ಸಮಾಜಕ್ಕೇನಾದರೂ ಇದ್ದರೆ ಮಾತ್ರ ಅದರ ಸಾರ್ಥಕತೆ. ಎಲ್ಲರೂ ಸಂಗಡದ ಪ್ರಗತಿಗಾಗಿ ಪ್ರಯತ್ನಿಸುತ್ತಿದ್ದರೆ ಸಮತೆ ಉಳಿಯುವುದು. ಸಮತೆಯ ಬೆಳವಣಿಗೆಗೆ ಸಂಗಡಪ್ರಧಾನ ಜೀವನವು ಹೆಚ್ಚು ಹಿತಕಾರಿ ಯೆಂಬುದು ರಸಿಯದ ಪ್ರಯೋಗದಿಂದ ಸಿದ್ಧವಾಗಿದೆ. ವ್ಯಕ್ತಿಯು ವ್ಯಕ್ತಿಗತ ಏಳಿಗೆಯ ಆಸೆಯೂ ವಿಷಮತೆಯ ತವರು.

ಇನ್ನೊಂದು ಮಾತನ್ನು ಅವಶ್ಯವಾಗಿ ಲಕ್ಷ್ಯಕ್ಕೆ ತರಬೇಕು. ಸಂಗಡದ ಪ್ರಗತಿಗೆ ಪ್ರತಿಯೊಬ್ಬನು ಹೆಣಗುತ್ತಿರುತ್ತಾನೆ. ಆರು ತಿಂಗಳ ಕೊನೆಗೆ ಶಿಕ್ಷಕನು ಅವರವರ ಪ್ರಯತ್ನವನ್ನು ಪರಿಶೀಲಿಸಿ, ಅತ್ಯುತ್ತಮ, ಉತ್ತಮ, ಮಧ್ಯಮ, ಕನಿಷ್ಠ ಎಂದು ವಿಮರ್ಶೆ ಮಾಡುತ್ತಾನೆ. ಹೀಗೆ ವಿಮರ್ಶೆ ಮಾಡುವುದು ಎಲ್ಲ ದೇಶದಲ್ಲಿದ್ದರೂ ಆ ವಿಮರ್ಶೆಯ ಉತ್ತರ ಭಾಗ ಯಾವ ದೇಶದಲ್ಲಿಯೂ ಇಲ್ಲ ರಸಿಯವನ್ನು ಬಿಟ್ಟು; ಶಿಕ್ಷಕನು ಮಾಡಿದ ವಿಮರ್ಶೆಯನ್ನು ಸ್ವೀಕರಿಸುವುದು ಇಲ್ಲವೆ ಖಂಡಿಸುವುದು ಆ ವಿದ್ಯಾರ್ಥಿಯ ಅಧಿಕಾರ. ಖಂಡಿಸಿದ ವಿದ್ಯಾರ್ಥಿಯನ್ನು ಶಿಕ್ಷಕನು ಎಂದೂ ತಪ್ಪು ತಿಳಿದುಕೊಳ್ಳುವುದಿಲ್ಲ.

ಈ ಪದ್ಧತಿಗಳ ಮೂಲಕ ವ್ಯಕ್ತಿಯೂ—ಸಂಗಡವೂ ಪ್ರಗತಿ ಹೊಂದುವುದು ಸಾಧ್ಯವಿದೆ. ಅದರಿಂದ ವ್ಯಕ್ತಿಯಲ್ಲಿ ಆತ್ಮವಿಶ್ವಾಸವು ಬೆಳೆವುದು; ಸಂಗಡಕ್ಕೆ ಪ್ರತಿ ವ್ಯಕ್ತಿಯ ಬೆಂಬಲ ದೊರೆವುದು.

ಅಭ್ಯಾಸದಲ್ಲಿ ಮುಖ್ಯವಾಗಿ ಒಂದು ಮಾತು ಕಾಣುವುದು: 'ಅದ ರಿಂದ ದೇಶಕ್ಕೆ ಯಾವ ಬಗೆಯ ಸಹಾಯವಾದಂತಾಗುವುದು' ಎಂಬುದು. ತಮ್ಮ ಭಾಷೆಗಳನ್ನು ಕಲಿಯುವುದು ಮುಖ್ಯ. ಜ್ಞಾನಸಾಧನೆಗಾಗಿ ಬೇರೆ ಭಾಷೆಗಳನ್ನು ಕಲಿವುದಗತ್ಯವೆನಿಸಿದರೆ ಮಾತ್ರ ಅವುಗಳನ್ನು ಕಲಿ ವುದು. ಹಾಗೆ ಕಲಿಯಲು ಸರಕಾರವು ಏರ್ಪಾಟು ಮಾಡಿದೆ. ಇದರಿಂದ ವ್ಯಕ್ತವಾಗುವುದು: ರಸಿಯದಲ್ಲಿ ತಾತ್ವಿಕ ವಿಧಾನ (Theory) ದೊಂ ದಿಗೆ ವ್ಯಾವಹಾರಿಕತೆ (Practice) ಯು ಬೆರೆತಿದೆ. 'ಉಪಯೋಗ ವಿಲ್ಲದ ವಿದ್ಯೆಯು ಕೊರಳೊಳಗಿನ ಗುದ್ದಿಯೆ ಸರಿ' ಎಂಬುದು ಅವರ ಪ್ರವೃತ್ತಿ.

'ಹೊಟ್ಟೆಗೆ ಹಿಟ್ಟು ದೊರಕಿಸಲು ಯಾವ ಪಾಠವಾದರೇನು ? ಅರೆದು ಕುಡಿಯೋಣ ', ಎಂಬುದು ರಸಿಯದಲ್ಲಿ ಕಾಣನು. ಪ್ರತಿಯೊಬ್ಬನು ತನ್ನ ಮನದೊಲವಿನ ಪ್ರಕಾರ ಅಭ್ಯಾಸ ಮಾಡುವುದು. ಯಾವ ವಿಷಯದಲ್ಲಿ ಅವನು ಪ್ರಾವೀಣ್ಯವನ್ನು ಪಡೆದಿರುವನೊ ಅದನ್ನು ದೇಶಹಿತಕ್ಕಾಗಿ ಬಳಸಿಕೊಳ್ಳಲಾಗುವುದು. ' ಎಷ್ಟು ಕಲಿತರೇನು ? ಉದ್ಯೋಗವಿಲ್ಲದೆ ಅಲೆ ದಾಡಬೇಕಲ್ಲ ! ' ಎಂಬ ಕೂಗು ರಸಿಯದಲ್ಲಿ ಇಲ್ಲ. ನಿರುದ್ಯೋಗನೆಂಬುದು ರಸಿಯದಲ್ಲಿ ಇಲ್ಲವೇ ಇಲ್ಲ. ನಿರುದ್ಯೋಗವು ಬಂಡವಲುಗಾರರ ದೇಶದಲ್ಲಿ ಕಂಡುಬರುವ ಬೇನೆ—ಬವಣೆ. ಅದಕ್ಕೆ ಕಾರಣವೂ ಇದೆ. ಬಂಡವಲು ಗಾರರೆಲ್ಲರೂ ಕೂಲಿಕಾರರ ರಕ್ತದ ಮೇಲೆ ತಮ್ಮ ಕೊಬ್ಬು ಬೆಳೆಯಿಸು ವವರು. ಕೂಲಿಕಾರರನ್ನು ಸೂತ್ರದ ಗೊಂಬೆಗಳಂತೆ ತಮ್ಮ ಮನೋ ವಿಕಾರದಂತೆ ಕುಣಿಸುವವರು. ಲಾಭದ ದುರಾಸೆಯೆ ಅವರ ಜೀವಾಳ. ಕಡಿಮೆ ಕೂಲಿಕಾರರಿಂದ ಹೆಚ್ಚಿನ ಕಾರ್ಯ ಮಾಡಿಸುವುದೆ ಅವರ ಕೌಶಲ್ಯ—ಅದೇ ನಿರುದ್ಯೋಗದ ಮೂಲ. ಈ ಬಂಡವಲುಗಾರರ ಬೇನೆ ರಸಿಯದಲ್ಲಿಲ್ಲ. ದುಡಿಯಬೇಕು—ಎಲ್ಲರೂ ದುಡಿಯಬೇಕು—ನಾಡಿನ ಏಳ್ಗೆಗಾಗಿ—ಸುಖಸೌಲಭ್ಯಗಳಿಗಾಗಿ ಎಲ್ಲರೂ ದುಡಿಯಬೇಕು. ಎಲ್ಲರೂ ದುಡಿವುದರಿಂದ ಕೆಲಸವು—ಕಾರ್ಯದ ಭಾರವು.ಹಂಚಿಹೋಗಿ ಎಲ್ಲರಿಗೂ ಸುಖವು ಹಂಚಿ ಬರುವುದು. ಈ ವ್ಯವಸ್ಥೆಯ ಮೂಲಕ ಅಲ್ಲಿಯ ಶಿಕ್ಷ ಣವು ವಿದ್ಯಾರ್ಥಿಗಳ ಮನದೊಲವಿನ ಪ್ರಕಾರವಾಗಿದೆ. ನವಕರಿ–ಉದ್ಯೋ ಗದ ಆಶೆಗಾಗಿಯಲ್ಲ. ಕಲಿತ ವಿದ್ಯೆಯನ್ನೆ ಅವರು ರಾಷ್ಟ್ರಕಾರ್ಯಕ್ಕೆ ಬಳಸಿಕೊಳ್ಳುವರು.

ಉಳಿದ ಯಾವುದೇ ದೇಶದಲ್ಲಿ ಕಂಡುಬಾರದ ಒಂದು ವೈಶಿಷ್ಟ್ಯ ರಸಿಯದ ಶಿಕ್ಷಣದಲ್ಲದೆ. ವಿದ್ಯಾರ್ಥಿ-ಶಿಕ್ಷಕರಲ್ಲಿ ಸಹಕಾರ. ಶಿಕ್ಷಣ ಸಂಸ್ಥೆ ನಡಿಸುವವರು ವಿದ್ಯಾರ್ಥಿಗಳಲ್ಲದೆ-ಶಿಕ್ಷಕರಲ್ಲದೆ-ಬೇರೆಯೊಂದು ಸಮಿತಿಯೆಂದು ಇದುವುದಿಲ್ಲ. ಸಂಸ್ಥೆಯ ಹಿತಾಹಿತಗಳು ವಿದ್ಯಾರ್ಥಿ-ಶಿಕ್ಷಕರನ್ನೆ ಅವಲಂಬಿಸಿದೆ, ಎಂದು ಅವರ ದೃಢವಾದ ನಂಬುಗೆ. ಕಲಿ ಯುವ ಕಾರ್ಯದಲ್ಲ—ವಿದ್ಯಾರ್ಥಿ ಶಿಕ್ಷಕರಲ್ಲಿ ಪರಸ್ಪರ ವಿಶ್ವಾಸ-ಪ್ರೇಮ ಗಳು ಇರುವುದು ಅಗತ್ಯ. ಶಿಕ್ಷಕನಲ್ಲಿ ಇನ್ನೊಂದು ಯೋಗ್ಯತೆ ಬೇಕು:

ವಿದ್ಯಾರ್ಥಿಗಳಿಗೆ ತಿಳಿಯಾಗಿ ತಿಳಿವಂತೆ ಹೇಳುವ ಹತೋಟಿಯಿರಬೇಕು. ಶಿಕ್ಷಕನು ಹೇಳುವುದು ವಿದ್ಯಾರ್ಥಿಗಳಿಗೆ ತಿಳಿಯದಾದರೆ ಆ ಶಿಕ್ಷಕನಿಂದ ವಿದ್ಯಾರ್ಥಿಗಳಿಗೆ ಏನು ಉಪಯೋಗ? ಇಂತಹ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ತಮ್ಮ ಅಭಿಪ್ರಾಯ ವ್ಯಕ್ತಮಾಡಲು ಅವಕಾಶವಿರಬೇಕು. ಇದು ರಸಿಯದಲ್ಲಿದೆ. ವಿದ್ಯಾರ್ಥಿಗಳು ಒಹುಮತವಾಗಿ ಬೇಡೆಂದರೆ ಆ ಶಿಕ್ಷಕನನ್ನು ದೂರೀಕರಿಸುವರು. ಶಿಕ್ಷಕನ ಯೋಗ್ಯತೆಯನ್ನು ತಿಳಿಯಲು ವಿದ್ಯಾರ್ಥಿಗಳೆ ಒರೆಗಲ್ಲು.

ಸಂಸ್ಥೆಯ ಪ್ರಗತಿಯನ್ನು ಪರಿಶೀಲಿಸಲು ಆಗಾಗ ಶಿಕ್ಷಕ-ವಿದ್ಯಾರ್ಥಿ-ಸಂಚಾಲಕರ ಸಭೆಗಳು ಸೇರುವವು. ಆ ಸಭೆಯಲ್ಲಿ ನಿರ್ದಾಕ್ಷಿಣ್ಯವಾದ ವಿಮರ್ಶೆ-ಟೀಕೆ ನಡೆಯುವವು. ಸಂಸ್ಥೆಯ ಪ್ರಗತಿಯೆ ಕಣ್ಣುಮುಂದೆ ಇರುವುದರಿಂದ ವಿಮರ್ಶೆ-ಟೀಕೆಗಳು ಯಾರ ಮನಸ್ಸನ್ನೂ ನೋಯಿಸುವುದಿಲ್ಲ. ಎಲ್ಲರ ಧ್ಯೇಯವೂ ಸಂಸ್ಥೆಯ ಏಳಿಗೆಯ ಕಡೆಗೆ. ಪ್ರತಿಯೊಬ್ಬರಿಗೂ ಅನಿಸುವುದು ತಾವೂ ತಮ್ಮ ಸಂಸ್ಥೆಯ ಪ್ರಗತಿಗೆ ಪ್ರಯತ್ನ ಮಾಡುವೆವೆಂದು. ಹೀಗಾಗಿ ಎಲ್ಲರೂ ಸಂಸ್ಥೆಯನ್ನು ತಮ್ಮದನ್ನಾಗಿ ಮಾಡಿಕೊಂಡು ಆತ್ಮೀಯತೆಯನ್ನು ಬೆಳೆಯಿಸುವರು. ಅದು ಹೆರವರ ಹೋರೆಯೆಂದು ಅನ್ನಿಸುವುದಿಲ್ಲ. ತಮ್ಮ ಕರ್ತವ್ಯವೆಂದೆ ಅನ್ನಿಸುವುದು. ಈ ರೀತಿಯ ಆತ್ಮೀಯತೆಯನ್ನು ಬಿತ್ತುವುದು ರಸಿಯದಲ್ಲಿಯ ಶಿಕ್ಷಣದ ಮೂಲ ಧ್ಯೇಯವು.

ವಿದ್ಯಾರ್ಥಿ—ಜೀವನದಲ್ಲಿದ್ದಾಗ ರಾಜಕಾರಣದಲ್ಲಿ ಭಾಗವಹಿಸಬಾರದು, ಎಂಬ ಗುಲ್ಲು ಎಲ್ಲೆಡೆಯಲ್ಲಿಯೂ ಕೇಳಿಬರುತ್ತದೆ. ಈ ಗುಲ್ಲು ಬಂಡವಲುಗಾರ ರಾಷ್ಟ್ರಗಳಿಲ್ಲಿದೆ. ಅವರಲ್ಲಿಯ ವರ್ಗೀಕರಣವೆ ಇದಕ್ಕೆ ಕಾರಣ. ರಸಿಯದಲ್ಲಿ ಈ ಬಗೆಯ ವರ್ಗೀಕರಣವಿಲ್ಲ. ಅವರಲ್ಲಿಯ ಜೀವನವು ಸಮರಸವಾಗಿದೆ. ವಿದ್ಯಾರ್ಜನೆ–ರಾಜಕಾರಣ ಇವು ವಿಭಾಗಿಸಲ್ಪಟ್ಟಿಲ್ಲ. ರಸಿಯದ ಶಿಕ್ಷಣಕ್ರಮದಲ್ಲಿ ತಾತ್ವಿಕ ವಿಧಾನ–ವ್ಯಾವಹಾರಿಕತೆ ಎರಡೂ ಜೊತೆಗೂಡಿ ಸಾಗುವುದರಿಂದ ಅಭ್ಯಾಸ–ಆಚಾರಗಳು ವಿಭಾಗಿಸಲ್ಪಟ್ಟಿಲ್ಲ. 'ಆಚಾರದಿಂದಲೆ ಅಭ್ಯಾಸ' (Learning by doing) ಎಂಬ ತತ್ವದ ಮೇಲೆ ನಿಂತಿದೆ. ಇದಕ್ಕೆ ಪೂರ್ವಜ್ಞಾನ

ಅಭ್ಯಾಸದಿಂದ ಆಚಾರ. ಹೀಗಾಗಿ ಕಾಲ ಗತಿಸಿದಂತೆ ಅಭ್ಯಾಸ–ಆಚಾರ ಗಳು ಸಮರಸವಾಗುವುವು. ರಾಜಕಾರಣದಲ್ಲಿ ತನ್ಮಯನಾದಾಗ ಕೂಡ ಅವನು ವಿದ್ಯಾರ್ಥಿಯಾಗಿ ಉಳಿವುದರಿಂದ ಅವರ ಜ್ಞಾನದ ಉಪಯೋಗ ಹೆಚ್ಚಾಗುವುದು. ಉಪಯೋಗಕ್ಕೆ ತಕ್ಕಂತೆ ಜ್ಞಾನ ಬೆಳೆವುದು.

ವಿದ್ಯಾರ್ಥಿಗಳೆಲ್ಲರೂ ಕಿರಿಯ ಸಂಘವಾದಿಗಳ ಸಂಘದ ಸದಸ್ಯರು. ದೈನಂದಿನ ಘಟನೆಗಳೆಲ್ಲ ಅವರಿಗೆ ತಿಳಿವುದರಿಂದ ಪ್ರಚಲಿತ ರಾಜಕೀಯ ಸಮಸ್ಯೆಗಳ ಮೇಲೆ ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡುವರು. ಅದರಿಂದ ಸರಿಯಾಗಿ ವಿಚಾರಿಸುವ ಶಕ್ತಿ ಬರುವುದು. ಏಕೆಂದರೆ ತಮ್ಮ ಅಭಿಪ್ರಾಯವು ಸರಿಯೊ ಅಲ್ಲವೊ. ಎಂಬುದು ಮುಂದಿನ ಘಟನೆಗಳಿಂದ ತಾನೆ ಸಿದ್ಧವಾಗುವುದು ?

ರಸಿಯದ ಶಿಕ್ಷಣಕ್ರಮವು ಹೂವು ಅರಳಿದಂತೆ ನೈಸರ್ಗಿಕವಾಗಿದೆ. ಸಮಾಜ ಜೀವನ—ವಿದ್ಯಾರ್ಥಿಜೀವನ ಎಂದು ವಿಭಾಗವಾಗಿಲ್ಲ. 'ಇಂದಿನ ಬಾಲಕರು ಮುಂದಿನ ಪಾಲಕರು' ಎಂಬ ಮಾತು ಅವರ ಪ್ರತಿ ಆಚಾರ ವಿಚಾರದಲ್ಲಿ ಕಂಡುಬರುವುದು. ಬಾಲಕನು ಪಾಲಕನಾಗಬೇಕಾದರೆ ವರ್ಗೀಕರಣದಿಂದಲ್ಲ. ವಾತಾವರಣವನ್ನು ಮೈಗೂಡಿಸಿಕೊಂಡು ತನ್ನ ಪ್ರಭಾವವನ್ನು ವಾತಾವರಣದ ಮೇಲೆ ಹೇರಿ, ಅದರಿಂದ ಪುನಃ ಪ್ರಭಾವ ಪಡೆದು ಪಾಲಕನ ಅವಸ್ಥೆಗೆ ಬರುವನು. ಮುಗುಳು ಅರಳುವ ಕ್ರಮವೇ ರಸಿಯದ ಶಿಕ್ಷಣಕ್ರಮದಲ್ಲಿ ಕಂಡುಬರುವುದು. ಜೀವನದಲ್ಲಿ ಸಾಧಿಸ ಬೇಕಾದ ಧ್ಯೇಯಗಳೆ ಬಾಲ್ಯದಿಂದಲೂ ಬಿತ್ತಲ್ಪಡುತ್ತವೆ. ಬಾಲ್ಯದಲ್ಲಿ ಬಿತ್ತಿದ ಬೀಜಗಳು ಬಾಲಕರು ಬೆಳೆದಂತೆ ಅವರೊಡನೆ ಬೆಳೆದು ಬರುವವು. ಅವರ ವಿಚಾರಗಳು ಅವರವೆ. ಅವರ ಮೇಲೆ ಹೆರವರು ತಮ್ಮ ವಿಚಾರ ಗಳನ್ನು ಹೇರಿದಂತೆಯಾಗದು.

ಸಮಾಜದಲ್ಲಿ ಬೇಕಾಗುವ ಲಿಂಗಭೇದಭಾವದ ಅಭಾವ, ಜನಾಂಗ ಸಮತೆ, ದುಡಿತಕ್ಕೆ ಮನ್ನಣೆ, ಪಂಗಡದ ಪ್ರಗತಿಗಾಗಿ ವ್ಯಕ್ತಿಯ ಸ್ವಾರ್ಥ ತ್ಯಾಗ, ಸಂಸ್ಥೆ ನಡೆಸುವುದರಲ್ಲಿ ತನ್ನದೂ ಅಂಗವಿದೆ; ಸಂಸ್ಥೆ ತನ್ನದು ಎಂಬ ಆತ್ಮೀಯತೆಯ ಅಂಕುರ. ಇದರ ಜೊತೆಗೆ ತನ್ನ ವೈಯಕ್ತಿಕ ಬೆಳವಣಿಗೆ. ಇವೆಲ್ಲವೂ ರಸಿಯದ ಇಂದಿನ ಶಿಕ್ಷಣಕ್ರಮದಲ್ಲಿ ಅಡಕ

ವಾಗಿರುವುವು. ಇದನ್ನು ತಾತ್ವಿಕ ವಿಧಾನವೆಂದು ಯಾರೂ ಮಂಡಿಸು ವುದಿಲ್ಲ. ಶಾಲೆ-ಸಮಾಜಗಳನ್ನು ಪರೀಕ್ಷಿಸಿದರೆ ಇದು ಎದ್ದು ಕಾಣುವುದು.

## ಆತ್ಮೀಯತೆಯ ಅಂಕುರ

ಈ ಶಿಕ್ಷಣಕ್ರಮದ ಪ್ರಭಾವವಾಗಿ ಇಂದು ರಸಿಯನ್ನರೆಲ್ಲರಲ್ಲಿ ಆತ್ಮೀಯತೆಯು ಅಂಕುರಿಸಿ ಮೊಳೆತು ಚಿಗಿಯತೊಡಗಿದೆ. 'ದೇಶವು ಯಾರದು?' ಎಂದು ಕೇಳಿದರೆ ಪ್ರತಿಯೊಬ್ಬನೂ 'ನಮ್ಮದು' ಎಂದು ಉತ್ತರ ಕೊಡುವ. ಈ ಶಾಲೆಯನ್ನು ಕಟ್ಟಿದವರಾರು? 'ನಾವು'. ಈ ಹೊಲಗಳನ್ನು ಸಾಗುಮಾಡಿದವರಾರು? 'ನಾವೆ!'. ಯಂತ್ರಾಲಯ ಗಳನ್ನು ಯೋಜಿಸಿದವರಾರು? 'ನಾವೇ ಅಲ್ಲವೆ!'. ರಸಿಯದ ಯಾವ ಮೂಲೆಯಲ್ಲಿ ನಿಂತು ಕೇಳಿದರೂ ಅದು 'ನಮ್ಮದು' ಎಂಬ ಹಿರಿ ಕೂಗು ಕೇಳುವುದು. 'ಈ ದೇಶವು ನಮ್ಮದು; ನಮ್ಮೆಲ್ಲರ ಸಲುವಾಗಿ; ನಾವು ಕಟ್ಟಿದ್ದೇವೆ; ನಮ್ಮ ನೆತ್ತರ ಸುರಿದಿದ್ದೇವೆ; 'ನಾವು-ನಮ್ಮದು' ಎಂಬದೆ ಎಲ್ಲೆಲ್ಲಿಯೂ ಕೇಳಿಬರುವುದು. ಇಡಿ ದೇಶವೆಲ್ಲ ಒಂದೆ ಕುಟುಂಬದಂತೆ; 'ನಮ್ಮದೆ'ಂದು ದೇಶವನ್ನು ತಮ್ಮದನ್ನಾಗಿ ಮಾಡಿಕೊಂಡಿದ್ದಾರೆ.

೧೯೧೭ರ ಮೊದಲು ರೈತರನ್ನುದ್ದೇಶಿಸಿ 'ಈ ದೇಶವಾರದು?' ಎಂದು ಕೇಳಿದರೆ 'ಜಾರನದು' ಎಂದುತ್ತರ ಬರುತ್ತಿತ್ತು. ಜಾರನನ್ನು ಕೇಳಿದರೆ 'ನಮ್ಮಪ್ಪನದು' ಎಂದು ಹೇಳುತ್ತಿದ್ದ. ಹೀಗಾಗಿ ದೇಶವು ಯಾರದೂ ಇದ್ದಿಲ್ಲ. ಅದಕ್ಕಾಗಿ ಸ್ವಾರ್ಥವು ನೆಲೆಗೊಂಡಿತ್ತು. ಸ್ವಾರ್ಥವೆ ಆಗಿನ ತಳಹದಿ. ಇಂದು ದೇಶವನ್ನು ಎಲ್ಲರು 'ತಮ್ಮ'ದೆಂದು ಹೇಳು ವರು. 'ತಮ್ಮ' ದೇಶಕ್ಕಾಗಿ ಬೇಕಾದ ತ್ಯಾಗವನ್ನು ಮಾಡಲು ಸಿದ್ಧ ರಾಗಿದ್ದಾರೆ. ಈ ಸಿದ್ಧತೆ ಹೇಗಾಗಿದೆಯೆಂಬುದನ್ನು ನೋಡುವುದು ನಮ್ಮ ಮುಂದಿನ ಕೆಲಸ.

೧೯೧೭ರ ಕ್ರಾಂತಿಯ ಮೊಟ್ಟಮೊದಲನೆಯ ಮಹತ್ಕಾರ್ಯವೆಂದರೆ 'ಇಡಿ ದೇಶವು ಎಲ್ಲರದು' ಎಂದು ಸಾರಿದುದು. ವರ್ಗಭೇದವನ್ನು ತೊಡೆದು ಹಾಕಿದುದು. ಸಿರಿವಂತರೆಂದು ಸೊಕ್ಕಿನಿಂದ ನಡೆಯುವರ ನಿರ್ಮೂಲನ. ಬಡತನವೆ ಅಯೋಗ್ಯತೆಯ ಚಿನ್ಹವಾದುದು ಅಳಿಸಿ

ಹೋಯಿತು. ಎಲ್ಲರೂ ಸರಿಸಮಾನರು; ಮೇಲು ಕೀಳು ಎಂಬುದು ಇಲ್ಲ. ದುಡಿವವರು ಕೆಲರು—ತಿನ್ನುವವರು ಕೆಲರು ಎಂಬುದು ದೂರಾಯಿತು. ಪ್ರತಿಯೊಬ್ಬನೂ ದುಡಿಯಲೇಬೇಕು. ದುಡಿದವನಿಗೆ ಮನ್ನಣೆ. ವಿದ್ಯೆಯು ಸಿರಿವಂತರ ಸೊತ್ತಾಗಿದ್ದುದು ಹೋಗಿ ಪ್ರತಿಯೊಬ್ಬನ ತೊತ್ತಾಗುವಂ ತಾಯಿತು. ಎಲ್ಲರೂ ಕಲಿಯಲೇಬೇಕೆಂಬ ಒತ್ತಾಯ. ಕಿರಿಯರಂತೂ ಶಾಲೆಗೆ ಸೇರಬೇಕು. ಹಿರಿಯರು ಕೂಡ ಬಿಡುವಿನ ವೇಳೆಯಲ್ಲಿ—ಸಾಯಂ ಕಾಲದಲ್ಲಿ—ಕಲಿಯಬೇಕು. ಅಜ್ಞಾನವು ಅಪರಾಧವೆಂದು ಸಾರಲಾ ಯಿತು. ನಿರಕ್ಷರಿಗಳಾಗಿರಬಾರದು, ಎಂದು ಕಟ್ಟಾಯಿತು. ಸಾಮಾನ್ಯ ಜನತೆಯನ್ನು ಅಜ್ಞಾನದಲ್ಲಿಡುವುದು ಬಂಡವಲುಗಾರರ ಲಕ್ಷಣ ಅವರ ಅಜ್ಞಾನವೆ ತಮ್ಮ ಶಕ್ತಿ ಎಂದು ತಿಳಿಯುತ್ತಿದ್ದರು ಬಂಡವಲುಗಾರರು. ಅವರ ಅಜ್ಞಾನವನ್ನು ತಮ್ಮ ಕಾರ್ಯಕ್ಕಾಗಿ ಬಳಸಿಕೊಳ್ಳುತ್ತಿದ್ದರು. ಕ್ರಾಂತಿಯಿಂದ ಸಾರ್ವತ್ರಿಕ ಶಿಕ್ಷಣವು ಮೊದಲಾಯಿತು. ಸಮಭಾವ ಕಾಣತೊಡಗಿತು. ವರ್ಗಭೇದವಿಲ್ಲದಾಯಿತು. ಬಡತನವು ಅಯೋಗ್ಯತೆ ಯೆಂಬುದು ದೂರಾಯಿತು. 'ಇಡಿ ದೇಶವೆಲ್ಲವೂ ಜನತೆಯದು', ಎಂಬ ಭಾವನೆಯು ಮೊದಲಾಯಿತು.

ಕ್ರಾಂತಿಯಿಂದ ವಾತಾವರಣವು ಕದಡಿಹೋಗಿರುತ್ತದೆ. ಭಾವನೆ ಗಳೆಲ್ಲವೂ ಉದ್ರಿಕ್ತಾವಸ್ಥೆಯಲ್ಲಿರುವುವು. ಮೊಗಲಿನದೆಲ್ಲವೂ ಕೆಟ್ಟೆಂಬುದು ಸಹಜವಾಗಿರುತ್ತದೆ. ಹಳೆಯದೆಲ್ಲವೂ ಕೊಳೆಯೆಂದು ಕೂಗಿದ ಮಾತ್ರಕ್ಕೆ ಹೊಸತನ್ನು ಕಟ್ಟಿದಂತಾಗುವುದಿಲ್ಲ. ಹಳೆಯದನ್ನು ಹೊಡೆದು ಹಾಕುವ ಕಾರ್ಯಕ್ಕಿಂತಲೂ ಹೊಸದನ್ನು ಕಟ್ಟುವ ಕಾರ್ಯವು ಕಠಿಣವಾದುದು. ಕ್ರಾಂತಿಯು ಹಳೆಯದನ್ನು ಬೇರುಸಡಿಲಿಸಿ ಕಿತ್ತುಬಿಟ್ಟಿತು. ಆ ಹಳೆಯ ಮರವನ್ನು ಸುಟ್ಟು ಕ್ಷೇತ್ರವನ್ನು ಹಸನ ಮಾಡಿ ಹೊಸ ಬೀಜವನ್ನು ಹಾಕುವುದು ಕಠಿಣಸಾಧ್ಯವಾದುದು. ಹೊಸ ಬೀಜವನ್ನು ಬಿತ್ತಿ ಬೆಳೆಸು ವಾಗ ಕಷ್ಟ-ಸಂಕಟಗಳು ಬಂದರೂ ತಾನು ಬಿತ್ತುವ ಬೀಜ ಬೆಳೆಯ ಬೇಕೆಂಬ ಲವಲವಿಕೆಯು, ಆತ್ಮೀಯತೆಯು ಕಂಡುಬಂದು ಕಷ್ಟವನ್ನು ಕಡೆಗಣಿಸಿ, ಸುಖಹಚ್ಚಿಕೊಳ್ಳುವುದು ಕಾಣುವುದು.

ಕ್ರಾಂತಿಯ ಮೊದಲು ರಸಿಯದ ಜನತೆಯು ಹಳ್ಳಿಗಳಲ್ಲಿ ಹುದುಗಿ

ಕೊಂಡಿತ್ತು. ಒಕ್ಕಲುತನವೆ ಅವರ ಮುಖ್ಯ ಉದ್ಯೋಗ. ಆ ಒಕ್ಕಲು ತನವಾದರೂ ಸಾಹುಕಾರರ ನೆರೆಯಲ್ಲಿ ಬೆಳೆಯುತ್ತಿದ್ದುದರಿಂದ ಒಕ್ಕಲಿಗ ನಿಗೂ ಸುಖವಿಲ್ಲ. ಸಾಹುಕಾರನಿಗೆ ಆಸ್ಥೆಯಿಲ್ಲ. ಸಾಹುಕಾರನ ಕಣ್ಣು ದುಡ್ಡಿನ ಮೇಲೆ; ಹೊಲದ ಮೇಲಾಗಲಿ, ಒಕ್ಕಲಿಗನ ಮೇಲಾಗಲಿ ಇದ್ದಿಲ್ಲ. ಒಕ್ಕಲಿಗನು ನಿರಕ್ಷರಿ; ಭಾವಿಕತನದಲ್ಲಿ ಹುಟ್ಟುವಂಟ ಮುಗ್ಧ ಗಿಡವ. ಅವನ ಸಾಧನ ಸಾಮುಗ್ರಿಗಳು ಹಳೆಯವು. ಇಂದಿನ ಭಾರತದ ಹಳ್ಳಿಗಳಂತೆ ರಶಿಯಾದಲ್ಲಿಯು ಹಳ್ಳಿಗಳು ಸಾಹುಕಾರರ ಅಲಕ್ಷ್ಯದಿಂದ— ಸರಕಾರದ ಅನಾಸ್ಥೆಯಿಂದ ಹಾಳಾಗಿ—ಬರಗಾಲವು ಆಗಾಗ ಬಾಗಿಲಿಗೆ ಬಂದು ರೈತರನ್ನು ಉಪಹೆಗೀಡುಮಾಡುತ್ತಿತ್ತು. ಕ್ರಾಂತಿಯ ಮೊದಲು ರಶಿಯವು ರೈತರ ದೇಶ—ಅಜ್ಞಾನದಲ್ಲಿ ಮುಳುಗಿದ, ಭಾವಿಕತನದಲ್ಲಿ ಬೆಳೆದ, ಬರಗಾಲದಲ್ಲಿ ಬೆಂದ ಹಾಳಾದ ರೈತರ ದೇಶವಾಗಿತ್ತು.

ಕ್ರಾಂತಿಯಿಂದ ಎಲ್ಲವೂ ಬದಲಾವಣೆಯಾಯಿತು. ದೇಶದಲ್ಲಿ ಸಮತೆ ಬೆಳೆಯಿಸುವುದಷ್ಟೆ ಧ್ಯೇಯವಾಗಿರಲಿಲ್ಲ. ಪಾಶ್ಚಾತ್ಯ-ಔದ್ಯೋಗಿಕ ರಾಷ್ಟ್ರಗಳ ಭುಜಕ್ಕೆ ಭುಜ ತಗುಲಿಸಿ ಸಮಭಾವದಿಂದ ನಿಲ್ಲಬೇಕೆಂ ಬುದೂ ಒಳಗಿನ ಆಸೆ. ರಶಿಯವು ಯಾವ ದೃಷ್ಟಿಯಿಂದಲೂ ಹಿಂದೆಯಿಲ್ಲ ಎಂದು ತೋರಿಸುವುದೂ ಒಂದು ಬಳದಸಿ. ಉಳಿದ ದೇಶಗಳು ಒಂದು-ಒಂದೂವರೆ ಶತಮಾನ ಮುಂದೆ ಹೋದುವ. ಅವುಗಳ ಸರಿ ಸಮಾನವಾಗಿ ನಿಲ್ಲಬೇಕಾದರೆ ರಶಿಯವು ಎಂತಹ ಕಾರ್ಯ ಮಾಡಬೇಕಾ ಯಿತು! ೧೯೧೭ರ ಮೊದಲು ಹಿಂದುಳಿದ ದೇಶ; ೧೯೪೨ರಲ್ಲಿ ರಶಿಯವು ಯಾವ ದೇಶಕ್ಕೂ ಹಿಂದೆ ಇಲ್ಲ. ಈ ಅತ್ಯಲ್ಪ ವೇಳೆಯಲ್ಲಿ—೨೫ ವರುಷ ಗಳಲ್ಲಿ, ಹೇಗೆ ಸಾಧನೆಗೈದಿದೆ, ಎಂಬುದನ್ನು ನಾವು ಭಾರತೀಯರು— ಅದರಲ್ಲೂ ಕನ್ನಡಿಗರು—ಎಚ್ಚರದಿಂದ ಪರಿಶೀಲಿಸಬೇಕು.

ಔದ್ಯೋಗಿಕ ಜೀವನದ ಮೊದಲ ಲಕ್ಷಣವೆಂದರೆ ಪಟ್ಟಣಗಳು ಬೆಳೆ ಯುವುದು. ಹಳ್ಳಿಗರು ತಮ್ಮ ಹಳ್ಳಿಗಳನ್ನು ಬಿಟ್ಟು ಪಟ್ಟಣಗಳಲ್ಲಿಯ ಯಂತ್ರಾಲಯಗಳಲ್ಲಿ ದುಡಿಯಲು ಬರುವರು. ಹಳ್ಳಿಯ ಜನತೆ ಪಟ್ಟಣಕ್ಕೆ ಬರುವುದರಿಂದ ವಸತಿಯ ಸಮಸ್ಯೆಯು ಎದುರು ಬರುವುದು.

ಕಟ್ಟಡಗಳ ಕೊರತೆ: ದೊಡ್ಡದೊಡ್ಡ ಯಂತ್ರಾಲಯಗಳಿಗೆ

ಅನುಕೂಲವಾಗುವಂತಹ ಕಟ್ಟಡಗಳು ಬೇಕು. ದುಡಿಯುವ ಕೂಲಿಕಾರರಿಗೆ ವಾಸವಾಗಿರಲು ವಸತಿ–ಮನೆಗಳ ಕೊರತೆ. ಅಲ್ಲದೆ, ಸಾರ್ವತ್ರಿಕ ಶಿಕ್ಷಣದ ಮೂಲಕ ಶಿಕ್ಷಣ ಸಂಸ್ಥೆಗಳಿಗೆ ಕಟ್ಟಡಗಳ ಕೊರತೆ. ದೇಶವನ್ನೆ ಹೊಸದಾಗಿ ಕಟ್ಟುವುದು ನಡೆದಾಗ ಎಲ್ಲದರ ಕೊರತೆಯಂತೆ ಕಟ್ಟಡದ ಕೊರತೆಯು ಒಂತು. ಒಂದೊಂದು ಮನೆಯಲ್ಲಿ ಹೊರಚೆಲ್ಲುವಷ್ಟು ಜನಗಳಾದುದರಿಂದ ಕಟ್ಟಡದ ಸಮಸ್ಯೆ ಕಟುವಾಯಿತು. ಸರಕಾರಿ ಕಚೇರಿಗಳನ್ನು — ಕಚೇರಿ ಅವಧಿ ಮುಗಿದ ಮೇಲೆ–ಶಾಲೆಗಳಿಗಾಗಿ ಉಪಯೋಗಿಸುತ್ತಿದ್ದರು. ಆದರೆ ಬೆಳೆಯುತ್ತಿದ್ದ ಸಂಸ್ಥೆಗಳೆಲ್ಲಕ್ಕೂ ಕಚೇರಿಯಲ್ಲಿ ಅನುವು ಹೇಗೆ ದೊರೆಯಬೇಕು ? ಈ ಅವಧಿಯಲ್ಲಿ ಮನೆಗಳನ್ನು ಬಾಡಿಗೆಗಾಗಿ ಕೊಡುವುದು ಅಪರಾಧವೆಂದು ಗಣಿಸಲಾಗುತ್ತಿತ್ತು. ಬಾಡಿಗೆ ಕೊಡುವುದೆಂದರೆ, ಆ ಮನೆಯ ಯಜಮಾನನಿಗೆ ಅದರ ಬಳಕೆ ಇಲ್ಲವೆಂದಾಗುತ್ತಿತ್ತು. ಈ ಸಂದರ್ಭದಲ್ಲಿ ಸರಕಾರವು ಆ ಮನೆಯನ್ನು ತನ್ನ ವಶಕ್ಕೆ ತೆಗೆದುಕೊಂಡು ಯೋಗ್ಯ ರೀತಿಯಲ್ಲಿ ಉಪಯೋಗ ಮಾಡುತ್ತಿತ್ತು.

ಅಂತೂ ಹೊಸ ಕಟ್ಟಡಗಳನ್ನು ಕಟ್ಟಲೇಬೇಕಲ್ಲವೆ ? ಅದಕ್ಕಾಗಿ ಸಾಧನ ಸಾಮಗ್ರಿ ಸಾಕಷ್ಟು ಸಿಕ್ಕುತ್ತಿದ್ದಿಲ್ಲ. ಒಂದುವೇಳೆ ಸಿಕ್ಕರೂ ಅವುಗಳನ್ನು ಬಳಸಿ ಹೊಸ ಮಾದರಿಯ ಕಟ್ಟಡಗಳನ್ನು ಕಟ್ಟುವ ಕೌಶಲ್ಯ ಇರುತ್ತಿದ್ದಿಲ್ಲ. ಹಳೆಯ ಕಾಲದ ಮಣ್ಣಿನ ಮನೆಗಳನ್ನು ಕಟ್ಟಿದವರು ಹೊಸಕಾಲದ ಸಿಮೆಂಟಿನ ಕಟ್ಟಡಗಳನ್ನು ಕಟ್ಟುವುದೆಂತು ? ಸಾಧನ ಸಾಮಗ್ರಿಗಳನ್ನು ಹೊರದೇಶದಿಂದ ತಂದಂತೆ, ಕುಶಲಕರ್ಮಿಗಳನ್ನು ತರಬಹುದಾಗಿತ್ತು. ಹಾಗೆ ಕೆಲವರನ್ನು ಬರಮಾಡಿಕೊಂಡಿದ್ದರು. ಆದರೆ ಇಡಿ ದೇಶದ ತುಂಬ ನಡೆವ ಚಟುವಟಿಕೆಗಳಿಗೆ ಪರಕೀಯರನ್ನು ತಂದರೆ ಸಾಗುವುದು ಹೇಗೆ ? ಅಲ್ಲದೆ ಅವರಿಗೆ ರಸಿಯದ ಬಗ್ಗೆ ಆತ್ಮೀಯತೆ ಅನ್ನಿಸುವುದು ಹೇಗೆ ? ಎಷ್ಟೆಂದರೂ ದುಡ್ಡಿಗಾಗಿ ದುಡಿವವರು ಅವರು. ಈ ವಿಚಾರಗಳ ಮೂಲಕ ರಸಿಯನ್ನರು ತಾವೇ ತಮ್ಮ ಕಟ್ಟಡಗಳನ್ನು ಕಟ್ಟತೊಡಗಿದರು. ಕಾರ್ಯಕುಶಲತೆಯಿಲ್ಲದೆ ಹಳೆಯ ಮಣ್ಣಿನ ಕೆಲಸದ ಜಾಣತನದಿಂದ ಕಟ್ಟಿದವುಗಳು ಗಟ್ಟಿಯಾಗಿ ಹೇಗೆ ನಿಂತಾವು ? ಅವುಗಳಲ್ಲಿ

ಸಯವು ಕಂಡುಬರುತ್ತಿದ್ದಿಲ್ಲ. ಹೊಸದರ ಬೆಡಗು ಇರುತ್ತಿದ್ದಿಲ್ಲ. ಅಂತಹ ದನ್ನು ಕಟ್ಟುವಾಗ ಬರುವ ಎಡರು-ತೊಡರುಗಳನ್ನು ನಿವಾರಿಸುತ್ತ ಪಾಠ ಕಲಿಯುತ್ತ ಮುಂದೆ ಸಾಗುವುದು. (ಇಂದಿನಕಿಂತ ನಾಳೆ ಹೆಚ್ಚು ಅನುಭವ ಬರುವುದು.) ಅದು ಕೌಶಲ್ಯವನ್ನು ತಂದುಕೊಡುವುದು; ಪುನರಾವೃತ್ತಿಯಿಂದ ಪ್ರಾವೀಣ್ಯ ಪಡೆಯುವುದು ಅವರ ಪರಿಪಾಠವಾ ಯಿತು. ಕಾರ್ಯ ಮಾಡುತ್ತ ಕಲಿಯುವುದು; ಕಲಿತುದನ್ನು ಕಾರ್ಯ ರೂಪಕ್ಕೆ ತರುವುದು.

ಚಿಕ್ಕಮಕ್ಕಳು ಗುಬ್ಬಿಯ ಗೂಡುಗಳನ್ನು ಕಟ್ಟುವುದಿಲ್ಲವೆ! ಅವು ಶಾಶ್ವತವಾಗಿ ಬಾಳುವವೆಂದೇನು ಅವರು ನಂಬಿರುವುದಿಲ್ಲ. ಆದರೂ ಅವುಗಳನ್ನು ತಾವೇ ಕಟ್ಟಿದ್ದೇವೆಂಬ ಅಭಿಮಾನದಿಂದ ಕೆಟ್ಟಿದ್ದರೂ ಒಳ್ಳೆಯ ದೆಂಬ ಹೆಮ್ಮೆ ತೋರುವಂತೆ ರಸಿಯದಲ್ಲಿ ಕ್ರಾಂತಿಯ ನಂತರದ ಕಟ್ಟಡ ಕಟ್ಟುವಿಕೆಯಲ್ಲಿ ಅಭಿಮಾನ, ಆಸ್ಥೆ ಕಂಡುಬಂದುವು.

ಗುಬ್ಬಿಯ ಗೂಡಿನಂತೆ, ಕಟ್ಟಿದ ಕಟ್ಟಡಗಳು, ಕುಸಿಬಿದ್ದ ಉದಾ ಹರಣೆಗಳು ಕಡಿಮೆಯಿಲ್ಲ. ಕುಸಿಬಿದ್ದರೆ ಅವರಿಗೆ ಆಶ್ಚರ್ಯವೂ ಆಗದು. ಕಟ್ಟುವುದರಲ್ಲಿ ತಾವು ಹೊಸಬರೆಂದು ತಿಳಿದೆ ಇದೆ. ಕೆಟ್ಟರೇನು ಅಚ್ಚರಿ. ಕಟ್ಟಡವು ಕುಸಿದ ಕೂಡಲೆ 'ಇನ್ನೊಮ್ಮೆ ಯತ್ನಮಾಡು' ಎಂದು ಮತ್ತೊಮ್ಮೆ ಕಟ್ಟುವುದು. ಹೀಗೆ ಮಾಡುವುದರಿಂದ ಕಟ್ಟುವಿಕೆಯಲ್ಲಿ ಅನುಭವದಿಂದ ಕೌಶಲ್ಯ ಬರುತ್ತಿತ್ತು. ಅದರ ಜೊತೆಗೆ ಕಟ್ಟಡವು 'ತಮ್ಮದು' ಎಂಬ ಭಾವನೆಯು ಬೆಳೆಯುತ್ತಿತ್ತು. ಕಟ್ಟಡಗಳು ಕೆಟ್ಟರೂ ಅಡ್ಡಿಯಿಲ್ಲ; ತಾವೇ ಕಟ್ಟಿದರು. ಆ ಹಟದ ಮೂಲಕ ಇಂದು ರಸಿಯ ದಲ್ಲಿ ಕುಶಲ ವಿಶ್ವಕರ್ಮರು ಸಿದ್ಧರಾಗಿದ್ದಾರೆ. ಅಲ್ಲದೆ ಇಡಿ ದೇಶದಲ್ಲಿನ ಕಟ್ಟಡಗಳ ಬಗ್ಗೆ ರಸಿಯನ್ನರಲ್ಲಿ ಆತ್ಮೀಯತೆಯ ಅಭಿಮಾನವು ಕಾಣು ವುದು. ಆ ಕಟ್ಟಡಗಳಿಗೆ ಹೊರಗಿನವರು ಹೆಸರಿಟ್ಟರೆ ತಡೆಯದು. ಅವರಿಗೆ ಧಕ್ಕೆ ತಗುಲಿಸುವ ಮಾತು ದೂರವೆ. ಅವುಗಳಿಗೆ ಪೆಟ್ಟು ತಾಗಿದರೆ ಅವರ ಮರ್ಮಕ್ಕೆ ತಾಗಿದಂತಾಗಿ ಅವರಿಗೆ ಕಸವಿಸಿಯಾಗುತ್ತದೆ.

ಹೊಸ ಕಟ್ಟಡಗಳು ಸಿದ್ಧವಾಗುವಾಗ ಅವರಿಗೆ ಸಂಕಟಗಳು ಕಡಿಮೆಯಿರಲಿಲ್ಲ. ದ್ರವ್ಯಹಾನಿಯಾಗಿದೆ, ಪ್ರಾಣಹಾನಿಯಾಗಿದೆ; ಮುಂದೆ

ಸಿದ್ಧವಾಗುವ ಗೋಪುರದ ಕಡೆಗೆ ದೃಷ್ಟಿಯಿಟ್ಟವರು ಈ ತಾತ್ಕಾಲಿಕ ಹಾನಿಗಳಿಗೆ ಲಕ್ಷ್ಯಕೊಡುವರೆ? ಮುಂಬರುವ ಸುಖಕ್ಕಾಗಿ ಇಂದು ಕಷ್ಟಪಡಲೇಬೇಕು, ಎಂಬುದು ಅವರ ಮೂಲ ಮಾತು.

ಈ ಮೂಲ ಮಾತು ಅವರ ಎಲ್ಲ ಚಟುವಟಿಕೆಗಳಲ್ಲಿ ಒಡೆದು ಕಾಣುತ್ತಿತ್ತು. ಕಟ್ಟಡಗಳ ಕೊರತೆಯುಂಟಾದರೆ ಬಯಲಿನಲ್ಲಿ ಜೀವಿಸಬಹುದು. ಆದರೆ ಆಹಾರದಲ್ಲಿ ಕೊರತೆಯುಂಟಾದರೆ ಹೇಗೆ ಮಾಡುವುದು? ಈ ಆಹಾರದ ಕೊರತೆಯನ್ನೂ ಸಮಾಧಾನದಿಂದ ಅವರು ನುಂಗಿಕೊಂಡರು, ಮುಂಬರುವ ಸುಖಕ್ಕಾಗಿ.

ದೇಶದ ಏಳಿಗೆಯನ್ನು ಕ್ರಮಬದ್ಧವಾಗಿ ಮಾಡಬೇಕೆಂದು ಐದು ವರುಷಗಳ ಗುತ್ತಿಗಾರಿಕೆಯೊಂದನ್ನು ಸಿದ್ಧಪಡಿಸಿದರು. ಜನಸಾಮಾನ್ಯರಿಗೆ ಅಗತ್ಯವಾಗಿ ಬೇಕಾಗುವ ಸಾಮಗ್ರಿ ಮೊದಲು ಹುಟ್ಟತೊಡಗಿತು; ಹುಟ್ಟುವಳಿಯ ಆದರ್ಶ ಹೀಗಿತ್ತು: ಯಾವುದೆ ಪದಾರ್ಥವಿರಲಿ, ಪ್ರತಿಯೊಬ್ಬನೂ ಪಡೆಯುವಂತೆ ಇರಬೇಕು ಅದರ ಬೆಲೆ ಕಡಿಮೆ ಇರಬೇಕು. ವಿಪುಲವಾಗಿ ಹುಟ್ಟಬೇಕು.' ಹೀಗೆ ಕಡಿಮೆ ಬೆಲೆಯುಳ್ಳ, ದೊಡ್ಡ ಪ್ರಮಾಣದಿಂದ ಹುಟ್ಟುವಳಿ ಮಾಡುವಾಗ ಪದಾರ್ಥಗಳು ಕಡಿಮೆ ತರಗತಿಯವು ಹೊರಡುತ್ತಿದ್ದರೆ ಆಶ್ಚರ್ಯವೇನು? ಆ ಕಾಲದ ಕರಿಯ ಬ್ರೆಡ್ಡುಗಳನ್ನು ಪರದೇಶದ ಪ್ರವಾಸಿಗರು ನೋಡಿ, (ನಾಯಿ ಕೂಡ ತಿನ್ನಲು ನಿರಾಕರಿಸಬಹುದು; ಅಂತಹವನ್ನು ಮಾನವರು ತಿನ್ನುತ್ತಾರೆ. ಅದೂ ಹೊಟ್ಟೆತುಂಬ ಅಲ್ಲ. ಕ್ರಾಂತಿಯಿಂದೇನು ಸುಖವಾಯಿತು ?) ಎಂದು ಮೂಗು ಮುರಿದು ಉದ್ಗಾರ ತೆಗೆಯುತ್ತಿದ್ದರು. ಆದರೆ ಅವರಿಗೇನು ಗೊತ್ತು ಮೊದಲಿನ ಸ್ಥಿತಿ? ಕ್ರಾಂತಿಯ ಮೊದಲು ತಿನ್ನುವ ಸಾಮಗ್ರಿ ಅಂಗಡಿಗಳಲ್ಲಿ ಕಿಕ್ಕಿರಿದಿತ್ತು; ಕೊಳ್ಳಲು ಸಿರಿವಂತರೆ ಬರಬೇಕು. ಬಡವರು ಕನ್ನಡಿಯೊಳಗಿಂದ ನೋಡಿ ತಣಿಯಬೇಕು. ಆಗಿನ ಪ್ರವಾಸಿಗರಿಗೆ, 'ರಸಿಯು ಸಂಪತ್ತುಳ್ಳ ದೇಶ; ಎಲ್ಲ ಸಾಮಗ್ರಿ ವಿಪುಲವಾಗಿ ಸಿಕ್ಕುತ್ತದೆ. ಯಾತಕ್ಕೂ ಕೊರತೆ ಇಲ್ಲ' ಎಂದು ಭಾಸವಾಗುತ್ತಿತ್ತು. ಮೇಲೆ ನಿಂತು ನೋಡುವವರಿಗೆ, ಕೆಳಗಿನವರ ದುಃಖದ ಅರಿವು ಹೇಗಾಗಬೇಕು? ಸಾಮಗ್ರಿ ಅಂಗಡಿಯಲ್ಲಿ ಕೊಳೆಯುವಷ್ಟು ಕಿಕ್ಕಿರಿದು; ಬಡವರ ಹೊಟ್ಟೆ

ಮಾತ್ರ ಬರಿದು. ಅವರಿಗೆ ಕೊಂಡುಕೊಳ್ಳುವ ತ್ರಾಣವಿಲ್ಲ. ಕ್ರಾಂತಿಯ ನಂತರ ಕರಿಯ ಬ್ರೆಡ್ಡಾದರೂ ಸಿಗುತ್ತಿತ್ತು. ಆಗ ಕೆಲವರ ಹೊಟ್ಟೆ ಅಜೀರ್ಣದ ಮೂಲಕ ವ್ಯಥೆಪಡುತ್ತಿತ್ತು; ಹಲವರದು ಹಸಿವೆಯ ಮೂಲಕ ಗುರ್ರೆನ್ನುತ್ತಿತ್ತು. ಈಗ ಹಾಗಲ್ಲ. ಎಲ್ಲರಿಗೂ ಕೊಂಚ ಮಟ್ಟಿಗಾದರೂ ದೊರೆಯಬೇಕೆಂದು ಸೀದಾಕ್ರಮ; ಎಲ್ಲರೂ ಕಡಿಮೆ ತಿನ್ನುವುದು; ಕೆಟ್ಟವಿದ್ದರೂ ತಿನ್ನುವುದು. ಎಲ್ಲರಿಗೂ ಸುಖ ದೊರೆಯಲೆಂದು ಎಲ್ಲರೂ ಸಮನಾಗಿ ಕಷ್ಟಬಡುವುದು ಕ್ರಾಂತಿಯಿಂದಾದ ಹಿರಿಗುರುತು.

ಆಹಾರದ ಕೊರತೆ ಹುಟ್ಟುವಳಿಯಲ್ಲಿಯ ಕೊರತೆಯ ಮೂಲಕವಲ್ಲ. ಹುಟ್ಟುವಳಿಯು ಜಾರನ ಕಾಲದಕಿಂತಲೂ ಹೆಚ್ಚಿದೆ.—೨-೩ರಷ್ಟು ಹೆಚ್ಚಿದೆ. ಜಾರನ ಕಾಲದಲ್ಲಿ ಬರಿಹೊಟ್ಟೆಯ ಒಡವರು ಅಸಂಖ್ಯರಾಗಿರುತ್ತಿದ್ದರು. ಅಂತಹರ ಪರಿವೆ ಆಗಿದ್ದಿಲ್ಲ. ಈಗ ಹುಟ್ಟುವಳಿ ಹೆಚ್ಚಿದೆ. ಯಾರೂ ಬರಿಹೊಟ್ಟೆಯಿಂದ ಇರಕೂಡದೆಂದು ಹಂಚುವಿಕೆ. ಎಲ್ಲರಿಗೂ ಹಂಚುವುದರಿಂದ ಕೊರತೆ ಕಂಡುಬರುವುದು. ವ್ಯಕ್ತಿಯ ದೃಷ್ಟಿಯಿಂದ ಕೊರತೆ ಕಂಡರೂ ನಾಡಿನ ಹುಟ್ಟುವಳಿಯು ಹೆಚ್ಚಾಗತೊಡಗಿದೆ. ಪ್ರತಿಯೊಬ್ಬನಿಗೂ ಖಂಡಿತ ಆಹಾರ ಸಿಕ್ಕುವುದು. ಯಾರೂ ಬಿಕ್ಕೆ ಬೇಡುವುದಿಲ್ಲ. ರಸಿಯದಲ್ಲಿ ಇಂದು ಬಿಕ್ಷುಕರು ಇಲ್ಲ. ಎಲ್ಲರೂ ದುಡಿಯಬೇಕು. ತನಗೆ ಬಂದ ರೀತಿಯಲ್ಲಿ ದುಡಿಯಬೇಕು. ಅವನ ದುಡಿವ ಶಕ್ತಿಯನ್ನು ಸರಕಾರವು ಬಳಸಿಕೊಂಡು ಅವನ ಅನ್ನ-ವಸ್ತ್ರದ ಹೊಣೆ ಹೊರುತ್ತಿದೆ.

ಆಗತ್ಯದ ಸಾಮಗ್ರಿಯ ಹುಟ್ಟುವಳಿ ಮೊದಲು. ಚಳಿಗಾಲದಲ್ಲಿ ಪ್ರತಿಯೊಬ್ಬನಿಗೂ ಬೂಟುಗಳು ಆಗತ್ಯವೆನಿಸುವುದು. ಮೊದಲಿಗಿಂತಲೂ ಬೂಟಿನ ಹುಟ್ಟುವಳಿ ಹೆಚ್ಚಿದೆ—ಆದರೆ ಪೇಟೆಯಲ್ಲಿ ಬೂಟುಗಳೇ ಕಾಣುವುದಿಲ್ಲ. ಮಾಯವಾದುವೆ ? ಇಲ್ಲ ರೈತನ ಕಾಲು ನೋಡಿ ! ಅಲ್ಲಿವೆ. ಪೇಟೆಯಲ್ಲಿ ಒಡವೆಗಳು ಇಲ್ಲದುದರಿಂದ ರಸಿಯವು ಒಡವಾಗಿಲ್ಲ. ಒಡವೆಗಳು ಉಪಯೋಗಕ್ಕಾಗಿಯೆ ಇಲ್ಲವೆ? ಬೇಡಿಕೆ ಹೆಚ್ಚಾದ ಮೂಲಕ ಕೊರತೆ ಅನ್ನಿಸುವುದು. ವರುಷ ವರುಷಕ್ಕೆ ಬೇಡಿಕೆಗೆ ತಕ್ಕಂತೆ ಪೂರೈಕೆಯಾಗತೊಡಗಿದೆ.'ಇದನ್ನೆಲ್ಲ ಪೂರೈಸುವವರು ಯಾರು' ಎಂದು ಯಾರನ್ನು ಕೇಳಿದರೂ 'ನಾವೆ ದುಡಿಯುತ್ತೇವಲ್ಲ' ಎಂದು

ಮಾರುತ್ತರ ಬರುವುದು. ತಾವೇ ತಮ್ಮ ಸುಖಕ್ಕಾಗಿ ದುಡಿವಾಗ ಕಷ್ಟವಾದರೂ ಆದಂತಾಗುವುದಿಲ್ಲ. ನೆಮ್ಮದಿಯು ಇರುವುದು.

ಬೇಡುವವರು ಹೆಚ್ಚಾದರೆ ಗದ್ದಲವಾಗುವುದೆಂದು ನಮ್ಮ ಸ್ವಭಾವಕ್ಕೆ ಅನ್ನಿಸಬಹುದು. ಆದರೆ ರಶಿಯದಲ್ಲಿ ಸಾಲುಸಾಲಾಗಿ ನಿಂತು ಸರತಿಯಂತೆ ಪಡೆಯುವ ತಾಳ್ಮೆಯಿದೆ. ಅದು ಅವರಲ್ಲಿಯ ಶಿಸ್ತು. ಎಲ್ಲವೂ ತಮ್ಮದೆ, ಎಂಬ ಭಾವನೆಯು ಈ ಶಿಸ್ತಿನ ಮೂಲದಲ್ಲಿದೆ. ಹುಟ್ಟುವಳಿ ಹೆಚ್ಚುತ್ತಲಿದೆ. ಬೇಡಿಕೆ ಪೂರೈಕೆಯಾಗುತ್ತಲಿದೆ ಕೊರತೆ ಕಡಿಮೆಯಾಗತ್ತಲಿದೆ. ಆತ್ಮೀಯತೆಯು ಅಭಿಮಾನವು ಬೆಳೆಯುತ್ತಲೇ ಇದೆ.

## ಔದ್ಯೋಗಿಕ ಪ್ರಗತಿ

ಯಂತ್ರಾಲಯಗಳು ಬೆಳೆದುವು. ಎರಿವ್ಹಾನ, ಖಾರ್ಖೋವ್, ಒರ್ಡೊಸಿಕೀಜ, ಗ್ರೊಜ್‌ನಿ, ಸೀಪ್ರೊಸ್ರ್ಯಾಯ್, ಲೆಸಿನ್‌ಖಾನ್ ಮತ್ತು ರೊಸ್ಟೊವ್ ಇವು ಔದ್ಯೋಗಿಕ ಕೇಂದ್ರಗಳಾದುವು. ಕೇವಲ ಇಪ್ಪತ್ತು ವರುಷಗಳಲ್ಲಿ ಇಷ್ಟು ದೊಡ್ಡ ಪಟ್ಟಣಗಳು ಹೇಗೆ ಎದ್ದುವು? ಇಷ್ಟು ಔದ್ಯೋಗಿಕ ಕೇಂದ್ರಗಳು ಹೇಗೆ ಉದ್ಭವಿಸಿದುವು. ಇವಕ್ಕೆಲ್ಲ ಉತ್ತರವೆಂದರೆ ರಸಿಯನ್ನರ ಸ್ವಾಭಿಮಾನ–ಸ್ವದೇಶಾಭಿಮಾನ. ತಮ್ಮ ದೇಶದಲ್ಲಿ ಹುಟ್ಟಿದ ಒಡವೆಗಳನ್ನೆ ಕೊಳ್ಳುವುದು. ಈ ಸ್ವದೇಶಿ ವ್ರತದಿಂದ ಅವರು ಇಷ್ಟು ಸಾಧಿಸಿದ್ದಾರೆ. ಮೊದಮೊದಲು ಸ್ವದೇಶಿ ಒಡವೆಗಳು ಚೆನ್ನಾಗಿರುತ್ತಿದ್ದಿಲ್ಲ. ಆದರೂ ಅವುಗಳನ್ನೆ ಬಳಸುತ್ತಿದ್ದರು. ಅವು ತಮ್ಮವೆಂದು (ತಾವೇ ಮಾಡಿದುವೆಂದು, ಕೆಟ್ಟದಿದ್ದರೂ ತಮ್ಮ ಒಡವೆಗಳನ್ನೆ ಉಪಯೋಗಿಸಿ) ಅದು ಏಕೆ ಕೆಟ್ಟಿತೆಂಬುದರ ಕಾರಣ ಹುಡುಕಿ ತೆಗೆದು ಅದನ್ನು ಸರಿಪಡಿಸುವುದು ಪ್ರತಿಯೊಬ್ಬನ ಕರ್ತವ್ಯವೆಂದು ತಿಳಿಯುತ್ತಿದ್ದರು. ಕೆಲವರು, ಚೆನ್ನಾದ ಒಡವೆಗಳನ್ನು ಉಪಯೋಗಿಸಬೇಕೆಂದವರು, ತಮ್ಮ ದೇಶದಲ್ಲಿಯೆ ತಮ್ಮ ಮನಸ್ಸಿಗೆ ಬರುವಂತಹ ಒಡವೆಗಳು ಸಿದ್ಧವಾಗುವ ತನಕ ಆ ಒಡವೆಗಳಿಲ್ಲದೆ ಜೀವನ ಸಾಗಿಸಿದರು. ಸ್ವದೇಶಿ ಪ್ರೋತ್ಸಾಹನದ ಬಗ್ಗೆ ಒಂದೇ ಮಾತು ಹೇಳಿದರೆ ಸಾಕು. ಮುಳ್ಳುಚಮಚೆ (Fork) ಯನ್ನು ಊಟದ ವೇಳೆಯಲ್ಲಿ ಬಳಸುವುದು ರೂಢಿ. ಸ್ವದೇಶಿ ಮುಳ್ಳುಚಮಚೆಗಳು

ಮೊದಲು ಮೊದಲು ಅಷ್ಟು ಸಿಡವು ಇಲ್ಲದುವು ಇದ್ದವು. ಅವು ತಮ್ಮ ಕಾರ್ಯವನ್ನೂ—ಜುಚ್ಚುವಿಕೆಯನ್ನೂ—ಕೂಡ ಮಾಡದವಾಗಿ ದ್ದುವು. ಜುಚ್ಚಲು ಪ್ರಯತ್ನಿಸಿದರೆ, ಜಮಂಚೆಯೆ ಮುದುಡಿ ಬೀಳು ತ್ತಿತ್ತು. ಹೀಗಿದ್ದರೂ ಸ್ವಾಭಿಮಾನದಿಂದ ಅವುಗಳನ್ನು ಬಳಸುತ್ತ ಇಂದು ಎಂಥಹ ಬೇಕಾದಂತಹ ಒಡವೆಗಳನ್ನು ಸಿದ್ಧಪಡಿಸುತ್ತಿದ್ದಾರೆ. ಅವರಷ್ಟು ಸ್ವದೇಶ ಪ್ರೇಮ—ಸ್ವದೇಶಾಭಿಮಾನ—ಸ್ವದೇಶಿ ಒಡವೆಗಳನ್ನು ಬಳ ಸುವುದು ನಮ್ಮಲ್ಲಿ ಬಂದರೆ. . . .

ನವನಾಗರಿಕತೆಯ ಸಾಧನಗಳನ್ನು ಯಂತ್ರಾಲಯಗಳಿಂದ ಸಿದ್ಧ ಪಡಿಸಿದರು. ಜನತೆಗೆಲ್ಲ ಆಹಾರ ಒದಗಿಸುವದಕ್ಕೆ ಸಾಂಘಿಕ ಒಕ್ಕಲು ತನವನ್ನು ರೂಢಿಯಲ್ಲಿ ತಂದರು. ಸಾಂಘಿಕ ಒಕ್ಕಲುತನದಿಂದ ಬಸಿತವು ಕಡಿಮೆಯಾಗಿ ಹೆಚ್ಚು ಬೆಳೆ ಬರತೊಡಗಿತು. ಪ್ರತಿಯೊಂದು ಪ್ರಯೋಗ ದಲ್ಲಿ ಎಡರು ಒರುತ್ತಿದ್ದವು. ಎಡರು ಎರಡು ರೀತಿಯಿಂದ: ಹೊಸದೆಂಬುದು ಒಂದು. ಹೊಸದಕ್ಕೆ ತಕ್ಕ ಕಾರ್ಯಕೌಶಲ್ಯವಿಲ್ಲದಿರುವುದು ಮತ್ತೊಂದು. ಕೌಶಲ್ಯವಿಲ್ಲದಿದ್ದರೂ ಎದೆಗುಂದದೆ ಇದ್ದ ಕೌಶಲ್ಯದಿಂದ ಪ್ರಾರಂಭಮಾಡಿ ಮಾಡುತ್ತ—ಕೌಶಲ್ಯ ಬೆಳೆಸುತ್ತ ಸಾಗುತ್ತಿದ್ದರು. ಯಂತ್ರಯೋಜನೆ ಗಳಿಂದ ಸಾಂಘಿಕ; ಒಕ್ಕಲುತನದಿಂದ ಜೀವನವು ನೆಮ್ಮದಿಯಾಗತೊಡ ಗಿತು. ಜನತೆಯೆಲ್ಲವೂ ದುಡಿಯ ತೊಡಗಿ, ಕಾರ್ಯಭಾರವು ಹಂಚಿ ಹೋಗಿ ನಿರುದ್ಯೋಗವು ನಿರ್ನಾಮವಾಗಿ ಸುಖದಲ್ಲಿ ಪಾಲು ಪಡೆಯ ತೊಡಗಿತು.

## ಕೌಟುಂಬಿಕ ಜೀವನ

ಜೀವನವು ನೆಮ್ಮದಿಯಾಗಲಿಕ್ಕೆ ಕೌಟುಂಬಿಕ ಜೀವನವು ಒಂದು ಬಲ ವಾದ ಕಾರಣ. ರಸಿಯನ್ನರು ಯಾವ ಕ್ಷೇತ್ರವನ್ನೂ ಪ್ರಯೋಗ ಮಾಡದೆ ಬಿಟ್ಟಿಲ್ಲ. ಪ್ರಯೋಗಮಾಡುವ ದೃಷ್ಟಿಕೋನವು–ತಳಹದಿಯು ಸಮತೆ ಯಾರಿಗಿರುವುದರಿಂದ ವಿಷಮತೆ ಇಲ್ಲದಂತಾಗಿ ಪ್ರಯೋಗಗಳು ಹೆಚ್ಚು ಕಡಿಮೆ ಯಶಸ್ವಿಯಾಗಿವೆ. ಕೌಟುಂಬಿಕ ಜೀವನದಲ್ಲಿಯೂ ಪ್ರಯೋಗ ಮಾಡಿದ್ದಾರೆ. ಹೆಣ್ಣು-ಗಂಡುಗಳಲ್ಲಿ ಸಮತೆ. ಕಾರ್ಯಕ್ಕೆ ತಕ್ಕ ಕೂಲಿ;

ಲಿಂಗಭೇದದಿಂದ ಕೂಲಿಭೇದವಿಲ್ಲ. ಎಲ್ಲರೂ ದುಡಿಯಬೇಕು. ದುಡಿವುದರಿಂದ ದುಡ್ಡು ಬರುವುದು. ಗಂಡು ಎಷ್ಟು ಸ್ವಾವಲಂಬಿಯೋ ಹೆಣ್ಣು ಅಷ್ಟೆ ಸ್ವಾವಲಂಬಿ. ಹೆಣ್ಣು ತನ್ನ ಜೀವಿತಕ್ಕಾಗಿ ಗಂಡನನ್ನು ಅವಲಂಬಿಸ ಬೇಕಾಗಿಲ್ಲ. ಹೀಗಿದ್ದು, ಎರಡು ಸ್ವಾವಲಂಬಿ ಜೀವಿಗಳು ಒಂದೆಡೆಗೆ ಸೇರ ಬೇಕಾದರೆ ಆಕರ್ಷಣೆ—ಪ್ರೇಮ ಇಲ್ಲದೆ ಯಾವ ಬಂಧನವು ಸಾಧ್ಯ. ರಸಿಯನ್ನರ ಮದುವೆಗೆ ಪ್ರೇಮವೆ ಬಂಧನ. ಎಂದು ಇಬ್ಬರಲ್ಲಿ ಪ್ರೇಮವು ಹಾರಿ ಹೋಗುವುದೋ ಅಂದು ಅವರಿಬ್ಬರು ಬೇರೆಯಾಗಲು ಸರಕಾರದ ಸಮ್ಮತಿ. ಪ್ರೇಮವೇ ಬಂಧನ—ಪ್ರೇಮವು ಇಲ್ಲದಿರೆ ಬಂಧನವೆಲ್ಲಿ? ಅದೇ ಬಿಡುಗಡೆ.

ಬೇಕಾದಾಗ ಅಂದರೆ—ಬೇಡವಾದಾಗ ಬಿಡುಗಡೆ ಹೊಂದುವುದ ರಿಂದ ಲೈಂಗಿಕ ಅವ್ಯವಸ್ಥೆಗೆ ಕಾರಣವಾಗುವುದೆಂದು ಕೆಲವರಿಗೆ ಹೆದರಿಕೆ. ಆದರೆ ಸ್ವಾತಂತ್ರ್ಯದಿಂದ ಬಿಡುಗಡೆಗಳ ಸಂಖ್ಯೆ ಕಡಿಮೆಯಾಗತೊಡಗಿದೆ. ಹೊಟ್ಟೆಗಾಗಿ ಬಳಲಬೇಕಿಲ್ಲ. ಎಲ್ಲರೂ ದುಡಿಯುವರು. ಸೂಳೆಗಾರಿಕೆ ಮಾಡಬೇಕಿಲ್ಲ. ತಾಯ್ತನವು ಪವಿತ್ರವಾದುದೆಂದು ಸರಕಾರ ಉತ್ತೇಜನ ಕೊಡುತ್ತದೆ. ಮಗುವಿಗೆ ತಂದೆಯ ಉತ್ಪನ್ನದ ೬೦ ದಷ್ಟು ಪೋಷಣೆ ದೊರೆವುದು. ಲೈಂಗಿಕ ಅವ್ಯವಸ್ಥೆಯು ಬಿಡುಗಡೆ ಹೊಂದಿದಾಗ; ಆದರೆ ಮದುವೆಗಳು ಕೇವಲ ಪ್ರೇಮದ ತಳಹದಿಯ ಮೇಲೆ ಆಗುವುವು. ಅಲ್ಲದೆ ಚಿಕ್ಕ ಪುಟ್ಟ ಸೆಣಸಾಟಗಳನ್ನು ಕೂಲಿಕಾರರ ಸಂಘದವರು ತಮ್ಮ ಅಧಿ ಕಾರದಿಂದ ಸರಿಪಡಿಸುವರು. ಹೀಗಾಗಿ ಬಿಡುಗಡೆಗಳ ಸಂಖ್ಯೆ ಕಡಿಮೆ ಯಾಗತೊಡಗಿದೆ. ಅದರಂತೆ ಸೂಳೆಯರ ಸಂಖ್ಯೆ. ಇಂದು ಮಾಸ್ಕೊ ಪಟ್ಟಣದಲ್ಲಿ ನಾಲ್ಕು-ನೂರರಷ್ಟು ಕೂಡ ಸೂಳೆಯರಿಲ್ಲ. ಆದರೆ ಅದೇ ಪಟ್ಟಣದಲ್ಲಿ ಕ್ರಾಂತಿಯ ಮೊದಲು ೨೦,೦೦೦ ಸೂಳೆಯರಿದ್ದರಂತೆ. ಸೂಳೆ ಗಾರಿಕೆಗೆ ಮುಖ್ಯ ಆರ್ಥಿಕ ಅವಲಂಬನ. ಕ್ರಾಂತಿಯ ನಂತರದ ರಸಿಯ ದಲ್ಲಿ ಪ್ರತಿಯೊಬ್ಬರು ಆರ್ಥಿಕ ಸ್ವಾವಲಂಬನ ಪಡೆದುದರಿಂದ ಸೂಳೆಗಾ ರಿಕೆ ಕಡಿಮೆಯಾಗಿದೆ. ಬಿಡುಗಡೆಗಳಿಗೆ ಪರವಾನಗಿ-ಸ್ವಾತಂತ್ರ್ಯವಿದ್ದರೂ ಅವುಗಳ ಸಂಖ್ಯೆಯೂ ಕಡಿಮೆಯಾಗಿದೆ. ಸ್ವಾತಂತ್ರ್ಯದಿಂದ ಸಾಮರ ಸ್ಯವು ಬರತೊಡಗಿದೆ. ಆರ್ಥಿಕ ಸ್ವಾವಲಂಬನವು—ಸಮತೆಯು ಎಂತಹ

ಅದ್ಭುತ ಕಾರ್ಯವನ್ನು ಮಾಡಿದೆ! ಜೀವನವು ನಿಜವಾಗಿಯೂ ಸುಖ ಮಯವಾಗಿದೆ, ರಸಿಯದಲ್ಲಿ.

ಹೆಣ್ಣು ಮಕ್ಕಳು ದುಡಿಯತೊಡಗಿದರೆ ಅವರ ಮಕ್ಕಳ ಪಾಲನ ಪೋಷಣೆ ಯಾರು ಮಾಡಬೇಕು, ಎಂಬುದು ಕೆಲವರ ಪ್ರಶ್ನೆಯಾಗ ಬಹುದು. ಅವರು ದುಡಿವ ಅವಧಿಯಲ್ಲಿ ಸರಕಾರದ ಕ್ರೀಡೆಗಳಲ್ಲಿ ಮಕ್ಕಳು ದಾಯಿಗಳಿಂದ ಆರೈಕೆ ಮಾಡಲ್ಪಡುತ್ತವೆ. ಅಲ್ಲದೆ ಹಾಲುಣಿಸಲು ಆಗಾಗ ತಾಯಂದಿರನ್ನು ಕೆಲಸದಿಂದ ಬಿಡುತ್ತಾರೆ. ಪ್ರಸೂತಿ ಕಾಲದ ಮುಂಚೆ ಎರಡು ತಿಂಗಳು—ನಂತರ ಎರಡು ತಿಂಗಳು ಹೀಗೆ ಸಂಬಳ ಸಹಿತ ರಜೆ ಸಿಗುವುದು. ಯಾವುದಕ್ಕೂ ಕೊರತೆಯಿಲ್ಲ. ದೇಶಕ್ಕಾಗಿ ಎಲ್ಲರೂ ದುಡಿವದರಿಂದ ದೇಶವು ಎಲ್ಲರನ್ನೂ ಎಲ್ಲ ಬಗೆಯಿಂದ ಸುಖದಲ್ಲಿ ಡಲು ಪ್ರಯತ್ನ ಮಾಡುತ್ತದೆ.

### ಸುಖಸಾಮ್ರಾಜ್ಯ

ರಸಿಯವು ಕೂಲಿಕಾರರ ಸುಖಸಾಮ್ರಾಜ್ಯವಾಗುತ್ತಲಿದೆ. ನಿರು ದ್ಯೋಗದ ಸಮಸ್ಯೆ ಅವರನ್ನು ಬಾಧಿಸದು. ದುಡಿಯಲು ಸಾಧ್ಯವಿದ್ದವ ರಿಗೆ ದುಡಿತವಿದೆ. ದುಡಿಯಲು ಆಗದವರಿಗೆ ಹೊಟ್ಟೆಯ ಚಿಂತೆ ಇಲ್ಲ. ಕೂಲಿಕಾರರು ಹೆಚ್ಚುತ್ತಿರುವುದರಿಂದ ಬಿಡುವಿನ ವೇಳೆ ಹೆಚ್ಚಾಗತೊಡ ಗಿದೆ. ಹುಟ್ಟುವಳಿ ಹೆಚ್ಚುತ್ತಿದೆ. ಅದರಿಂದ ಕೂಲಿಯೂ ಹೆಚ್ಚುತ್ತಲಿದೆ. ಕಡಿಮೆ ದುಡಿತ; ಹೆಚ್ಚಿನ ಕೂಲಿ. ದೇಶದಲ್ಲಿ ಭಿಕ್ಷುಕರಿಲ್ಲ; ಸೂಳೆಗಾರಿಕೆ ತೀರ ಕಡಿಮೆ—ಇನ್ನು ಕೆಲವು ದಿನಗಳಿಗೆ—ಸೂಳೆಗಾರಿಕೆಯು ಸುಳಿವು ಕೂಡ ಕಾಣದು. ಸಾರ್ವತ್ರಿಕ ಶಿಕ್ಷಣದಿಂದ ಜನತೆ ಜಾಣವಾಗುತ್ತಿದೆ. ಜೀವನದಲ್ಲಿ ಸೌಕರ್ಯ ಹೆಚ್ಚುತ್ತಿದೆ. ಯಾವುದೆ ನವನಾಗರಿಕತೆಯ ಬೆಡಗು ಬೆಳೆಯುತ್ತಿದೆ. ಎಲ್ಲ ದೃಷ್ಟಿಯಿಂದಲೂ ಸುಖವು ನೆಲೆಗೊಳ್ಳು ತ್ತಲಿದೆ.

ರಸಿಯವನ್ನು ನೋಡಿ ಉಳಿದ ಯಾವದೇ ದೇಶವನ್ನು ನೋಡಿದರೆ ಅದೆಷ್ಟು ಅಂತರ ಕಾಣುವುದು! ಸಮತೆಯ ಮೂಲಕ ಎಲ್ಲಿ ನೋಡಿದಲ್ಲಿ ರಸಿಯದಲ್ಲಿ ಬಾಂಧವ್ಯಭಾವ ಕಾಣುವುದು. ಉಳಿದ ದೇಶಗಳಲ್ಲಿ

ತರಗತಿಯು ತಲೆಯೆತ್ತಿ ತೋರಿಸಿಕೊಳ್ಳುವುದು. ನಿರುದ್ಯೋಗಿಗಳು ದೇಶದಲ್ಲೆಲ್ಲ ಕಾಣುವರು; ಕಲಿತ ನಿರುದ್ಯೋಗಿಗಳ ಸಂಖ್ಯೆ ಹೆಚ್ಚುತ್ತಲಿದೆ. ಅಮೇರಿಕೆಯಲ್ಲಿ ೧ ಕ್ರೋಟಿ ಜನ ನಿರುದ್ಯೋಗಿಗಳಿದ್ದಾರಂತೆ. ರಸಿಯದಲ್ಲಿ ಭಿಕ್ಷುಕರಿಲ್ಲ. ಇಂಗ್ಲಂಡದಲ್ಲಿ ಒಂದು ಪಟ್ಟಣದಲ್ಲಿಯೆ ೫೦೦೦೦ ಭಿಕ್ಷುಕರು. ಬಿಕ್ಕೆ ಬೇಡುವುದು ಕಾನೂನು ವಿರುದ್ಧವಿದೆ. ಆದರೂ ನೋಗಿನಲ್ಲಿ ಬಿಕ್ಕೆ ಬೇಡುವುದು. ಈ ನೋಗು ಸರಕಾರಕ್ಕೆ ತಿಳಿಯದೆಂದಲ್ಲ. ಇದನ್ನೆಲ್ಲ ನೋಡಿ ತಿಳಿದಾಗ ರಸಿಯದಲ್ಲಿ ಬಡವರ ಭಾಗ್ಯವಿಧಾತನು ಉದಯನಾಗಿದ್ದಾನೆಂದು ಅನಿಸುವದು. ರಸಿಯದ ಪ್ರಯೋಗವು ಬಡವರ ಜೀವನ ಸಂಜೀವಿನಿಯಾಗಿದೆ

ಆದರೆ......ಈ ಹೊಸಪ್ರಯೋಗವು ಯಶಸ್ವಿಯಾದುದು ಜಗತ್ತಿನ ಬಹು ಭಾಗದವರಿಗೆ ಮನಸ್ಸಿಗೆ ಬಂದಿಲ್ಲ. ರಸಿಯದವರು ಆ ಮೂಲಕ ಹಗೆಗಳನ್ನು ಎದುರಿಸಬೇಕಾಗಿದೆ. ಹಗೆಗಳು ಇಬ್ಬರು: ಹೊರಗಿನವರು—ಒಳಗಿನವರು. ಈ ಇಬ್ಬರು ಹಗೆಗಳನ್ನು ಹೊಡೆದೋಡಿಸಿ, ತಮ್ಮ ಮಾರ್ಗಕ್ರಮಣ ಮಾಡಬೇಕಾಗಿದೆ ರಸಿಯದವರಿಗೆ. ಸುತ್ತಲಿಂದಲೂ ಒತ್ತಿಬರುವ ಹಗೆಗಳನ್ನು ಹೊಗೆಗೂಡಿಸಿ ತಮ್ಮ ದಾರಿಯನ್ನು ಸುಗಮಮಾಡಿಕೊಂಡಿದ್ದಾರೆ.

## ಹಗೆಗಳು

ಎಲ್ಲ ಬಂಡವಲುಶಾಹಿ ರಾಷ್ಟ್ರಗಳು ರಸಿಯದ ಹೊರಗಿನ ಹಗೆಗಳು. ರಸಿಯದಲ್ಲಿ ಬಂಡವಲುಗಾರಿಕೆ ಕೊನೆಕಂಡಿದೆ. ಅಲ್ಲದೆ ಕೂಲಿಕಾರರ ಸುಖಸಾಮ್ರಾಜ್ಯ ನೆಲಸಿದೆ. ಕೂಲಿಕಾರರ ಏಳ್ಗೆಯನ್ನು ಬಂಡವಲುಗಾರರು ಹೇಗೆ ಸಹಿಸಬಹುದು. ಮೇಲಾಗಿ ಬಂಡುವಲುಗಾರ ದೇಶಗಳಕಿಂತ ಮಾನವೀಯ ಸುಖ ಸೌಕರ್ಯಗಳು ರಸಿಯದಲ್ಲಿ ಹೆಚ್ಚಿವೆ—ಹೆಚ್ಚುತ್ತಲಿವೆ. ರಸಿಯದಲ್ಲಿ ಕೂಲಿಕಾರನಾಗಿರುವುದು ಹೆಮ್ಮೆ. ಈ ಹೆಮ್ಮೆಯನ್ನು ಬಂಡವಲುಗಾರರು ಹೇಗೆ ತಡೆದುಕೊಳ್ಳಬಹುದು. ಅದು ಕಾರಣ ಬಂಡವಲುಗಾರ ರಾಷ್ಟ್ರಗಳೆಲ್ಲ ರಸಿಯದ ವಿರುದ್ಧ ಪ್ರಚಾರ ಮಾಡಲು ಯಾವಾಗಲೂ ಪ್ರಯತ್ನ ಮಾಡುತ್ತವೆ. ಆ ಅಪಪ್ರಚಾರಕ್ಕೆ

ಸೇರಿಳವಾಗಿ ಹಣ ವೆಚ್ಚಮಾಡುತ್ತಿವೆ. ಹೀಗೆ ಹೆರವರ ವಿರುದ್ಧ ಗುಲ್ಲೆಬ್ಬಿ ಸುವುದಕ್ಕೆ ತಮ್ಮ ದೇಶದ ಹಣವನ್ನು ವಿಸಿಯೋಗಿಸುವುದಕ್ಕಿಂತ ತಮ್ಮ ದೇಶದ ಒಡತನ, ನಿರುದ್ಯೋಗ, ಮುಂತಾದ ಸಾಮಾಜಿಕ ಸಮಸ್ಯೆ ಗಳನ್ನು ಬಿಡಿಸುವುದರಲ್ಲಿ ಬಳಸಬಾರದೆ, ಎಂದು ಯಾರಾದರೂ ಬುದ್ಧಿ ಹೇಳಬಹುದು. ಆದರೆ ತಮ್ಮ ಮೈಯಲ್ಲಿ ಮಾತ್ರ ಕೊಬ್ಬು ಬೆಳೆಯುವಂತೆ ನೋಡಿಕೊಳ್ಳಬೇಕಾದರೆ ತಾವು ಹೆಚ್ಚು ತಿನ್ನುವುದು ಇಷ್ಟೇ ಕರ್ತವ್ಯ ವಲ್ಲ; ಹೆರವರಿಗೆ ಸಿಗದಂತೆ ಮಾಡುವುದೂ ಕರ್ತವ್ಯವೆನ್ನಿಸುವುದು. ಅಯ್ಯೋ, ಒಬ್ಬು ಬೆಳಿಸುವ ಮೋಹವೆ! ತಿನ್ನಲಾಗದುದನ್ನು ಹೆರವರಿಗೆ ಕೊಡುವ ಔದಾರ್ಯವಿಲ್ಲವೆ? ಇದೆಂತಹ ನಾಗರಿಕತೆ! ಈ ಬಂಡವಲು ಗಾರರ ಅನ್ಯಾಯ ಇನ್ನು ಬಹಳ ದಿನ ಬಾಳುವಂತಿಲ್ಲ. ನಾಗರಿಕತೆಯ ಸೋಗಿನಲ್ಲಿ ಕೇವಲ ಅನಾಗರಿಕ ವರ್ತನವನ್ನು ನಡೆಯಿಸುವುದು ಇನ್ನು ನಡೆಯದು. ನಡೆಯದೆಂಬುದಕ್ಕೆ ರಸಿಯದ ಪ್ರಯೋಗನೇ ಸಾಕ್ಷಿ; ರಸಿ ಯದ ಇಂದಿನ ಯುದ್ಧದಲ್ಲಿಯ ವಿಜಯವೆ ಸಾಕ್ಷಿ.

ಆಂತರಿಕ ಒಗ್ಗಟ್ಟು ಇದ್ದಾಗ ಹೆರವರು—ಅದೂ ಹೊರಗಿನವರು ಎಷ್ಟು ಗುಲ್ಲೆಬ್ಬಿಸಿದರೆ ಧಕ್ಕೆ ತಗಲಬಹುದು? ಹೊರಗಿನ ದೆವ್ವ ಒಳಕ್ಕೆ ಬರದಂತೆ ಮಾಡುವುದೂ ಕರ್ತವ್ಯವೆ. ಆದರೆ ಅದಕ್ಕೂ ಮೊದಲು ಒಳ ಗಿನ-ಹಗೆಗಳನ್ನು ನಿರ್ಮೂಲನ ಮಾಡುವುದು ಜಾಣತನದ ಲಕ್ಷಣ. ಮನೆಯು ಗಟ್ಟಿಯಾಗಿ ನಿಲ್ಲಬೇಕಾದರೆ ತಳಸೋಸಿ ಕಟ್ಟಬೇಕು. ರಸಿಯ ದವರು ಹಾಗೆಯೆ ಮಾಡಿದ್ದಾರೆ. ತಮ್ಮ ದೇಶದ ಹಿತದ ಬದಲು ತನ್ನ ವೈಯಕ್ತಿಕ ಹಿತದ ಕಡೆಗೆ ಯಾವನು ಲಕ್ಷ್ಯಹಾಕುವನೋ ತನ್ನ ಮಾತು ಮೇಲೆಂದು ತೋರುವುದಕ್ಕೆ ದೇಶದಲ್ಲಿಯ ಒಗ್ಗಟ್ಟನ್ನು ಒಡೆ ಯಲು ಪ್ರಯತ್ನಿಸುವನೋ ಅವನು ದೇಶದ್ರೋಹಿ ಎಂದು ರಸಿಯನ್ನರ ಮತ. ಸಮಾಜದ ಸುಖಶಾಂತಿಗಳಿಗಾಗಿ ತನ್ನ ವೈಯಕ್ತಿಕ ಸುಖ-ಸ್ವಾತಂತ್ರ್ಯದ ಕೆಲಭಾಗವನ್ನು ಮುಡಿಪಾಗಿ ಕೊಡಲೇ ಬೇಕು. ಅದುವೆ ಸಮಾಜಸುಖ-ಸ್ವಾತಂತ್ರ್ಯದ ಮೂಲಧನ. ಮೂಲಧನಕ್ಕೆ ಕೈ ಹಚ್ಚಿ ದವರು ದೇಶದ್ರೋಹಿಗಳಲ್ಲವೆ? ಅಂತಹರಿಗೆ ರಸಿಯದಲ್ಲಿ ಸ್ಥಾನವಿಲ್ಲ. ಅಂತ ಹರನ್ನು ಕಂಡರೆ ಹುಚ್ಚನಾಯಿಯನ್ನು ಬೆನ್ನಟ್ಟಿದಂತೆ ರಸಿಯನ್ನರು

ಬೆನ್ನಟ್ಟುವರು—ಸೆದೆಬಡೆಯುವರು. (ಹುಚ್ಚನಾಯಿಯ ಕಚ್ಚು) ಸಂಜು ತರುವುದು; ಅದನ್ನು ಕೊಲ್ಲದೆ ಗತ್ಯಂತರವಿಲ್ಲ. ಇದೇ ರಸಿಯನ್ನರ ವಿಧಾನ ಈ ವಿಧಾನವನ್ನನುಸರಿಸಿ, ದೇಶದ್ರೋಹಿಗಳನ್ನು ಬೆಂಬತ್ತಿ, ಬೇರ್ಕಿತ್ತಿ ಒಗೆದಿದ್ದಾರೆ. ಹೀಗೆ ಬೇರ್ಕಿತ್ತಿ ಒಗೆಯುವದರಲ್ಲಿ ಅವರಿಗೆ ಅಸಡ್ಡೆ ಯಿಲ್ಲ; ಸಂಕೋಚವಿಲ್ಲ. ತಮ್ಮ ಕರ್ತವ್ಯಮಾಡುವಾಗಿನಷ್ಟು ಸ್ಫೂರ್ತಿ ಇರುವುದು.

ಈ ದೇಶದ್ರೋಹಿಗಳನ್ನು ನಿರ್ಣಯಿಸುವವರು ಯಾರು? ದೇಶದ ವರೆ. ದೇಶದ ಜನತೆಯು ಆ ವ್ಯಕ್ತಿಯ ಕಾರ್ಯವನ್ನು ಸೂಕ್ಷ್ಮವಾಗಿ ಪರಿಶೀಲಿಸುವುದು. ಅವನ ಕಾರ್ಯವು ಕೇವಲ ವ್ಯಕ್ತಿಯ ಹೆಗ್ಗಳಿಕೆಯನ್ನು ಹೆಚ್ಚಿಸಿಕೆಯಲ್ಲಿ ಪರಿಣಮಿಸುತ್ತಿದ್ದರೆ, ಅದು ದೇಶದ್ರೋಹದ ಲಕ್ಷಣ. ಕಾರಣ, ತಾನೊಬ್ಬನೆ ಮೇಲೆ ಬರಬೇಕೆಂಬುದು ಅವನ ಮನೀಷೆ ಇದ್ದಂತೆ ತೋರುವದು. ಇದು ಮಾನಸಿಕ ಬಂಡವಲುಗಾರತನವೆಂದು ಅವನನ್ನು ದೇಶದ್ರೋಹಿ, ಎಂದು ನಿರ್ಣಯಿಸುವರು. ಅಂತಹರು ಬದುಕಿ ಬಾಳುವುದ ರಿಂದ ದೇಶದ ಬಹು ಸಂಖ್ಯಾಕ ಜನರ ಸುಖಗಳಿಗೆ ಅಡ್ಡಿಯಾಗುವುದರಿಂದ ಅವರು ಬದುಕುವುದಕ್ಕಿಂತ ಸಾಯುವುದೇ ಲೇಸೆಂದು ನಿರ್ಣಯಿಸಿ ಅವ ರನ್ನು ದಂಡಿಸುವರು.

ಹೀಗೆ ಮರಣದಂಡನೆಯನ್ನು ಪಡೆದ ಜನತೆಯ ಬಗೆಗೆ ಹೊರಗಿ ನವರು—ರಸಿಯದ ಹೊರಗಿನವರು—ಹೆಚ್ಚು ಗುಲ್ಲೆಬ್ಬಿಸುವರು. ಹಾಗೆ ಗುಲ್ಲೆಬ್ಬಿಸುವುದರಲ್ಲಿ ಅವರ ಸ್ವಾರ್ಥವಿದೆ. ರಸಿಯದ ಬಗ್ಗೆ ಜನರಲ್ಲಿ ಭಯಂಕರ ಭಾವನೆಗಳು ಹುಟ್ಟಬೇಕೆಂದು ಅವರ ಮನೀಷೆ. ರಸಿಯದ ಪ್ರಯೋಗವು ಯಶಸ್ವಿಯಲ್ಲವೆಂದು ಜನತೆಯಲ್ಲಿ ಹರಡಬೇಕೆಂಬ ಅಭಿ ಲಾಷೆ. ಕೂಲಿಕಾರರ ಸಾಮ್ರಾಜ್ಯ ನೆಲಸುವುದರಿಂದ ವ್ಯಕ್ತಿ ಸ್ವಾತಂ ತ್ರ್ಯವು ಸಾಯುವುದೆಂದು ಬೊಬ್ಬಾಟಮಾಡುವರು. ಆದರೆ ಬಹು ಸಂಖ್ಯಾಕರ ಹಿತನೋಡುವಾಗ ಕೆಲ ಜನರ ಅಹಿತವಾದರೆ ತಪ್ಪಲ್ಲ. ಈ ಕೆಲ ಜನರಾದರೂ ದೇಶದ್ರೋಹ ಮಾಡಿದವರು. ದೇಶದ್ರೋಹ ಮಾಡಿ ದವರಿಗೆ ಬಂಡವಲುಗಾರ ದೇಶದಲ್ಲಿ ಶಿಕ್ಷೆಯಿಲ್ಲವೆ? ಹೀಗಿದ್ದು ರಸಿಯ ದಲ್ಲಿಯ ಶಿಕ್ಷೆಯ ಬಗ್ಗೆ ಇಷ್ಟೊಂದು ಏಕೆ ಗುಲ್ಲು? ಅದೂ ಸಂಖ್ಯೆಯ

ಪ್ರಮಾಣವನ್ನು ನೋಡಿದರೆ ತಿಳಿವುದು, ಆ ಗುಲ್ಲಿನಲ್ಲಿ ಅರ್ಥವಿಲ್ಲವೆಂದು. ೧೮೦ ಮಿಲಿಯ ಜನತೆಯುಳ್ಳ ದೇಶದಲ್ಲಿ ೨—೩ ಸಾವಿರ ಜನರನ್ನು ಶಿಕ್ಷೆಗೆ ಗುರಿಮಾಡಿದರೆ—ಅದೂ ದೇಶದ್ರೋಹದ ಆಪಾದನೆಯ ಮೇಲೆ—ಏನು ಪ್ರಮಾದವು? ಈ ಎರಡು ಮೂರುಸಾವಿರ ಜನರಾದರೂ ಜನಸಾಮಾನ್ಯರಲ್ಲಿಯವರಲ್ಲ; ಅಧಿಕಾರಿ ವರ್ಗದವರು. ಈ ಅಧಿಕಾರ ವರ್ಗದವರು ತಮ್ಮ ಅಧಿಕಾರವನ್ನು ದುರುಪಯೋಗ ಮಾಡಿದವರು. ಇಂತಹರನ್ನು ಬಯಲಿಗೆಳೆಯುವ ಕೆಲಸ ಮಾಡುವುದೆ ರಶಿಯನ್ ಗುಪ್ತಚಾರ ಸಂಸ್ಥೆಯ—ಆಗ್ಪುಗಳ—ಕಾರ್ಯ.

ರಸಿಯದ ಘಟನೆ

ಇದು ರಸಿಯವು ಮಾಡಿದ-ಮಾಡುತ್ತಲಿರುವ ಕಾರ್ಯ. ಈ ಕಾರ್ಯಕ್ಕೆ ತಳಹದಿಯಂತಿದ್ದ ರಸಿಯದ ಘಟನೆ-ಆಡಳಿತವನ್ನು ತಿಳಿಯ ಬೇಕು.

೧. ಯು. ಎಸ್. ಎಸ್. ಆರ್. (Union of Soviet Socialist Republics) ವು ಕೂಲಿಕಾರ ಮತ್ತು ರೈತರ ಸಮತಾವಾದಿ ರಾಷ್ಟ್ರವು.

೨. ಎಲ್ಲ ಅಧಿಕಾರವು ಹಳ್ಳಿ-ಪಟ್ಟಣಗಳಲ್ಲಿ ದುಡಿಯುವವರದು. ಅವರು ತಮ್ಮ ಪ್ರತಿನಿಧಿಗಳ ಮೂಲಕ ಅಧಿಕಾರವನ್ನು ನಡೆಯಿಸುವರು.

೩. ಹುಟ್ಟುವಳಿಯು ಸರಕಾರದ ಸ್ವಾಧೀನ. ಸೊತ್ತು ಮಾಡಿಕೊಳ್ಳುವಂತಿಲ್ಲ ಎಲ್ಲ ಸಾಧನ-ಸಾಮಗ್ರಿ ಸರಕಾರದವು. ಒಬ್ಬನನ್ನು ಮತ್ತೊಬ್ಬನು ತನ್ನ ಹಿತಕ್ಕಾಗಿ ದುಡಿಸಿಕೊಳ್ಳುವಂತಿಲ್ಲ.

೪. ದೇಶದ ಆಸ್ತಿಯು ಸರಕಾರದ ವಶಕ್ಕೆ ಇರುವುದು. ಕೆಲ ಭಾಗವು ಸಹಕಾರಿ ಸಂಘಗಳಿಗೆ ಸೇರಿದೆ. ವೈಯಕ್ತಿಕ ಆಸ್ತಿಯಿಲ್ಲ.

೫. ದೇಶದ ಆರ್ಥಿಕ ಜೀವನವು ಸರಕಾರದ ಗತ್ತುಗಾರಿಕೆಯಂತೆ ಸಾಗತಕ್ಕುದು. ಆ ಗತ್ತುಗಾರಿಕೆಯು ದೇಶದ ಸಂಪತ್ತನ್ನು ಬೆಳೆಸುವಂತಿರಬೇಕು ಕೂಲಿಕಾರರ ಜೀವನದ ಮಟ್ಟನ್ನು ಮೇಲೇರಿಸುವಂತಿರಬೇಕು.

೬. ದುಡಿಯಲು ಶಕ್ತಿ ಇದ್ದವನು ದುಡಿಯಲೇಬೇಕು.

'ದುಡಿಯದವನು ತಿನ್ನಲಾರ;' 'ಶಕ್ತಿಗೆ ತಕ್ಕಂತೆ ಕೂಲಿ'ಯ ತತ್ವದಿಂದ 'ಕೆಲಸಕ್ಕೆ ತಕ್ಕಂತೆ ಕೂಲಿ' ಯ ತತ್ವಕ್ಕೆ ಬಂದಿದ್ದಾರೆ.

೭. ಇಡಿ ರಾಷ್ಟ್ರದಲ್ಲಿ ಹನ್ನೊಂದು ಸೋವಿಯಟ್ಟುಗಳು ಇವೆ.

(೧) ರಸಿಯನ್ ಸೋವಿಯಟ್ (೨) ಯುಕ್ರೇನಿಯನ್ ಸೋವಿಯಟ್
(೩) ಬಿಳಿರಸಿಯನ್ ಸೋವಿಯಟ್ (೪) ಆಜರಬಾಯಿಯನ್ ಸೋವಿಯಟ್
(೫) ಜಾರ್ಜಿಯನ್ ಸೋವಿಯಟ್ (೬) ಆರ್ಮೇನಿಯನ್ ಸೋವಿಯಟ್
(೭) ಟರ್ಕಮೇನಿಯನ್ ,, (೮) ಉಜ್‌ಬೇಕ್ ಸೋವಿಯಟ್
(೯) ತಾಯೀಕ ಸೋವಿಯಟ್ (೧೦) ಕಜಾಖ ಸೋವಿಯಟ್
(೧೧) ಕಿರಗೀಜ. ಸೋವಿಯಟ್

ಇವೆಲ್ಲ ರಸಿಯದ ಬೇರೆ ಬೇರೆ ಪ್ರಾಂತಗಳು. ಅವುಗಳ ಆಡಳಿತ ಬೇರೆ. ಇವೆಲ್ಲವೂ ರಸಿಯದ ಸಂಯುಕ್ತ ಘಟನೆಯಲ್ಲಿ ಸೇರಿವೆ. ತಮ್ಮ ಪ್ರಾಂತದ ಮಟ್ಟಿಗೆ ಸ್ವತಂತ್ರವಾಗಿವೆ. ಇಡಿ ದೇಶದ ಪ್ರಶ್ನೆ ಬಂದಾಗ ಎಲ್ಲರ ಮತ ತೆಗೆದುಕೊಳ್ಳಲಾಗುವುದು.

೮. ಒಂದು ಪ್ರಾಂತದ ನಾಗರಿಕನು ಇಡಿ ದೇಶದ ನಾಗರಿಕನು.

ಆಡಳಿತ

೯. ಇಡಿ ದೇಶದ ಆಡಳಿತವೆಲ್ಲ 'ಸುಪ್ರೀಮ ಕೌನ್ಸಿಲ್'ದ ಅಧಿಕಾರಕ್ಕೆ ಇದೆ. ಅದರಲ್ಲಿ ಎರಡು ಭಾಗ: ಸಂಘ ಕೌನ್ಸಿಲ್ (Council of the Union) ಜನಾಂಗಗಳ ಕೌನ್ಸಿಲ್ (Council of Nationalities) ಮೊದಲನೆಯದರ ಸದಸ್ಯರು ೩,೦೦,೦೦೦ ಜನತೆಗೆ ಒಬ್ಬನಂತೆ ಆರಿಸಲ್ಪಟ್ಟಿರುತ್ತಾರೆ. ಎರಡನೆಯದರ ಸದಸ್ಯರು ತಮ್ಮ ಪ್ರಾಂತೀಯ 'ಸುಪ್ರೀಮ ಕೌನ್ಸಿಲ್'ದಿಂದ ನಿಯಮಿಸಲ್ಪಟ್ಟಿರುತ್ತಾರೆ.

೧೦. ರಸಿಯದ ಸುಪ್ರೀಮ ಕೌನ್ಸಿಲ್‌ದ ಅವಧಿ ನಾಲ್ಕು ವರುಷ. ಎರಡೂ ಕೌನ್ಸಿಲ್ಲುಗಳಿಗೆ ಸಮಾನ ಅಧಿಕಾರ. ಎರಡೂ ಮಂಡಲಗಳಲ್ಲಿ ಬಹುಮತದಿಂದ ಗೊತ್ತಾದ ಗೊತ್ತುವಳಿಯು ಕಾನೂನು ಆಗುವದು. ಒಂದು ವೇಳೆ ಎರಡೂ ಮಂಡಲಗಳಲ್ಲಿ ಭಿನ್ನಾಭಿಪ್ರಾಯವಾದರೆ ಸಮಾನ ಪ್ರಾತಿನಿಧ್ಯವುಳ್ಳ ಒಂದು ಸಾಮಾನ್ಯ ಸಮಿತಿಯನ್ನು ನಿಯಮಿಸಿ ನಿರ್ಣಯ

ಪಡೆವುದು. ಅಲ್ಲಿಯೂ ನಿರ್ಣಯವಾಗದಿದ್ದರೆ ಅದೆ ಪ್ರಶ್ನೆಯನ್ನು ಮತ್ತೊಮ್ಮೆ ವಿಚಾರಿಸಲು ಆ ಎರಡು ಮಂಡಲಗಳಿಗೆ ತಿರುಗಿ ಕಳಿಸಲಾಗುವುದು. ಆಗ್ಗಿಯೂ ಒಮ್ಮತವಾಗದಿದ್ದರೆ ಮಂಡಲಗಳನ್ನು ಮುರಿವುದು; ಹೊಸ ಚುನಾವಣೆಯಾಗುವುದು.

೧೧ ದೇಶದ ಆಡಳಿಕೆಗಾಗಿ (Council of People's Commissars) 'ಜನತೆಯ ಪ್ರತಿನಿಧಿ ಮಂಡಲ'ವೆಂದು ಇರುತ್ತದೆ. ಇದು ಸುಪ್ರೀಮ ಕೌನ್ಸಿಲಕ್ಕೆ ಹೊಣೆ. ಈ ಮಂಡಲವು ಕಾರ್ಯಾನುಕೂಲತೆಗಾಗಿ ಆಜ್ಞೆಗಳನ್ನು ಕಳಿಸುವುದು. ಈ ಮಂಡಲದಲ್ಲಿ ಅಧ್ಯಕ್ಷ ಉಪಾಧ್ಯಕ್ಷ ಮುಂತಾಗಿಯಲ್ಲದೆ ಪ್ರತಿಯೊಂದು ಶಾಖೆಗೆ ಹಿರಿಯನೊಬ್ಬನಿರುತ್ತಾನೆ. ಶಿಕ್ಷಣ—ಗಸ್ತುಗಾರಿಕೆ—ನಿಯಂತ್ರಣ—ಕಲೆ—ಒಕ್ಕಲುತನ, ಇವೆ ಆ ಶಾಖೆಗಳು.

೧೨. ಇವಲ್ಲದೆ ಪ್ರಾಂತೀಯ—ಸ್ಥಳೀಯ ಮಂಡಲಗಳು, ಉಪಮಂಡಲಗಳು ಕಾರ್ಯ ಮಾಡುತ್ತಿವೆ.

ಈ ಘಟನೆ — ಆಡಳಿತ ನೋಡಿದರೆ ಜನಮತಕ್ಕೆ ಜನಹಿತಕ್ಕೆ ಪ್ರಾಧಾನ್ಯವೆಂದು ತಿಳಿದು ಬರುತ್ತದೆ

## ಉತ್ತರ

ಇಷ್ಟೆಲ್ಲ ಪರಿಶೀಲಿಸಿದ ಮೇಲೆ ಇಂದು ರಸಿಯವು ರಣಾಂಗದಲ್ಲಿ ಜಯಶಾಲಿಯಾಗಿ ನಿಂತ ಕಾರಣವೇನೆಂದು ಪ್ರಶ್ನೆಗೆ ಉತ್ತರವು ಸರಳವಾಗುವುದಿಲ್ಲವೆ! ಇಡಿ ದೇಶವನ್ನು ಜನರೆ ಕಟ್ಟಿದ್ದಾರೆ. ತಮ್ಮ ನೆತ್ತರ ಸುರಿದಿದ್ದಾರೆ; ಕರಳು ಬೇಯಿಸಿದ್ದಾರೆ. ಹೀಗೆ ತಮ್ಮ ಜೀವನರಸವನ್ನು ಧಾರೆಯೆರೆದ ಜನತೆಗೆ ಪರಕೀಯರ ಪಾದಾಕ್ರಾಂತವಾಗುವುದು ಸಹಿಸಿಕೊಳ್ಳಲು ಸಾಧ್ಯವೆ? ೨೫ ವರುಷಗಳಲ್ಲಿ ಕಟ್ಟಿದುದನ್ನು ಕುಸಿಯಗೊಡುವುದೆ? ರಸಿಯನ್ನರ ಸ್ವಾತಂತ್ರ್ಯ ಹೋದರೆ ಇಂದು ಎಲ್ಲವೂ—ಕಟ್ಟಿದ ಗೋಪುರವೂ—ಹೋಗುವುದೆಂದು ಅವರು ದೃಢವಾದ ನಂಬುಗೆಯುಳ್ಳವರಾಗಿದ್ದಾರೆ. ಜೀವಿಸಬೇಕಾದರೆ ಜೀವ ಕೊಡಬೇಕು. ಜೀವ ಕೊಟ್ಟು ಜೀವ ಪಡೆಯಬೇಕು. ಜೀವದಿಂದಲೆ ಜೀವ, ಎಂಬುದು ಪ್ರತಿಯೊಬ್ಬನ

ಅಂತರಾಳದಲ್ಲಿ ಮೊಳಗುತ್ತಿರುವ ಭೇರಿ. ರಸಿಯದಲ್ಲಿಯ ಸೈನ್ಯಸಂಖ್ಯೆ ಎಷ್ಟು, ಎಂದು ಕೇಳುವಿರಾ? ಪ್ರತಿಯೊಂದು ಜೀವಿಯೂ ಸೈನಿಕ. ಯುದ್ಧಸಾಮಗ್ರಿ ಎಷ್ಟಿದೆ, ಎಂದು ಕೇಳಬಹುದೆ? ಬೇಕಾದಷ್ಟಿದೆ—ಬೇಕಾದಷ್ಟು ಸಿಕ್ಕಲೂ ಬಹುದು. ಕೇವಲ ಸೈನ್ಯ-ಸಾಮಗ್ರಿ ಮುಖ್ಯವಲ್ಲವೆಂಬುದು, ಸಾಮ್ರಾಜ್ಯಗಳು ಬುಡಮೇಲಾಗುವ ಇಂದಿನ ಯುದ್ಧವೆ ಸಿದ್ಧಮಾಡಿದೆ. ಯುದ್ಧಕ್ಕೆ ಸೈನ್ಯಬೇಕು-ಸಾಮಗ್ರಿಬೇಕು. ನಿಜ. ಆದರೆ, ಅವುಗಳನ್ನು ಎದೆಗಾರಿಕೆಯಿಂದ ಉಪಯೋಗಮಾಡುವ ಗಂಡಸುತನ ಬೇಕು; ನೈತಿಕ ಬಲಬೇಕು, ಎಂಬುದನ್ನು ಮರೆಯಲಾಗದು. (ಒಳಗೆ ಹುಮ್ಮಸ್ಸು ಇಲ್ಲದಿದ್ದರೆ ಸೈನ್ಯ-ಸಾಮಗ್ರಿಗಳು ಕೇವಲ ಕಾಲ್ತೊಡಕು, ಎಂಬುದನ್ನು ಫ್ರಾನ್ಸದ ಪತನದಿಂದ ಕಂಡಿದ್ದೇವೆ.) ದೇಶಕ್ಕಾಗಿ ಆತ್ಮಾರ್ಪಣೆ ಮಾಡುವ ಹುರುಪು-ಹುಮ್ಮಸ್ಸು ರಸಿಯದಲ್ಲಿದೆ. ಅದು ಕೇವಲ ಉದ್ರಿಕ್ತವಾದ ಉತ್ಸಾಹವಲ್ಲ; ಸಾಧನಗೈದ ಸಂಪತ್ತು. ಅದೆ ಇಂದಿನ ರಸಿಯದ ಯುದ್ಧದ—ತಾಳ್ಮೆಯಿಂದ ತಡೆದುಕೊಂಡು ತಿರುಗಿಬಿದ್ದು ತೆರೆಯುತ್ತಿದ್ದುದರ-ತಿರುಳು—ಜೀವಾಳ.

---